ಕೋಡುಂಗಲ್ಗಳ ಮೇಲೆ
ರ್ದೀಡಿಸುವುವು ಸಿಂಹ ಶರಭ ಶಾರ್ದೂಲ ಮೃಗ
ಕ್ರೀಡೆಗಳಂ ಕೋಡಗಗಳ್
ಕಾಡುವವೊಲ್ ದುರ್ಗಬಲರೊಳಧಿಕನೆಯಧಮಂ ೩೪

ಪೂಗೊಯ್ವ ಖಚರಿ ಶಿಖರದ
ಪೂಗಿಡುಗಳ ಕೊಂಬಿನಲ್ಲಿ ತೊಡರ್ದಿರೆ ಮೀನ್ಗಳ್
ಪೂಗೆತ್ತು ತುಡುಂಕುವಳೆನ
ಲಾ ಗಿರಿಯುನ್ನತಮನಿನ್ನದೇನಂ ಪೊಗಟ್ವೆಂ ೩೫
(ಸೂಕ್ತಿಸುಧಾರ್ಣವಂ, ೩–೧೬, ಲೀಲಾವತಿ, ೯–೩೮)

ಪವಿಯ ಮುಖಘಾತದಿಂ ಡೋ
ಣಿವೋದ ಪಟಿತವುಣ್ಗೆ ಜಿಗುಳೆಯಂ ಬಿಟ್ಟವೊಲಿ
ಪ್ಪ[1]ವು ಧಾತು[1]ಗಹ್ವರಾಂತ
ರ್ನಿವಿಷ್ಟಜರದಜಗರಂಗಳಾ ಗಿರಿವರದೊಳ್ ೩೬
(ಸೂಕ್ತಿಸುಧಾರ್ಣವಂ, ೩–೮೦)

ಗಿರಿಯೊಂದಂತರದಲ್ಲಿಯು
ತರುವಿನ ನಡುವಣ್ಗೆ ನಡೆದ ಶಾಖಾಗ್ರದ ಕೆಳ
ಗಿರೆ ಧ್ರುವನರಮನೆಯೆನೆ ಹ
ಸರಳಿಸಿದಾ ಗಿರಿಯ ತುದಿಯನಾವಂ ಬಲ್ಲಂ ೩೭

ನಸುಸೊಕ್ಕಿ ಪಾಡಿ ಕಿನ್ನರಿ
ರಸವೊಸರ್ವಿನವೊಸರ್ವ ಬೆರಲ ಬೆಮರ್ವನಿಯಿಂ ತ
ಣ್ಣಸಗೊಂಡ ತಂತಿಗಳನಾ
ಱಸುವರ್ ಬಿಸುಸುಯ್ಲ್ದು ಕಿನ್ನರರ್ ಬೀಣೆಗಳಂ ೩೮
(ಸೂಕ್ತಿಸುಧಾರ್ಣವಂ, ೩–೨೧೮; ಲೀಲಾವತಿ, ೯–೫೧)

ಪರಿಭಾವಿಸೆ ತಮ್ಮನೆ ಕಿ
ನ್ನರಿಗಳ ದನಿ ಮೂಗುವಟ್ಟ ಕೋಗಿಲೆ ಮಧು ಚೂ
ತರಸಾಸ್ವಾದಿನ ಮದದಿಂ
ಕರೆವುವು ಕಡುಸೊಕ್ಕಿದರ್ಗೆ ಲಜ್ಜೆಗಳೊಳವೇ ೩೯

---

೧ ವುದಾರ (ಸೂ)

ನೋೞ್ಪರ ಕಣ್ಗಚ್ಚರಿಯಂ
ಮಾೞ್ಪವೊಲಾಗಸಮುನ[1]ಲೆ[1]ವ ಕೋಡುಂಗಲ್ಲಂ
ನೀೞ್ಪಂ ತಳೆದಾ ಬೆ[2]ಟ್ಟಂ
ಕಾೞ್ಪುರವಾಗೊಪ್ಪಿದತ್ತು ಕಡುನಿಡಿದಿಂದಂ[2] ೪೦

(ಕಬ್ಬಿಗರಕಾವಂ, ೨೩೭)

ಹರಿಸದೆ ಕೂಡುವ ಬಿಜ್ಜೋ
ದರಿಯರ ಕೊರಳುಲಿಗಳಿಂದಲಂತಾವೆಟ್ಟುಂ
ಬಿರಯಿಗಳ ಮೊತ್ತಮುಂ ಚ
ಪ್ಪರಿಪಂತಿ[3]ರಲೊಪ್ಪಿದತ್ತು ನೋೞ್ಪರ ಕಣ್ಗಂ[3] ೪೧

ಕಟ್ಟಿದ ಜಂತಿಯುಂ ಮಿಡಿದು ಗೊಂದಣದಿಂದಲಿಹಂತನೀಳೆಯುಂ (?)
ನೆಟ್ಟನೆ ಪಾಡಿ ಸೋಲಿಸುವ ಸಗ್ಗದ ವೆಂಡಿರ ನುಣ್ಚರಕ್ಕೆ ಮೆ
ಯ್ಗೊಟ್ಟೆಳೆಹುಲ್ಲೆಗಳ್ ಪಲವುಮಾಲಿಸೆ ಮೈಸಿರಿವೆರ್ಚುತೞ್ಕಿಱುಂ
ಬೆಟ್ಟುಮದೊಂದು ದಿಟ್ಟಿಗೆಡೆಯಾದುದು ನೋೞ್ಪೊಡೆ ಚೆಲ್ವಿನೇೞ್ಗೆಯಿಂ ೪೨

ಬಿಡದೆಸೆಪಲರಿಂದಂ ಪೊಣ್ಮುತಿರ್ಪಚ್ಚಗಂಪಂ
ಬಿಡದಲರ್ಗಳ ಜೊಂಪಂ ಜೋಲ್ದು ಚೆಲ್ವಾಗೆ ಬಿಣ್ಪಂ
ಬಿಡದ ಮರಗಳಿಂದಂ ಬೆಳ್ಳಿವೆಟ್ಟಕ್ಕೆ ನಿಚ್ಚಂ
ಪಡಿಯೆನಿಸುವುವೆತ್ತಂ ರಂಗುಗಲ್ಲೆಂಬ ಬೆಟ್ಟಂ ೪೩

ಸವಿಸವನಾಗೆ ಸುತ್ತಿಱಿದ ತೋಳ್ ಸತಮಾದೆರ್ದೆಯುಂ ಪಲಂಪಸ
ಪ್ಪುವ ಬಗೆ ಬೀಗಿ ಬಾಯೊಳಗೆ ಸಿಲ್ಕಿದ ಬಾಯ್ ಜೆಱಿಗಾದ ಬೇರ್ಗೆ ಸೋ
ಡುವ ಜವಮ್ಪೋಡಿದಚ್ಚರತದಚ್ಚುಡಿದಂತಿರೆ[4]ದಿವ್ಯ[4]ಸೌಖ್ಯದಿಂ
ಸವೆದವೊಲಿರ್ಪರಲ್ಲಿ ಗಗನೇಚರದಂಪತಿಗಳ್ ರತಾಂತದೊಳ್ ೪೪

(ಲೀಲಾವತಿ, ೯–೪೬)

---

೧ ಣೆ (ಅ) ೨ ಟ್ಟಿದ ತಾೞ್ಪುಡಿದ ಬನಂಗಳಲ್ಲಿ ಬೀಡಂ ಬಿಟ್ಟಂ (ಅ)
೩ ರೆ ಸಾರ್ದು ನೋಡಿದಂ ಸನಗಣೆಯುಂ (ಅ) ೪ ಕಾಮ (ಅ)

ತಳೆದು ಪೆಗಲ್ಗಳಿಂದೆ ವಿಪರೀತರತಶ್ರಮದಿಂದೆ ಪಾಱಲಾ
ರ್ದಳವಟ್ಟಿರ್ದ ಖೇಚರಿಯರಂ ಕರಜಕ್ಷತದಿಂದೆ ಬಾಸುೞಿ
ರ್ದೊಳೆದೊಡೆಯುಂ ಕಟಾಕ್ಷದೊಳೆ ಮೆಯ್ಮಱೆದೀಕ್ಷಿಸುತಂ ನಿಜಾಲಯಾ
ವಳಿಗಳ ಬಟ್ಟೆವಪ್ಪಿ ಮಿಗೆ ಪಾಱುವರೀ ಗಿರಿಯಂ ನಭಶ್ಚರರ್ ೪೫

(ಲೀಲಾವತಿ, ೯–೪೫)

ಮುಳಿದು ಕನಲ್ದರಲ್ಲಿನಿಯರಂ ಬರೆದಂಗಜಮೋಹದಿಂ ಶಿಳಾ
ಫಳಕಮನಪ್ಪಿ ಮೆಯ್ಯ ಬೆಮರಿಂದಮೆ ನಲ್ಲರ ಮೆಯ್ಯನಾವಗಂ
ತೊಳೆದವೊಲಾಗಿ ಪೋಗೆ ಮಗುೞ್ದೀಕ್ಷಿಸಿ ಕಾಣದೆ ಮಾಣದಂತದುಂ
ಮುಳಿದೆಲೆ ಪೋದುದೆಂದೞ್ದವರ್ ಗಿರಿಯೊಳ್ ಸುರಸಿದ್ಧಮುಗ್ಧೆಯರ್ ೪೬

(ಲೀಲಾವತಿ, ೯–೪೭)

ತರಳ ತಟಿಲ್ಲೋಚನದಿಂ
ಗಿರಿಗೆಱಗುವ ಮುಗಿಲ ನೋಡಿ ನಾಣ್ಚಿಕೆಯಿಂದಂ
ಪುರುಷಾಯತದಿಂ ಪ್ರಿಯರೊಳ್
ನೆರೆವ ನಭಶ್ಚರಿಯರಗಿದು ಪಾಱುವರಿದಱಿಳ್ ೪೭

(ಲೀಲಾವತಿ, ೯–೪೮)

ತೊಳಗಿದುದಂಬರಕ್ಕೊಗೆದು ಪಚ್ಚೆಯಕಾಂತಿ ಸುರ್ತ ಪಲ್ಲವಾ
ವಳಿಯೆನೆ ವಜ್ರಕಾಂತಿ ನನೆಯುರ್ಜೆನೆ ಮೌಕ್ತಿಕಕಾಂತಿ ಪುಷ್ಪಸಂ
ಕುಳಮೆನೆ ನೀಳಕಾಂತಿ ಮಱಿದುಂಬಿಯು ಪಿಂಡೆನೆ ಶೋಣಕಾಂತಿ ಕೆಂ
ದಳಿರೆನೆ ನಾಕದಿಂದಿೞಿವ ನಂದನದಂತೆ ಮಯೂಖನಿರ್ಝರಂ ೪೮

(ಲೀಲಾವತಿ, ೯–೨೮)

ಕರಿಣೀಶೃಂಗಾರಮುಗ್ರೋರಗಭಯಮಗದ್ವೈಘ್ರ್ಯಾದ್ಭುತಂ ದಸ್ಯುವೀರಂ
ಶರಭಾಕಾರೋರುರೌದ್ರಂ ಪ್ಲವಗವಿಕೃತಿಹಾಸ್ಯಂ ಚಮೂರುಪ್ರಣಶ್ಯ
ದ್ರುರುಬೀಭತ್ಸಂ ದವವ್ಯಾಕುಲಖಗಕರುಣಂ ಯೋಗಿರಾಟ್ ಶಾಂತಶಾಂತಂ
ಜೊರೆವೆತ್ತಾಶ್ಚರ್ಯಭೂತಂ ನವರಸಮಯಮಾಯ್ತಾ ನಗೇಂದ್ರೋಪಕಂಠಂ ೪೯

(ಸೂಕ್ತಿಸುಧಾರ್ಣವಂ, ೩–೨೨೦, ಚಂದ್ರಪ್ರಭಪುರಾಣಂ, ೧೦–೪೩)

# ಋಷ್ಯಾಶ್ರಮವರ್ಣನಂ

ತಿಳಕಾಶೋಕ ತಮಾಳ ತಾಳ ವಕುಳಾಳಂಕಾರವೇಳಾಲತಾ
ಕುಳ ಪೂಗದ್ರುಮ ನಾಳಿಕೇರ ಬದರೀ ಚೂತಾವಳೀ ಲೋಧ್ರವಿಂ
ಗಳ ಪುಂ . . . ಗಪ್ರವಾಳ ರುಚಿರಂ ಪ್ರೋತ್ಫುಲ್ಲ ನಾನಾಲತಾ
ಲಲಿತಂ ಕಾನನಮೆಯ್ದೆ ಕಂಗೊಳಿಸುಗುಂ ಋಷ್ಯಾಶ್ರಮಪ್ರಾಂತದೊಳ್ ೫೦

ಕರೆವಂತಾಡುವ ಪಲ್ಲವಪ್ರಕರದಿಂ ಮಂದಾನಿಲಂ ಸೋಂಕೆ ಬೀ
ಟ್ವರಲಿಂದರ್ಚಿಸುವಂತೆ ಕೋಕಿಲರವಪ್ರಧ್ವಾನದಿಂ ಸ್ವಾಗತ
ಸ್ವರಮಂ ಬಿತ್ತರಿಪಂತೆ ತೋಱಿ ಪೆಱಿಂಗುತ್ತಿರ್ದಪ್ಪುವಲ್ಲಿರ್ದ ಮಾ
ನರನಂ ಪೊರ್ದಿರ್ದ ಮಾನಸರ್ಗೆ ನಿಜದಿಂದಾತಿಥ್ಯಸತ್ಕಾರಮಂ ೫೧

ಬುಡಡೆಡೆಯಲ್ಲಿ ಪೂವಿನ ನೆಟಿಲ್ ಸಲೆ ಸಾಸಿರಮಾರದಾಗಲಾ
ಯೆಡೆಯೊಳೆ ಪರ್ಣಶಾಲೆ ಮಿಗೆ ಪೂರ್ಣಮದಾಗಿರೆ ಮುಕ್ತರಾಗಲೆಂ
ದುಡುಗದ ದಿವ್ಯಚಿತ್ತದ ವಿಲಾಸಿ ತಪಸ್ವಿಗಳಿರ್ಪರಲ್ಲಿಗ
ಲ್ಲಡಸಿದ ಮುಕ್ತರಾಗಮದೊಳೊಪ್ಪುವರಾ ವಟುಕೋಟಿ ರಾಜಿಸಲ್ ೫೨

ತೆರೆ ಸುೞಿಯುರ್ಬು ಬೊಬ್ಬುಳಿಕೆ ಸೀರ್ಪನಿ ಪಾವಸೆ ಜೌಗು ತಾಯ್ಮಟಿಲ್
ನೊರೆಯುಱಿಗಲ್ಗಳಿಂ ಪರಿವ ಪಿಂಗುವ ಕೂಡುವಗಲ್ವ ತೇಲ್ವ ಸಂ
ಚರಿಸುವ ತಗ್ಗುವೇಟ್ವ ತಡಿಗೊತ್ತುವ ಪತ್ತುವ ಪಾಯ್ವ ಪೊಯ್ವ ಭೋ
ರ್ಗರಿವ ಜಲಪ್ರವಾಹವೆಸೆದಿರ್ದುದು ನೋೞ್ಪೊಡೆ ತುಂಗಭದ್ರೆಯೊಳ್ ೫೩

(ವಿರೂಪಾಕ್ಷಸ್ಥಾನ ವರ್ಣನಂ –೨೩–)

ಆ ನಗದಲ್ಲಿ ಪುಣ್ಯತತಿಯೊ ಪ್ರಭೆಯೊರ್ಬುಳಿಯೊ ಮಹೇಶ್ವರ
ಶ್ರೀನಿಧಿಯೋ ಸುಧಾಕರವೊ ಸತ್ಯವೊ ನಿತ್ಯವೊ ಶೈವಪೂರಿತ
ಸ್ಥಾನವೊ ಶಾಂತಿಯೊ ದಯೆಯೊ ಧರ್ಮವೊ ನಿರ್ಮಳನೀತಿಯೋ ಶಿವ
ಜ್ಞಾನವೊ ಮುಕ್ತಿಸಂಕುಳವೊ ಪೇೞ್ವನೆ ತಾಪಸವೀಧಿಯೊಪ್ಪುಗುಂ ೫೪

(ಗಿರಿಜಾಕಲ್ಯಾಣಂ ೧–೫೯)

ವರತೇಜದಿಂ ಪವಿತ್ರಾ
ಚರಣೆಯಿನತಿಕನಕವಿಪುಳಸಾಮರ್ಥ್ಯತೆಯಿಂ
ಕರಮೆಸೆದುದು ನಯದಿಂ ರಾ
ಜಋಷಿ ಬ್ರಹ್ಮಋಷಿ ದೇವಋಷಿಗಳ್ ನಲವಿಂ ೫೫

ವರ ದೂರ್ವಾಸನಗಸ್ತ್ಯ ಜಹ್ನು ಕಪಿಲಂ ಕೌಂಡಿನ್ಯ ಮಾಂಡವ್ಯ ಭಾ
ಸ್ಕರ ಶಾತಾತಪ ವಾಮದೇವಮುನಿ ವಿಶ್ವಾಮಿತ್ರ ಮೈತ್ರೇಯ ಬಂ
ಧುರ ಮಾರ್ಕಂಡೆಯ ದೇವಲಕ್ಷವನಿಲಾದಂ ವ್ಯಾಸನಾ ಸೂತನುಂ
ತ್ವರಿತಂ ಚಿತ್ರ ಶಿಖಂಡಿ ಗಾಲವ ವೃಷಂ ಜಾಬಾಲಿ ವಾಲ್ಮೀಕಿಗಳ್ ೫೬

ಪರಮ ಧದೀಚಿ ರೋಮಶ ಪುಲಸ್ತ್ಯ ಪರಾಶರ ಯಾಜ್ಞವಲ್ಕ್ಯಯಾಂ
ಗಿರ ಭೃಗು ಪುಂಡರೀಕ ಶುಕ ಕೌಶಿಕ ಕಶ್ಯಪ ಗಾರ್ಗ್ಯ ಗೌತಮಂ
ವರ ಸನಕಂ ಸನಂದ ಸನತ್ಸು ಭಗೀರಥ ಕುತ್ಸ ವತ್ಸ ಭಾ
ಸುರ ಜಮದಗ್ನಿ ಜೈಮಿನಿ ವಸಿಷ್ಠ ಮತಂಗ ಮರೀಚಿಯತ್ರಿಗಳ್ ೫೭

ಸನಕ ಸನಂದನಾಂಗಿರಸ ಗೌತಮನತ್ರಿ ಪುಲಸ್ತ್ಯ ಕಶ್ಯಪಂ
ಸನತುಕುಮಾರ ನಾರದ ವಸಿಷ್ಠ ಪರಾಶರ ಗಾರ್ಗವಲ್ಕ್ಯ ಜೈ
ಮಿನಿ ತೃಣಬಿಂದು ಜಹ್ನು ಜಮದಗ್ನಿಯುಲೂಖಲು ವತ್ಸ ಶೌನಕಂ
ಮನು ಮುನಿಕೌಶಿಕಂ ಕಪಿಲ ಭಾರ್ಗವರಿಂದೆಸಗುಂ ತಪೋವನಂ ೫೮

ಸುಲಿಪಲ್ ಕೆಂಜೆಡೆ ನಾರಸೀರೆಯಜಿನಂ ಯಜ್ಞೋಪವೀತಂ ಕಮಂ
ಡಲು ವಾರ್ಧಾರಕಮಕ್ಷಮಾಲೆ ಭಸಿತಂ ಸ್ಮೇರಾನನಂ ಕರ್ಣಕುಂ
ಡಲುವೊಪ್ಪುತ್ತಿರೆ ಪುಣ್ಯದಂತೆ ಶುಭದಂತಾನಂದದಂತಜ್ಞನಿ
ರ್ಮಳದಂತುಜ್ವಳತೇಜದಂತೆ ಸುಟಿಮರ್ ತಚ್ಛೈಲದೊಳ್ ತಾಪಸರ್ ೫೯
(ಗಿರಿಜಾಕಲ್ಯಾಣಂ ೧-೬೮)

ಭಸಿತಮನೊಪ್ಪೆ ಪೂಸುವ ಶಿವಾಗಮಮೋದುವ ಶಾಸ್ತ್ರಮಂ ವಿಚಾ
ರಿಸುವ ವಿನೂತನಾಕ್ಷಮಣಿಯಂ ಸರವೇಱುಪ ನಾರಸೀರೆಯಂ
ಪಸರಿಪ ಕಂದಮೂಲಫಲಮಂ ತರಪೋಪ ಲಸನ್ಮೃಗಾಜಿನ
ಪ್ರಸರಮನೆಯ್ದೆ ಪೊಲ್ವ ಮುನಿಮುಖ್ಯಕುಮಾರಸಮೂಹಮೊಪ್ಪುಗುಂ ೬೦
(ಗಿರಿಜಾಕಲ್ಯಾಣಂ ೧-೬೪)

ಅತಿಥಿಯನಾದರಿಪ್ಪ ಪಿತೃದೈವಮನರ್ಚಿಪ ಧರ್ಮಶಾಸ್ತ್ರಸಂ
ಗತಿಯೊಳಗಿರ್ಪ ಯಜ್ಞವಿಧಿವೇಟ್ಟ ಪುರಾಣಮನೋದುವಾಗಮ
ಪ್ರತತಿಗಳಂ ವಿಚಾರಿಸುವ ತತ್ವನಿರೀಕ್ಷಣೆಗೆಯ್ವ ಯೋಗದು
ನ್ನತಿಕೆಯನಪ್ಪುಗೆಯ್ವ ಮುನಿಸಂಘದಿನೊಪ್ಪುವುದಾ ತಪೋವನಂ ೬೧
(ಕಾದಂಬರಿ ಪೂ. ಭಾ. ೨೨೫)

ಜಲರುಹಬೀಜರಾಜಿಗಳನಾಱುಪ ಪರ್ಣಕುಟೀರಕಂಗಳಂ
ನಿಲಿಸುವ ದಂಡಮೊತ್ತುವ ಮೃಗಾಜಿನಮುಂ ಪೊಲುತಿರ್ಪ ಮುಂಜಮೇ
ಖಲೆಗಳನೊಪ್ಪಮಾಡುವ ಸಮಿತ್ಕುಶಮುಂ ತರಪೋಪ ಧೌತವ
ಲ್ಕಲಮನಲಂಬುವಕ್ಷಮಣಿಮಯುಂ ಸಮೆವೀ ವ್ಯವಸಾಯಮೆತ್ತಲುಂ ೬೨
(ಕಾದಂಬರಿ ಪೂ. ಭಾ. ೨೨೪)

ನುತಸಾಮಧ್ವನಿ ಹೋಮಧೂಮಪವನಂ ಸದ್ಭಾಷಣಂ ಮಂತ್ರಹೂಂ
ಕೃತಿಯಾಹ್ವಾನವಿಸರ್ಜನಸ್ಥಿತಿ ಮಹಾದೇವಾರ್ಚನಂ ತಾಪಸ
ಪ್ರತಿಪತ್ತಿ ವ್ರತವಾತನಿತ್ಯನಿಯಮಂ ಕಾಲತ್ರಯಜ್ಞಾನಮೂ
ರ್ಧ್ವತಪಂ ಶಾಂತರಸಪ್ರಭಾವಮೆಸೆಯಲ್ ಚೆಲ್ವಾದುದೊಂದಾಶ್ರಮಂ ೬೩

ಶ್ರುತಿಮಾರ್ಗಶ್ರವಣಂ ಪುರಾಣಕಥನಂ ಷಟ್ಕರ್ಮಸಂಭಾಷಣಂ
ಶ್ರುತಿಚೇತೋವ್ಯಸನಂ ಸಮಸ್ತಪರುಷವ್ಯಾಕೀರ್ಣಮುಂ ಪೆಂಪುವೆ
ತ್ತಿತಿಹಾಸಂ ಸ್ಮೃತಿವಿಸ್ಮಯಂ ಸಕಲಧರ್ಮಾರ್ಥಮರ್ನೈರೂಪಣ
ಸ್ಥಿತಿನೈಶೇಷಿಕದಿಂದಮೇಂ ಮೆಱೆದುಮೋ ಚೆಲ್ವಾಗೆ ಋಷ್ಯಾಶ್ರಮಂ ೬೪

ಇದು ಭೂಮೀಸ್ನಾನದಿಂ ಮುಕ್ತಿಗೆ ನಡೆಯಿಪ ನೀಲಾಶ್ಮಸೋಪಾನಮಾಹಾ
ಯಿದು ಸಂಸಾರಾತಪಶ್ರಾಂತತೆಗತಿಸುಖಮೀವಾ ಬುಧಶ್ರೇಣಿ ಮೇಣಿಂ
ತಿದು ದುಷ್ಕರ್ಮಾಬ್ಜಷಂಡಂಗಳನುಱೆ ಕೊಱಗಿಪ್ಪೊಂದು ನೀಹಾರಮೆಂಬಂ
ದದಿ ಹೋಮಸ್ತೋಮಧೂಮಂ ನೆಗೆದುದು ಮುನಿಗಳ್ ಮಾಳ್ಪ ಮಂತ್ರಾಗ್ನಿಯಿಂದಂ ೬೫

ಹರನಂ ಗೆಲ್ವೆನಮೋಘಮೆಂದು ಮದನಂ ಪೆರ್ಚಿಂ ವ್ರತಂಗೊಂಡನೋ
ಸ್ಮರನೀಶಾಗ್ನಿ[1]ಯೊಳಟ್ಟೆ[1] ಶೋಕದೆ ವಸಂತಂ ಯೋಗಿಯಾ[2]ಗಿರ್ದ[2]ನೋ
ಹರಜೂಟೇಂದುಸಮಸ್ತಮಂಡಲನಿಮಿತ್ತಂ ಮರ್ದ[3]ಯಾಗಿರ್ದನೋ[3]
ಪಿರಿದುಂ ತಾನೆನಲೊರ್ವ ತಾಪಸಕುಮಾರಂ ಧೀರ[4]ನಿರ್ದಂ ನೃಪಂ[4] ೬೬
(ಸೂಕ್ತಿಸುಧಾರ್ಣವಂ ೩-೧೮೪)

ಹರನಂ ಶಂಕರನಂ ಜಿತತ್ರಿಪುರನಂ ನೇತ್ರಾಗ್ನಿಭಸ್ಮೀಕೃತ
ಸ್ಮರನಂ ತುಂಗಪಟುಜ್ಜಟಾಭರಣಮನ್ಮತ್ಕೀರ್ತಿಸದ್ಭಾವಿತಾ
ಮರನಂ ಭೀಮಫಣಾಮಚಂದ್ರಧರನಂ ವ್ಯಾಲೋಲಬಾಲೇಂದು ಶೇ
ಖರನಂ ತಾಳ್ದಿದರಾತ್ಮಹೃತ್ಕಮಲದೊಳ್ ಯೋಗೀಂದ್ರವೃಂದಾರಕರ್ ೬೭
(ಕನ್ನಡಪಂಚತಂತ್ರಂ ೨೫, ಸೂಕ್ತಿಸುಧಾರ್ಣವಂ ೩-೧೮೮)

---

೧ ಗಮಳ್ಕೆ (ಸ) ೨ ರ್ಪ (ಸ) ೩ ತಾನಾವನೋ (ಸ) ೪ ನೊಪ್ಪಿರ್ದನೋ (ಸೂ)

ಜಡೆಗಳ ಬಂಬಲೊಳ್ ತೊಡರ್ದು ಬಳ್ಳಿಗಳಿರ್ದುವು ಮೆಯ್ಯನೆಯ್ದೆ ಪು
ತ್ತಡರ್ದುವು ಗಡ್ಡಮಂ ಬಳಸಿ ಗೂಡುಗಳಿಟ್ಟುವು ಪಕ್ಕಿ ಕಂಗಳಂ
[1]ಕಡಿದುವು[1] ಪತ್ತಿ ಕಟ್ಟೆಱುವೆಗಳ್ ಬೆಮರಂ ನಸುನಕ್ಕುತಿರ್ಪುವಾ
ಗಡುಮುರಗಂಗಳೇವೊಗಟಿತ್ತಿವನೇಡೊರೆಯುಗ್ರತಪಂ ತಪಸ್ವಿಯಾ ೬೮
(ಸೂಕ್ತಿಸುಧಾರ್ಣವಂ ೩-೧೮೨)

ಪುತ್ತಡದಿರ್ದ ಮೆಯ್ಯಿ ಪೊದರ್ಗೊಂಡ ಜಟಾವಳಿ ಕಯ್ಯಕಾಲುಗುರ್
ಸುತ್ತಿದ ಕಂಟಕಂಯಮಯ (?) ವಾದ ಬಸುರ್ ಪರಮಾತ್ಮರೂಪಿನೊಳ್
ಪತ್ತಿಸಿದಂತೆ ದೃಷ್ಟಿ ಶಶಿಕಾಂತ ಶಿಲಾಸನನಿಷ್ಠಮೌನದೊ
ಪ್ಪುತ್ತಿರೆ ಜೀರ್ಣತಾಪಸಕುಲಂ ಮೆಱೆದಿರ್ದುದು ತನ್ಮಹಾದ್ರಿಯೊಳ್ ೬೯

ಬಗೆ ಪಣೆಯಲ್ಲಿ ಕೂಡಿ ನಿಲೆ ತಪ್ಪದೆ ಮೂಗಿನ ಕೌಕದಲ್ಲಿ ದಿ
ಟ್ಟಿಗಳಿರೆ ಮೆಯ್ಯ ಮಣ್ಣೊರಲೆ ಪುತ್ತಿಡೆ ಪರ್ಬಿದ ಬಳ್ಳಿಯೆತ್ತಲುಂ
ಸೊಗಯಿಸೆ ಕಯ್ಯನಿಕ್ಕಿ ಮಿಗೆ ತನ್ನನೆ ತಾನೊಲವಿಂದೆ ಜಾನಿಸು
ತ್ತಗಲದೆ ನಿಂದನೊರ್ವ ಜತಿಯುಂ ಬಗೆಗೊಳ್ವರಿಗಟ್ಟತೆಂ (?)ಬಿನಂ ೭೦

ಕರಣಗುಣಂ ಕುನುಂಗಿರೆ ಮನಂ ನೊಸಲೇಱೆ ಸುಲೋಚನಂಗಳು
ಳ್ಳಿರೆ ಮುಗಿದಿಂಬುನೆತ್ತಿರೆ ಕರದ್ವಯಪಲ್ಲವಮಂಕದೊಳ್ ಮರ
ಳ್ದಿರೆ ತನು ನಿಷ್ಪ್ರಕಂಪಮಿರೆ ದಂತಚಯಂ ಸಮನಾಗಿ ತಮ್ಮೊಳೊಂ
ದಿರೆ ಸಮಸಂದುದಾ ಪರಮಯೋಗಿಯ ಯೋಗನಿಯೋಗಭಾವಮುಂ ೭೧

ಶರಭಂ ಕೇಸರಿಗಳ್ಗೆ ಕೇಸರಿ ಕರೀಂದ್ರಂಗಳ್ಗೆ ಕಾಡಾನೆ ಬೇ
ಡರ ಕಪ್ಪಿಂಗೆ ಪುಳಿಂದರಾರ್ಭಟಿಪ ಶಾರ್ದೂಲಕ್ಕೆ ಶಾರ್ದೂಲಮು
ಚ್ಚರಿ ಸಾರಂಗ[2]ಕೆ ಸಾರಗಂಗಳ ಕುಳಂ[2] ಪಾವಿಂಗೆ ಪಾವಲ್ಲಿ ಮುಂ
ಗುರಿಗಳ್ಗಂಜದೆ ಬಿಟ್ಟುಪೊರ್ದುವುವಲಂಪಿಂ ಜಾತಿವೈರಂಗಳಂ ೭೨
(ಅನಂತನಾಥಪುರಾಣಂ ೯-೯೮, ಸೂಕ್ತಿಸುಧಾರ್ಣವಂ ೩-೧೭೭)

ಪುಲ್ಲೆಯ ಕೋಡಮೇಲೆ ಪುಲಿಗಳ್ ತಲೆಯಿಟ್ಟು ಕುರಂಗಸಂಕುಳಂ
ಭಿಲ್ಲರ ಬಿಲ್ಲಮೇಲೆ ಮೊಗವಿಟ್ಟು ನವಿಲ್ಗಳಮೇಲೆ ಭೀತಿ ತಾ
ನಿಲ್ಲದೆ ಸರ್ಪವೀಧಿ ಪೆಡೆಯಿಟ್ಟು ಗಜಂ ಶಿರಮಿಟ್ಟು ಸಿಂಗದೊಳ್
ನಿಲ್ಲದೆ ನೋಡುತಿರ್ಪುವು ನಗೇಂದ್ರಮುನೀಂದ್ರರ ಶಾಂತಮೂರ್ತಿಯಂ ೭೩
(ಗಿರಿಜಾಕಲ್ಯಾಣಂ ೧-೬೯)

---

೧ ತಡೆವುವು (ಸ) ೨ ಮೃಗಕ್ಕೆ ಚಿತ್ರಕಮೃಗಂ (ಸೂ)

ಪೊಕ್ಕು ಕುಟೀರಮಂ ಕೆದಱಿ ಹೊತ್ತಗೆ[೧]ಯಂ[೧] ಮಸಿಯಕ್ಕರಂಗಳಂ
ನೆಕ್ಕಿ ಬಿಸುಟ್ಟು ಜೊಕ್ಕಣದ ಬೂದಿಯನುಃಫೆನಲೂದಿ ಮೂಗಿನೊಳ್
ಪೊಕ್ಕೊಡೆ ಸೀಂತು ಮಾಣ್ದಿರದೆ ಪಾಯ್ದು ವಿಜೃಂಭಿಸಿ ಕೊಂಬನೇಱಿ ಪು
ರ್ವಿಕ್ಕಿ ಕುಮಾರತಾಪಸರನೇಡಿಸುತಿರ್ದುದದೊಂದು ಕೋಡಗಂ ೭೪

(ಸೂಕ್ತಿಸುಧಾರ್ಣವಂ ೩-೧೯೪)

ಪಱಿದೆಲೆಯಿಟ್ಟು ಪಲ್ಗಿಱಿದು ಹುಱ್ರನುತ್ತುಬ್ಬುತ ಪುರ್ಬನೇಱಿಸು
ತ್ತುಱುಗಿಸಿ ನೋಡಿ ದಾಂಟಲನುಗೆಯ್ವುತ ತೂಗುತ ಝುಂಕಿಸುತ್ತ ಬಾ
ಯ್ದೆಱೆದೊಲೆವುತ್ತ ಕೈನೆಗಹಿ ಕೂಗಿಸಿ ಕುರ್ಗಿಸುತೇಡಿಸುತ್ತೆ ತಾಂ
ನೆಱೆ ನಗಿಸಿತ್ತು ತಾಪಸಕುಮಾರರನಲ್ಲಿಯದೊಂದು ಕೋಡುಗಂ ೭೫

ವ್ಯಸನಗಳೇೞುಮಂ ಮದಗಳನೆಂಟುಮನಾಱರಿವರ್ಗಮೆಂಬಿವಂ
ವಿಷಯಗಳೈದುಮಂ ಕರಣ ನಾಲುಕುಮಂ ತನು ಮೂಱುಮೆಂಬಿವಂ
ನುಸುಳಿರಿಸುತ್ತ ಚಿತ್ತದೊಳಗೀಶನ ನಿರ್ಮಳ ಧರ್ಮಮೂರ್ತಿಯಂ
ಪಸರಿಸಿ ಭಿನ್ನವಿಲ್ಲದಿರುತಿರ್ಪ ಮಹಾಮುನಿಮುಖ್ಯನೊಪ್ಪಿದಂ ೭೬

ಹೋಮವ ಮಾೞ್ಪರೊಂದು ಕಡೆಯಲ್ಲಿ ಶಿವಾಗಮದರ್ಥಯುಕ್ತಿಯಂ
ಪ್ರೇಮದಿ ಪೇೞ್ವ ಸಂಯಮಿಸಮೂಹಗಳೊಂದೆಸೆಯಲ್ಲಿ ಚಿತ್ತದೊಳ್
ಕಾಮಿಸದೇನುಮಂ ಶಿವನ ಪೂಜೆಯ ಮಾಡುತಮಿರ್ಪ ತಾಪಸ
ಸ್ತೋಮಮಿರಲ್ಕೆ ರಂಜಿಸುವುದಾ ವನ ಜೀವನಪಾವನಾರ್ಥದಿಂ ೭೭

ಯತಿವನಿತಾವಿಳಾಸಗತಿಯಂ ಗತಿಗೆಟ್ಟವಿವೆಂದು ದುಷ್ಟಸಂ
ತತಿಯ ಜಪಾಜ್ಞೆಯುಳ್ಳವರೆ ಸದ್ಗತಿಯಂ ಕುಡಲಾರ್ಪರೆಂದು ಸಂ
ತತಮುಪಧಾವಿಪಂತೆ ಯತಿಕಾಮಿನಿಯರ್ ಮೊಗೆದೊಯ್ವ ನೀರ್ಗಳ
ಲತೆಗೆಱೆವಲ್ಲಿ ಕೂಡಿ ಬೞಿಯೊಳ್ ಸುೞಿದಾಡುವುವಂಚೆವಿಂಡುಗಳ್ . ೭೮

ಭಂಗಮನಾಳ್ದುವೀಕೆಯರ ಕುಂತಳಮೆಂಬುದಿದಕ್ಕೆ ತುಂಬಿಗಳ್
ಭಂಗಮನಾಳ್ದವೀ ಮುನಿವಧೂತ್ಕಕುರುಳ್ಗಳಿನೆಂದು ಭಂಗಿಸಲ್
ಪಂಗಚಿಕಿಚ್ಚಿಗೆಯ್ದಪುವೆನಲ್ ದುರಿತಾಪಹಮಪ್ಪ ಹೋಮಧೂ
ಮಂಗಳ ಕಂಪನುಂಬುವಳಿರಾಜಿಗಳ್ ಮುನಿಗೇಹರಾಜಿಯೊಳ್ ೭೯

———

೧ ಯೊಳ್ (ಸ)

ಒಡವರ್ಪೇಬೆಸನೆಂಬ ಕೈಗುಡುವ ತೀರ್ಥಕ್ಕುಯ್ವ ದೇವಾರ್ಚನ
ಕ್ಕೆಡೆಯಂ ಮಾಡುವ ಹೋಮಸಾಧನ ಸಮಿದ್ಧರ್ಭಾರ್ಘ್ಯತೋಯಂಗಳಂ
ಕುಡುವಿರ್ದಲ್ಲಿಗೆ ಕಂದಮೂಲಫಲಮಂ ತಂದೀವ ಪರ್ಯಾಪ್ತಿಯಂ
ಪಡೆವನ್ನಂ ಬಿಡದಿಂತು ವೃದ್ಧಯತಿಗಳ್ಗಾ ಸ್ಥಾನದೊಳ್ ವಾನರರ್ ೮೦
(ಸೂಕ್ತಿಸುಧಾರ್ಣವಂ ೩–೧೭೮)

ಈಯಮನಕ್ಕನುಕ್ರಮತಪಂ ಪರಿಣಾಮುಮನಂತೆ ಕೃತ್ಸ್ನ ಚಾಂ
ದ್ರಾಯಣ ಪರ್ಣಭಕ್ಷವ್ರತ ಮಾರುತಸೇವನೆ ವಾರಿಪಾನದೊಳ್
ಕಾಯಮನೆಯ್ದೆ ತೀರ್ಚೆ ಬಱಿಕಂ ಮುನಿಗಳ್ ನಿಜಜೀವನಕ್ಕೆ ಯೋ
ಗಾಯತಸೌಖ್ಯಮೆಂಬಮೃತಸೇವೆಯೆ ಕಾರಣಮಾಗಿ ವರ್ತಿಪರ್ ೮೧

ಇರದಘಮರ್ಷಿಸಲ್ ಬಗೆದ ಸಿದ್ಧಿಯನೀವೞವಂತೆ ನಿರ್ಜರಾ
ಮರತೆಯನುಂಟುಮಾಡಲೊಳಪೊಕ್ಕ ಪದಾರ್ಥಮನೆಯ್ದೆ ಕಲ್ಗಳಾ
ಗಿರಿಸುವ ಸೋಂಕೆ ಕತ್ತರಿಪ ಖಂಡಿಪ ಸಿದ್ಧರಸಹ್ರದಂ ಸುಧಾ
ಸರಸಿ ಶಿಲೋದಕಾಗ್ರನದಿ ಕತ್ತರಿವಾಣಿಯ ವಾಪಿ ವಿಸ್ಮಯಂ (?) ೮೨

ಮನುಜನವನೊಂದು ಕುವಳಯ
ಮನೊಂದು ಪದ್ಮಮನೆ ಮಾಡಿ ಪಿಂಗೇೞಿಸಿ ತೊ
ಟ್ಟನೆ ಕುವಲಯವಿಲಿ ಪದ್ಮಾ
ಸುನಪ್ಪ ಪೂಗೊಳದೆ ಬನದ ಪೂಗೊಳನೆಲ್ಲಂ (?) ೮೩

ಈ ತಾಪಸನಿದ್ದೆಡೆಗೆ ರ
ಸಾತಳಪುರುಷಪ್ರಮಾಣರ್ ಕೇಳೀಯಾತ್ರಾ
ಯಾತತಿಗೆಯ್ವರೆನಲ್ಕಾ
ಪಾತಾಳಸ್ಪರ್ಶಿಗಳ್ ಬಿಲದ್ವಾರಂಗಳ್ ೮೪

ಸದಸನ್ಮತಿಗಳ್ ಪಿಡಿವಂ
ದದಲಿ ವಿವೇಕಾವಿವೇಕದೊದವಂ ವೈಪೊ
ರ್ದಿದರಂ ಪಿಡಿವುವು ಸಲೆ ಮಿಡು
ಕದವೋಲ್ ತದ್ವನದ ವಜ್ರಲೇಪದ ಶಿಲೆಗಳ್ ೮೫

ಮುನಿಜನದಾಜ್ಞಾಬಲದಿಂ
ಮುನಿಯದೆ ಪುಲಿಪುಲ್ಲೆ ಸಿಂಹವಾನೆ ನವಿಲ್ ಪಾ
ವಿನಿತುಂ ಕೆಳೆಗೊಂಡಿರ್ಪುವು
ಮುನಿಧೇನುಗಳವನೆ ಮೆಚ್ಚಿ ಸುೞಿವುವು ಪೊಲನೊಳ್ ೮೬

ನಲಿದೊಡನಲಿವುವು ತಾಯ್ಗಳೆ
ಮೊಲೆಯಂ ಪಲ್ಲಟದಿನುಂಬುವೊಡನಿಪ್ಪುವು ಮೈ
ಗಲಸಿರೆ ಸಿಂಗದ ಶರಭದ
ಪುಲಿಯಾನೆಯ ಹೋಮಧೇನುವಿನ ಶಿಶುತತಿಗಳ್ ೮೭

ಯೋಗಿಗಳಿಪ್ಪ ತಮಾಲ ಲ
ತಾಗೃಹದೋವರಿಗಳೊಳಗೆ ಸೊಡರ್ಗಳ್ ಕಂಭೋ
ದ್ಯೋಗಮಣಿಯಾಗೆ ದೀವಿಗೆ
ಯಾಗಿರ್ಪುವು ಫಣಿಗಳನುಪಮಂ ಯೋಗಿಬಲಂ ೮೮

ಯಮಿಗಳ ಹೋಮಾಕ್ಷತ ಚರು
ಸಮಿತ್ಕುಶಂ ಸೂಸಿದಂಗಳಂಗಳ ಕಸಮಂ
ಸಮಯಂದಪ್ಪದೆ ತೊಡೆವುವು
ಚಮರೀಮೃಗವಾತ್ಮವಾಲ ಸಮ್ಮಾರ್ಜನಿಯಿಂ ೮೯

ಕರಿಗಳುಮಾಯೆಡೆಯೊಳ್ ಪು
ಷ್ಕರಸೀಕರನೀರ್ಗಳಿಂದೆ ನೀರ್ದಳಿವುವು ತ
ಮ್ಮರಲಿಂ ವನಜಂಗಮವ
ಲ್ಲರಿಗಳ್ ಬಂದಲ್ಲಿ ವಿರಚಿಪವು ಪೂವಲಿಯಂ ೯೦

ಯತಿವರರ ಹೋಮಚರು ಸಂ
ತತಿಗಂ ಮೇಲೆಱಗದಂತು ಮಕ್ಷಕ ಮಶಕ
ಪ್ರತತಿಯನಾತ್ಮಚಳತ್ಕ
ರ್ಣತಾಳವೃಂತದೊಳೆ ಬೀಸುವುವು ಕಳಭಂಗಳ್ ೯೧

ಎಳವಿಸಿಲೊಳ್ ಮುನಿಬಾಲರ್
ಜಳಧೌತಂಮಾಡಿ ಕಟ್ಟೆ ಸಾರಂಗಂ ನಿ
ಶ್ಚಲತೆಯಿನಾರಿಸುವುವು ವ
ಲ್ಕಲ ಕೌಪೀನಂಗಳಂ ಕವಲ್ಗೊಂಬುಗಳಿಂ ೯೨

ತನುಕಂಡೂತಿ ತಪೋಧನ
ತನುಸಂಘರ್ಷಣವನೆಸಗಿ ಹರ್ಷದೆ ತ್ರಿಶಪಾ
ವನಪಾತ್ರಜಲದೆ ಕೆಡೆ ಮೆ
ಚ್ಚೆನಿಂದೆ ಮೃಗಶಿಶುಗಳೆಸೆವುವಾ ಮುನಿಗುಹೆಯೊಳ್ ೯೩

ಒಡಗೂಡಿ ವೇದವೋದುವ
ವೊಡನಾಡುವ ವಟುಗಳೋದನಾಲಿಸಿ ತಪ್ಪಂ
ಬಿಡಿವುದುಪನ್ಯಾಸದೆ ಒ
ಕ್ಕುಡಿಗೆಯ್ವುವು ಮುನಿಗಳೊಳಗೆ ಶುಕಸಾರಿಕೆಗಳ್ ೯೪

ಮುನಿಬಾಲಿಕೆಯರ್ ಮಧ್ಯಂ
ದಿನದೊಳ್ ಬಂದರ್ಘ್ಯಜಲವನುಯ್ವೆಡೆಯೊಳ್ ಮೇ
ಲೆ ನೆಟಿಲ್ ಪುದಿದಿರೆ ಸಲೆಸೋ
ಗೆನವಿಲ್ಗಳ್ ಸೋಗೆವಿರ್ಚಿಪವು ಮುನಿವನದೊಳ್ ೯೫

ಎಡ್ಡವೆನಲಿಂಡೆಗಟ್ಟುವ
ಗುಡ್ಡುಗೆಗುಡುವೆಡೆಗೆ ನೀರನಡಕುವ ಫಲಮಂ
ಬಡ್ಡಿಸಿ ನಿವೇದ್ಯವಿಡುವೀ
ಗೊಡ್ಡಾಟದ ಮುಸುಗಳೆಸೆದವಾ ಮುನಿವನದೊಳ್ ೯೬

ಮುನಿಧೇನುಗಳಂ ಕಾವುವು
ಮುನಿಕನ್ನೆಯರಜ್ಜಗಾಪೆನಿಪ್ಪುವು ಮುನಿಗೇ
ಹನಿಕಾಯದ ಬಾಗಿಲ್ಗಾ
ದುನಿಲ್ವವಂತಲ್ಲಿ ಜಂಬುಕಂಗಳ್ ಸತತಂ ೯೭

ಸ್ವರ್ಗಫಲಮಂ ಸ್ವಕೀಯಭು
ಜಾಗ್ರದಿ ನೀಳ್ಕಿ ತಳೆದುಕೊಂಡಪನೀತಂ
ನಿಗ್ರಹದಿಂದೆನೆ ಗಹನಾಂ
ತರ್ಗತನೆಸೆದಿರ್ಪನೂರ್ಧ್ವಬಾಹುವೊಳೊರ್ವಂ ೯೮

ತ್ರಿದಶಪದ ಸುಖವ ಪಡೆಯಲ್
ತುದಿಗಾಲಿಂ ನಿಂದನೀತನೆಂಬಿನಮುಂಗು
ಷ್ಟದ ಕೊನೆಯನೂಱಿ ನೆಲದೊಳ್
ಪದುಳಂ ನಿಂದಿರ್ದು ಮಾಳ್ಪನೊರ್ವಂ ತಪಮಂ ೯೯

ಕವಿಯಂತಪ್ಪಾಪದದಂ
ತೆ ವಿಯತ್ಪತಿಯಂತೆ ತನ್ನೊಳುತ್ಪಾದಕ ವೃ
ತ್ತಿ ವಿಗಿತವಾಗಿರೆ ಯೋಗಿ
ಪ್ರವರಂ ಭವಗೇಡಿ ತಪವನೊರ್ವಂ ಮಾಳ್ಪಂ ೧೦೦

ಒಡಲಡಗಂ ಬೇಳ್ದಿರ್ಪರ್
ತಡೆಯದೆ ಪಾಲ್ತನೆಯ ಮಾಡುವಂದದಿನೆಲುವಂ
ಕಡಿದುರ್ಚಿ ಬೇಳುತಿರ್ಪರ್
ಸುಡಲಿಕ್ಕಿಸಲಾ ಕಿಱದಗ್ನಿ ಕಂಠಣಿಸುವಿನಂ ೧೦೧

ಜಲಪೃಷ್ಟಮಾಟ್ದು ಧೈರ್ಯ
ಸ್ಖಲನಾರ್ಥಂ ಬೆಟ್ಟುಗಳ್ ಸಿಡಿಲ್ವೊಡೆದುಂ ಪೆ
ರ್ಮೞಿಕೆಗಳೆಱಗಿದೊಡೆ ಯೋಗೋ
ತ್ಕಲಿತಮನರ್ ಬಯಲೊಳಿರ್ಪರಭ್ರಾಗಮದೊಳ್ ೧೦೨

ಪುಳಕಂ ಪೊಣ್ಮಿದೊಡಂ ತನು
ಪುಳುಕೋದ್ಗಮಮೆಂಬರೆಂದು ಯೋಗಸುಖೋದ್ಯ
ತ್ಪುಳುಕಮುಮಂ ತೋಱಿದು ಹಿಮ
ಜ್ಜಳಜ್ಜಮಂ(?) ಪೊಕ್ಕು ಯೋಗಿಗಳ್ ಕೆಲರಿರ್ಪರ್ ೧೦೩

ರವಿ ಸೆಡೆಯೆಮಗ್ನಿಕಂಕಣ
ಮವಾತ್ಮತೇಜಕ್ಕೆ ತಪಕ್ಕೆ ರವಿಯಗ್ನಿಯ ತೇ
ಜವದಾವರಿಸಿರೆ ಮುನಿಸು
ಪ್ರವರರ್ ಪಂಚಾಗ್ನಿಸಾಧನರ್ ಬೇಸಗೆಯೊಳ್(?) ೧೦೪

ಅನವಧಿಕಾಲಾಸನದಿಂ
ತನುವಂ ಪುತ್ತಡರ್ದು ಮುಚ್ಚೆ ಯೋಗಾಮೃತಸೇ
ವನಯಿಂದನಶನಮಿರ್ಪರ್
ಮುನಿಗಳ್ ವಿದ್ಯೋತತತ್ಪರರ್ ಬ್ರಹ್ಮದವೋಲ್ ೧೦೫

ಕರೆಯುವು ಕೋಕಿಲೆ ಮಧುಪಂ
ಮೊರೆಯವು ಗಿಳಿ ಗಳಪವನಿಲನಲ್ಲಾಡಂ ಪೆ
ರ್ಮರನಂ ಗಿಡುವಂ ಲತೆಯುಂ
ಗುರು ಶರ್ವಸಮಾಧಿಭೀತಿಯಿಂದಾ ನಗದೊಳ್ ೧೦೬

(ಗಿರಿಜಾಕಲ್ಯಾಣಂ ೫-೨೮.)

ನಿರತರ್ ಭರಿತರ್ ಚರಿತರ್
ಪರತತ್ವರತರ್ ನುತರ್ ವಿರಕ್ತನ ತೇಜಃ
ಕಿರಣರ್ ಕರುಣರ್ ಶರಣರ್
ಕರುಣಾಳುಗಳರುಣಮಣಿನಿಭರ್ ನೆಲಸಿರ್ದರ್ ೧೦೭

(ಗಿರಿಜಾಕಲ್ಯಾಣಂ ೫–೨೪)

ಮುಗಿದುವು ನಯನಸರೋಜಂ
ಮಿಗೆಯುಲರ್ದುದು ಚಿತ್ತಕೈರವಂ ಮಿಕ್ಕುಬರ್ಪಿಂ
[೧][ಬಗೆದ][೧]ತಪೋನಿಧಿಗಂದಾ
ಬಗೆಯೊಳಗಾ ಜ್ಞಾನಚಂದ್ರನುದಯಿಸುವಾಗಳ್ ೧೦೮

ಗುಹೆಗುಹೆಗಳೊಳಗೆ ಬಳಸಿದ
ಬಹುಗಹ್ವರಗಹ್ವರಂಗಳೊಳೆ ನವಸೌಖ್ಯಾ
ವಹ ನಿರ್ಝರನಿರ್ಝರದೊಳ
ಗಹರಹವೊಪ್ಪಿರ್ಪುದಧಿಕ ಮನುಮುನಿವೃಂದಂ ೧೦೯

ಯಮ ನಿಯಮ ನಿತ್ಯಕರ್ಮಂ
ಸಮನಿಸೆ ವನಲತೆಯ ಗುಲ್ಮ ವೃಕ್ಷಾವಳಿಯೊಳ್
ವಿಮಳವ್ರತಿಗಳ್ ಸಲೆ ಕಂ
ದಮೂಲಫಲದಿಂದೆ ತಣಿದು ಪರಿಣಮಿಸಿರ್ದರ್ ೧೧೦

ಭಾಸ್ಕರಕರಸಮ ವಿಮಳನ
ಮಸ್ಕರರತಿವ್ರತಿಗಳಗ್ರಗಣ್ಯರ್ ಸಮಯಂ
ತಸ್ಕರರತಿಮುದದಿಂದೆ ನ
ಮಸ್ಕರಿಸುವ ಮುನಿಗಳನಘರಿರ್ಪರ್ ನಗದೊಳ್ ೧೧೧

ಗಣ್ಯಾತೀತರ್ ಶಿವಲಾ
ವಣ್ಯದೆ ಸರ್ವಾಂಗಭಸಿತದಿಂ ನರೆಯಿಂ ಕಾ
ರುಣ್ಯದಿನತಿಧವ[೨]ಳಿಮದಿಂ[೨]
ಪುಣ್ಯಂ ಪಣ್ಣಾದ ತೆಱದೆ ತಾಪಸರಿರ್ದರ್ ೧೧೨

(ಗಿರಿಜಾಕಲ್ಯಾಣಂ ೧–೬೩)

---

೧ ಗಭೀರ (ಸ) ೨ ಳತೆಯಿಂ (ಅ)

ವ್ಯೈಗರೆದು ಮೆಲ್ಲಮೆಲ್ಲನೆ
ಕೈಗೊಟ್ಟೊಡನೈದಿ ಮತ್ತೆ ತಂದಿರಿಸಿ ಪಗಲ್
ಬೈಗಿರುಳೆನ್ನದೆ ಸಲೆ ಬೆಸ
ಕೈಗುಂ ಮುನಿಗಳ್ಗೆ ನಗದ ಮರ್ಕಟನಿಕರಂ ೧೧೩

(ಗಿರಿಜಾಕಲ್ಯಾಣಂ ೧–೬೫)

ಓಸರಿಸಿ ಬಿರ್ಚಿ ಪಕ್ಕಮ
ನೋಸರಿಸದೆ ಮುನಿಗಳೊಡನೆ ಹೋಮಸ್ಥಳದೊಳ್
೧ಭಾಸುರದಿನಂತುಮಿಂತುಂ೧
ಬೀಸುತ್ತೆಚ್ಚಱಿಸಿ ಕೊಡುವುವಾ ಶಿಖಿ ಶಿಖಿಯಂ ೧೧೪

(ಗಿರಿಜಾಕಲ್ಯಾಣಂ ೧–೬೬)

'ಕೊಲ್ಲದುದ ದಿಟನಱಿ'ಯೆಂ
ದೆಲ್ಲಾ ಪರಿಯಿಂದೆ ಪೇೞ್ವ ಪಿರಿಯರ ನುಡಿಯಂ
ಬಲ್ಲಿತೆನೆ ನಂಬಿ ಬೇಂಟೆಯ
ನೊಲ್ಲದೆ ಬಿಟ್ಟಿರ್ಪ ಬಿಯದರೊಪ್ಪುವರದಱಿಂದೊಳ್ ೧೧೫

ಪರಮತಪೋನಿಧಿಗಳ್ಗಂ
ಬರ೨ದೆಡೆಯಂ ಪಾಯ೨ಲಿಟ್ಟ ನಿಚ್ಚಣಿಗೆಯೊಲ
ಚ್ಚರಿವಡೆದು ನೆಗೆದುವೆನಸುಂ
ತಿರೆನುಸಗುವ ಹೋಮಧೂಮವಾ ಮುನಿವನದೊಳ್ ೧೧೬

(ಸೂಕ್ತಿಸುಧಾರ್ಣವಂ ೩–೧೭೬)

ಕರಿಣಿ ಕರಾಂಜುಳಿಯಿಂ ಕೇ
ಸರಿಯ ಚಳತ್ಕೇಸರಂಗಳಂ ತೊಡೆದುದು ಕೇ
ಸರಿಣಿ ಮೊಲೆಯೂಡುತಿರ್ದುದು
ಕರೇಣುಜಾತಕ್ಕಮಾತ್ಮಸಂಜಾತಕ್ಕಂ ೧೧೭

(ಅನಂತನಾಥಪುರಾಣಂ ೩–೩೭, ಸೂಕ್ತಿಸುಧಾರ್ಣವಂ ೩–೧೭೯)

———

೧ ಬಾಸಿಪವೊಲಂತುಮಿಂತುಂ (ಅ) ೨ ನದಿಯಂ ಮೀಯು (ಸೂ)

ಪರಮತಪೋನಿಧಿಗಳ್ ಸಂ
ಚರಿಸುವ ಬಟ್ಟೆಯನಗಲ್ದು ನಟ್ಟವಿಸಲ್ ಕಾ
ಯ್ದುರಗಂ ಪುಡಿಯೊಳ್ ಪೊರಳು
ತ್ತಿರೆ ಸೋಗೆಯನೆತ್ತಿ ಸೋಗೆ ಪಿಡಿಮುದು ನೆಟಿಲಂ ೧೧೮
(ಅನಂತನಾಥಪುರಾಣಂ ೩-೩೮, ಸೂಕ್ತಿಸುಧಾರ್ಣವಂ, ೩-೧೮೦)

ಜೆಜ್ಜದೆ ಬೆದಱದೆ ಮೊಲೆಯಂ
ಸಾರ್ಚಿದ ಮಱುವೆರಸು ಸುಟಿುದ ಮಾನಿಸರುಲಿಪಂ
ಮುಚ್ಚಿದ ಪುಲ್ಲೆಗಳಲ್ಲಿ ಪೊ
ಣರ್ಚುತ್ತಿರ್ದಪುವು ಶಾಂತರಸಪರಿಣತೆಯಂ ೧೧೯
(ಸೂಕ್ತಿಸುಧಾರ್ಣವಂ ೩-೧೮೧)

ಹಾಟಿಕಲೆಯನಿಟ್ಟು ಹುತ್ತಿನ
ಹೋಟಿಲ ಹಾವುರಮುನಡರ್ದು ಪೆಱಗಿಂ ಬೊಪ್ಪಿಂ
ದೇಟಿಕಂಟಿಟುತರೆ ಯತಿಪತಿ
ಬೀಟಿಲ್ವರಿದಿರ್ದ ಕಲ್ಪಕುಜನುಂ ಪೋಲ್ತಂ ೧೨೦

ತಲೆವಾಗುತ್ತಿರ್ದುವೆಂಬಂತೆಱಪ ಲತೆಗಳಿಂದರ್ಚಿಸುತ್ತಿರ್ದುವೆಂಬಂ
ತಲರ್ಗಳ್ ತಳ್ತಲ್ಲೊಗುತ್ತಿರ್ದಖಿಳ ತರುನಿಕಾಯಂಗಳಿಂ ಕೂಡೆ ಬದ್ಧಾಂ
ಜಳಿಯಾಗುತ್ತಿರ್ದುವೆಂಬಂತೆಸೆವ ಕಿಸಲಯಾಬದ್ಧ[1]ಸಂಜಾತವೀರ
ತ್ಸ್ಫಳದಿಂ[1] ಚೆಲ್ವಾದ ಖುಷ್ಯಾಶ್ರಮದ ಮಹಿಮೆಯಂ ಬಣ್ಣಿಸಲ್ ಬಲ್ಲನಾವಂ ೧೨೧
(ಕಾದಂಬರಿ ಪೂ. ಭಾ. ೨೨೫; ಸೂಕ್ತಿಸುಧಾರ್ಣವಂ ೩-೧೯೨)

## ಅರಣ್ಯವರ್ಣನಂ

ಅತಿಘೋರಧ್ವಾಂತಪೂರಂ ಬಹುತರುಕುಳಸಾರಂ ಸಮುದ್ಯದ್ಗಭೀರಂ
ಪ್ರತಿಶೂನ್ಯಂ ದೇವಮಾನ್ಯಂ ಮೃಗವಿತತಿಗನನ್ಯಂ ನದೀವ್ರಾತಧನ್ಯಂ
ಮತಭೋದ್ಯಂ ಜಾತವೇದ್ಯಂ ದಿನಕರಕಿರಣಾಭೇದ್ಯಮೀ ಭೂಮಿಗಾದ್ಯಂ
ಗತಪುಣ್ಯಂ ತಾನಗಣ್ಯಂ ಕಠಿನವಿಷಯಗುಣ್ಯಂ ವಿರಾಜಿಪ್ಪರಣ್ಯಂ ೧೨೨

---

೧ ಸಂಛನ್ನಂ ಶಾಖಾಕುಳದಿಂ (ಸೂ)

ಹರಿಯಂತಿಂದುವಿನಂತೆ ಕೃಷ್ಣಮೃಗಸಂಶ್ಲೇಷಂ ಸುರಾವಾಸದಂ
ತುರಗಾಧೀಶ್ವರನಂತೆ ಕೌಶಿಕವಿಭೋಗಂ ಕಾಮನಂತಬ್ಧಿಯಂ
ತಿರೆ ಚಂಚದ್ವ್ಯತಿಸಂಯುತಾನಿಮಿಷವೃಂದಂ ವ್ಯೋಮದಂತಬ್ಜವಿ
ಷ್ಟರನಂತುಜ್ವಳರಾಜಹಂಸವಿಭವಂ ರೌದ್ರಾನನಂ ಕಾನನಂ ೧೨೩

ಗಿರಿಯುದ್ದಂ ಬೆಳೆದಿರ್ಪನೇಕಕುಜದಿಂ ಬೇರ್ ಬಳ್ಳಿಗಳ್ ಸುತ್ತಿ ಮು
ತ್ತಿರಲಾ ಪೆರ್ಬೋದಱಿಂದೆ ಕತ್ತಲಿಸಲಾ ಕಾಂತಾರದಾ ಮಧ್ಯದೊಳ್
ತೆರಹಿಲ್ಲೆಂನೆನಿಸಿರ್ಪ ಪೆರ್ಮೆಳೆಗಳಿಂದೊತ್ತೊತ್ತಿನೊಳ್ ಕುತ್ತಱಿಂ
ದರಿಯಿಂದಾ ವನನಾವ ಧೀರನ ಮನಕ್ಕಂ ಭೀತಿಯಂ ಬೀಱದೇ ೧೨೪

ಪರ್ವಿದ ಬೆತ್ತದಿಂ ಬಿದಿರ ಹಿಂಡಿಲಿನಿಂದಮನೇಕವೃಕ್ಷದಿಂ
ಪರ್ವತದಿಂ ಗುಹಾಂತರಗಳಿಂ ಪರಿಯುತ್ತಿಹ ನಿರ್ಝರಂಗಳಿಂ
ಪೆರ್ಬುಲಿ ಭಲ್ಲುಕಂಗಳು ಲುಲಾಯ ವರಾಹನೆನಿಪ್ಪ ಕಾಡ್ಮೃಗಂ
ಸರ್ವಜನಕ್ಕೆ ಭೀತಿಯೆನಲೊಪ್ಪುತಲಿರ್ದುದಮೊಂದು ಕಾನನಂ ೧೨೫

ಮರೆ ಸಾರಂಗ ಕುರಂಗ ಸಂಕುಳಗಳಿಂ ಗೋಮಾಯುವಿಂ ಕೋಕ ಸೂ
ಕರಸಂದೋಹ ಸೃಗಾಲ ಭಲ್ಲುಕಗಳಿಂ ಶಾರ್ದೂಲದಿಂ ಋಕ್ಷಮುಂ
ಗುರಿ ಮುಂತಾದ ಮೃಗಂಗಳುಬ್ಬರದಿಂ ಕಂಡಾಗಲ್ಲಿ ಪೋಪರ್ಗೆ ಭೀ
ಕರಮುಂ ಮಾಡುತೆ ರೂಢಿಗಚ್ಚರಿಯೆನಲ್ ಕಾಂತಾರ ಕಣ್ಗೊಪ್ಪುಗುಂ ೧೨೬

ದೇಶ ವನಸ್ಥಳಂ ತರುಗಳೇ ತೆರುವೊಕ್ಕಲು ತತ್ಫಲಂಗಳೇ
ಕೋಶಭಟಾದಿಗಳ್ ವನಚರಾದಿಗಳಾ ಗಿರಿದುರ್ಗ ಪಟ್ಟಣಂ
ಭಾಸುರಮಪ್ಪ ಸಂಯಮಿಗಳಾಶ್ರಯಮಾ ವನದೇವಿ ರಾಣಿಯೆಂ
ಬೀಸು ಸಘಾಡದಿಂ ವನನೃಪಾಲಕನೊಪ್ಪಿದನೇನ ಬಣ್ಣಿಪೆಂ ೧೨೭

ಪರಶಿವಗೇಣನೊಂದುರೆ ನಿಶಾಪತಿಗೊಂದೆ ಸುರಾಧಿನಾಥಗಂ
ಕರಿಯಿಹುದೊಂದೆ ಕಾಲನಿಗೆ ಕಾಸರಮೊಂದೆ ಕುಮಾರಗೆಂತುಮೊ
ಪ್ಪಿರೆ ಶಿಖಿಯೊಂದಪ್ಪೆಸೆಯೆನಗಾ ಹರಿಣಂ ಕರಿ ಕಾಸರಂಗಳುಂ
ಬರುಹಿಯು ಲೆಕ್ಕವಿಲ್ಲಮೆನಗಾರ್ ಸರಿಯೆಂದೆಸೆದತ್ತು ಕಾನನಂ ೧೨೮

ಪೂರವದಲ್ಲಿಯಾ ರಘುಜನಾ ನಳನಾ ಯಮಸೂನು ಭೂಭುಜರ್
ಸಾರಲು ತನ್ನತನ್ನವರಿಗಾಶ್ರಯಮಾಗಿ ತಪಸ್ವಿಗಳ್ಗೆ ಮೋ
ಕ್ಷಾರತಮಪ್ಪವೊಪ್ಪುವ ತಪೋವನಮಿತ್ತು ಸಮಸ್ತ ಜೀವಕಾ
ಧಾರಮುದಾಗಿ ರಕ್ಷಿಸಿದ ಧರ್ಮಿಗಳಂತೆಸೆದತ್ತು ಕಾನನು (?) ೧೨೯

ಇರೆ ಶಬರಾಧಿರಾಜಕಟಕಂ ಕಟಕಂ ಕಟಕಂಧರೋಗ್ರಸಿಂ
ಧುರವೆನೆ ನಿರ್ಝರೋಲ್ಲಹರಿಯುಂ ಹರಿಯುಂ ಹರಿಯುಂ ವಿಜೃಂಭಿಪಾ
ಗಿರಿತಟದಲ್ಲಿ ದಾನಶಿಖಿಯುಂ ಶಿಖಿಯುಂ ಶಿಖಿಯುಂ ಪ್ರಭೂತಮಾ
ಗಿರೆ ಬೆಳಗಿ ತಮಂ ತವಿಪಿನಂ ವಿಪಿನಂ ವಿಪಿ[೧]ನಂತ[೧]ಮೊಪ್ಪುಗುಂ ೧೩೦
(ಜಗನ್ನಾಥವಿಜಯಂ ೧೬-೨)

ಕರಿದಾನದ್ರವಗಂಧ ಚಿತ್ರವಿಹಗಸ್ತ್ರೋತ್ರವಾರುತಂ ಮಾರುತಂ
ಬರೆ [೨]ನೋಟ್ಟಿರ್ಗಿ[೨]ದಿರಂ ಪಳಂಚಲೆದು ಮೇಘಧ್ವಾಂತಮುಂ ಧ್ವಾಂತಮುಂ
ಪರಪುತ್ತಿರ್ದುದು ತನ್ನೊಳೊಂ[೩]ದದಿರೆ[೩] ತೇಜೋನ್ಯೈಹಿಸಂ ನ್ಯೈಹಿರಂ
ತರುಶಾಖಾನಿಕುರುಂಬಚುಂಬಿತ ದಿಶಾನೀಕಾನನಂ ಕಾನನಂ ೧೩೧
(ಜಗನ್ನಾಥವಿಜಯಂ ೧೬-೩)

ಜರದಹಿಫೂತ್ಕೃತಂ ವಿಹಗಚೀತ್ಕೃತಮುದ್ಧತ ಘೂಕಹುಂಕೃತಂ
ಕರಿಕರಸೂತ್ಕೃತಂ [೪]ಪನನಸೀತ್ಕೃತ[೪]ಮುದ್ಗತವೇಣುಝುಕೃಂತಂ
ಗಿರಿಜನದೀಜಳತ್ಕೃತಮಿಭಾರಿಘುಳತ್ಕೃತಮುಗ್ರದಾವಸಂ
ಚರಣಧಗತ್ಕೃತಂ ಮಹಿಷಶೃಂಗಟಣತ್ಕೃತಮಾ ವನಾಂತರಂ ೧೩೨
(ಜಗನ್ನಾಥವಿಜಯಂ೧೬-೪)

ನಡುವಿರ್ದೆಟ್ಟಿರೆ ಚಿಕ್ಕಪೋತಕಳಭಂಗಳ್ ಕೂಡೆ ಸಾರ್ದಿರ್ಕೆಲಂ
ಬಿಡದಿಂಬಿಂ [೫]ಸೆ[೫]ಳೆಯಾನೆಗಳ್ ಬರೆ ಮರಂಗೊಂಡೊಂದು ಯೂಥಾಧಿಪಂ
ಪೊಡೆಯುತ್ತುಂ ಬರೆ ಮುಂದೆ ಪಿಂದೆ ಪೆಣ[೬]ತಿಂ[೬] ಮತ್ತೊಂದಿಭಂ ಪಜ್ಜೆಯಂ
ತೊಡೆಯುತ್ತುಂ ಬರೆ ಬರ್ಪ ಯೂಥಚಯದಿಂ ಜೆಲ್ವಾದುದಾ ಕಾನನಂ ೧೩೩
(ಜಗನ್ನಾಥವಿಜಯಂ, ೧೬-೫)

ಸುರಪತಿಯಂತೆ ವಿಸ್ಫುರಿತನೇತ್ರಸಹಸ್ರವಿರಾಜಿತಂ ನರೇ
ಶ್ವರ ಭವನಾಗ್ರದಂತೆ ದೃಢವೇತ್ರಲತಾಶತದುಷ್ಪ್ರವೇಶಮುಂ
ಬರತಳದಂತೆ ಋಕ್ಷಮೃಗಲುಬ್ಧಕಸಂಗತಮುಂಬುರಾಶಿಯಂ
ತಿರೆ [೭]ನುತ[೭] ವಿದ್ರುಮದ್ಯುತಿನಿರಂತರಮೊಪ್ಪುಗುಮಾ ವನಾಂತರಂ ೧೩೪
(ಕಾವ್ಯಾವಲೋಕನಂ ೩೩೮, ಸೂಕ್ತಿಸುಧಾರ್ಣವಂ ೩-೧೪೨)

---

೧ ನದ್ಧ (ಅ) ೨ ಕೃಷ್ಣಂಗಿ (ಅ) ೩ ದಿಸಿಲೆ (ಅ) ೪ ಪ್ಲವಗರೀತ್ಕೃತಂ (ಸ)
೫ ದೆ(ಅ) ೬ ಗಿಂ(ಅ) ೭ ತ (ಸೂ)

ಅರೆನೇರಿಲ್ ತಾರೆ ತುಂಬುರ್ತದಿಕಗಿಲೆಲವಂ ನೆಲ್ಲಿ ಬಿಲ್ವಾರ್ಜುನಂ ಕ
ನ್ಮರನಾಲಂ ಜಾಲಬೇಲಂ ಬಿಳಿಯರಳಿಯರಂ ಕಕ್ಕೆ ಹೂರಂ ಬೆಳಂ ಮಾ
ವರುಟಾಳಂ ಪಾರಿವಾಳಂ ತುಡುಕಡಸೊಡವಂ ಲಕ್ಕಿ ಕೋಟಕ್ಕಿ ದಿಂಡಂ
ಚಿರಬಿಲ್ವಂ ಬ್ರಹ್ಮವೃಕ್ಷಂ ಕಱುಕೆ ತರಿಯದಿಂದೊಪ್ಪುತಿರ್ದತ್ತರಣ್ಯಂ ೧೩೫

ವಿಕಸಿತ ಪುಷ್ಪದಂತರಳಿ ಕನ್ನಡಿಗರ್ ಕರೆವಂತೆ ಬನ್ನಿ ಬಂ
ಧಕಿಯರ ನಾಮದಂತೊಗೆವ ಪಾದರಿ ರೋಗಿಗಳಂತೆ ತಾರಿ ಪಾ
ವಕನ ಶರೀರದಂತಿರುಳಿ ಸುಂಕಿಗನಂತಿರೆ ಚಿಲ್ಲ ಸಂದ ಲಾ
ವಕನ ನಿಯೋಗದಂತೆಸೆವ ಬೊಬ್ಬುಲಿ ಪರ್ಬಿದರಣ್ಯಮೊಪ್ಪುಗುಂ ೧೩೬

ಅರಳದ ಪುಷ್ಪದಂತೆ ಮುಗುಳಂ ಮೊಗೆನಂ ತೊಳೆವಂತೆ ಬಾಗಿ ಮಾ
ತರಿಯದಳಂತೆ ಮೂಗಿ ಮಿಗಿಲುಂಡವರಂತಿರೆ ತೇಗು ಕ್ಷಾದುವಂ
ತಿರೆ ಕರವೀರ ಮುಯ್ ನಡುವಿನಂತೆರವಂ ಕೆರೆವಂತೆ ಪಾಲೆ ಶಂ
ಕರಸಖನಂತೆ ಹೊನ್ನೆಯಳಿಯುಂತೆರದಂತಿರರಣ್ಯಮೊಪ್ಪುಗುಂ ೧೩೭

ಇಂಗಳ ತಾಱ ನೇರಿಲೆ ಮಾಮರ ಕನ್ಮರವಾಲಜಾಲ ಮು
ತ್ತುಂಗವ ಕಾಚಿ ವೀಚಿಲರೆನೆಲ್ಲಿಗಳಾ ವರ ಸೋಗೆ ಬಾಗೆ ಚೆ
ನ್ನಂಗಿಗಳತ್ತಿ ಮತ್ತಿ ಬೇಳ ಬೆಲ್ಲವತಂ ಸುರಹೊನ್ನೆ ಹೊನ್ನೆಯುಂ
ಮಂಗರುವಳ್ಳಿ ಬಳ್ಳಿದುಱುಚಂಗಳಿನೊಪ್ಪುಗುಮಾ ವನಾಂತರಂ ೧೩೮

ನರಿ ಶಶಕಂ ವೃಕಂ ಶರಟಯೆಯ್ಯವೃಗಂ ಮರೆವಿಂಡು ಬೆಕ್ಕು ಮುಂ
ಗುರಿ ಮುಶಲಿಪ್ರಜಂ ಕರಡಿ ಮುಂಡಳಿ ಪೆರ್ಬುಲಿ ಮರ್ಕಟಾಳಿ ಸೂ
ಕರನಿಚಯಂ ಕುರಂಗತತಿಯುಷ್ಟ್ರಚಯಂ ಘನಖಡ್ಗಿ ಸೈರಿಭಂ
ಪುರುಷಮೃಗಂ ಗಜಂ ಶರಭ ಸಿಂಹದಿನೊಪ್ಪುವುದಲ್ಲಿ ಕಾನನಂ ೧೩೯

ಅರೆಗಿಳಿ ಪಾರಿವಂ ಕುರಲಿ ಲಾವುಗೆಯನ್ಯಭೃತಂ ಶರಾರಿ ಹೆಂ
ಗುರು ಚರಣಾಯುಧಂ ಶಕುನಿ ಚಂದನವಕ್ಕಿ ಚಕೋರಿ ಟಿಟ್ಟಿಭಂ
ಪರಡೆ ಕವುಂಜು ಚಾವಗೆ ಬಕಂ ಶಿಖಿ ವಾಯಸವಂಚೆ ಕೊಂಚೆ ತಿ
ತ್ತಿರಿ ಗಿಡಗಂಗಳೆಂಬ ಖಗವೃಂದದಿನಲ್ಲಿಯರಣ್ಯಮೊಪ್ಪುಗುಂ ೧೪೦

ಮುಂಡಕಿ ಚಕ್ರವಾಳ ಬಕದಾರ ಮರಾಳಸು ಜಕ್ಕವಕ್ಕಿಯಿಂ
ತೊಂಡಿಗ ಪಂಚವರ್ಣಗಿಳಿ ಕೋಕಿಲ ಕೇಕಿ ಶರಾರಿ ಟಿಟ್ಟಿಭಂ
ಗಂಡಭೆರುಂಡ ಸಾಳ ಗರುಡಾಳ ಭರದ್ವಜ ರತ್ನವಕ್ಕಿ ಸಾಳ್ಗಂಡಿನ
ಶುಂಡಮದೊಪ್ಪುತಿಪ್ಪುತಿಹುದಲ್ಲಿಯ ರೌದ್ರವರಣ್ಯಮಧ್ಯದೊಳ್ (?) ೧೪೧

ಅಳಿ ಗಿಳಿಯಂಚೆ ಕೊಂಚೆ ಪಿಕ ಚಾದಗೆ ಪೋದಗೆ ಕಾಕ ಘೂಕ ನಂ
ಡಳಿ ಪೊಲಸರ್ಲೆ ಬರ್ಲೆ ನರಹಂ ಗಲಿಹಂಗ ಹಸುಂಬ ಗುಬ್ಬಿಸಂ
ಕುಳ ಕುಲವಂತ ಕಂಕಸ ಮಯೂರ ಚಕೋರ ಶತಾರಿ ಝಲ್ಲಕಂ
. . . ಳಿಂ ವಿರಾಜಿಸುತಿರ್ಪುದನಾರತಮಾವನಾಂತರಂ (?) ೧೪೨

ವೀರಭಟಾಳಿಯಂತೆಸೆವ ಕಗ್ಗಲಿಯಿಂ ಕಡುಹಂದೆ ಕಾಳೆಗ
ಕ್ಕಾರದೆಯಾಲದಿರ್ಪ ವನರೀತಿಯೊಳಾಲದ ಭೂರುಹಂಗಳಿಂ
ನಾರಿಯ ಕರ್ಣಪೋಲೆಗಳ ನಾಮದ ಹಾಲೆಯ ಸಾಲುವೃಕ್ಷದಿಂ
ದಾರುಪಮಾನಕಂ ಪೊಗಟಲಾಶ್ರಯಮಾಗೆಸೆದತ್ತು ಕಾನನಂ ೧೪೩

ರೋಗದ ದೇಹಿಯಂ ನೃಪರುಮಿಪ್ಪ ನಿವಾಸಮ ಸೇರದಿಪ್ಪ ಪೈ
ರಾಗಿಯ ತೈಲಘಾತಕನ ಗಾಣದ ಸುತ್ತಿಹವೆತ್ತ ನೋಟಿಪ್ಪೊಡಂ
ರಾಗಿಪ ತಾರಿಯಿಂದೆಸೆವ ತೊಟ್ಟಗಳಿಂ ಸಲೆ ಗೇರುವೃಕ್ಷದಿಂ
ಮೇಗಡಸಿರ್ಪ ಕಂಟಕದ ಕತ್ತರಿಯಿಂದೆಸೆದತ್ತು ಕಾನನಂ (?) ೧೪೪

## ಗಜವರ್ಣನಂ

ಸ್ಥೈರಿಸಲಾರದುರ್ವರೆಯ ಭಾರಮನಲ್ಪಬಲಂಗಳಾ ದಿಶಾ
ವಾರಣರಾಜಿಗಳ್ ತಳೆವುವೀ ಮದವಾರಣವೃಂದದಿಂ ಮಹೀ
ಭಾರಮನೆಂದು ಧಾತೃ ಸಮಕಟ್ಟಿದ ವಾರಣಯೂಥಮೆಂಬಿನಂ
ವಾರಣಸಂಕುಳಂ ಬಗೆಗಗುರ್ವಿಸುತಿರ್ದುದದೊಂದು ತಾಣದೊಳ್ ೧೪೫

(ಜಗನ್ನಾಥವಿಜಯಂ ೧೬-೬)

ಅತಿಶಯಭದ್ರಮೂರ್ತಿಗೆ ಜಗಕ್ಕಿದು ಮಂಗಳಮೆಂದು ರೌದ್ರದೇ
ವತೆ ಬಟಿಂದಿಕ್ಕುವಾಮಿಷದ ಮುಟ್ಟಿಗೆಯೆಂಬಿನೆಗಂ ಪಿಡಿಲ್ದು ದಿ
ಗ್ಪತತಿಗೆ ಸೂಸೆ ಮುನ್ನಮೆಂಜಿಗೊಂಡರುಣಪ್ರಜವಾಗಳಾಸ್ಯದಿಂ
ಪ್ರತಿಘದೊಳೆತ್ತಿ ಬೀಸಿದುದದೊಂದು ಮದದ್ವಿರದಂ ಮಹಾಹಿಯಂ ೧೪೬

(ಜಗನ್ನಾಥವಿಜಯಂ ೧೬-೭)

ಸರಿಬಿಸೆ ಝಷಾಳಿ ಸಂಭ್ರಮಕರಂ ಮಕರಂ ಮಕರಂದರೇಣುಗಳ್
ಪರಿಬಿಸೆ ಕಲಂಕೆ ಕೊಡೆ ಕಮಲಂ ಕಮಲಂ ಕಮಲಂ ಮಹೋರ್ಮಿ ಪೊ
ಣ್ಮಿರೆ ಪೊಜಮಟ್ಟಿಭಂ ಬಿನದದಿಂ ನದದಿಂ ನದದಿಂಪ್ರವಪ್ರನಿ
ಷ್ಫುರವೆಜಗಿತ್ತಿಭಾಪಘನಮಂ ಘನಮಂ ಘನಮಂಶಜಾಲಮಂ ೧೪೭

(ಜಗನ್ನಾಥವಿಜಯಂ ೧೬-೯)

ಒಡಗೊಂಡೊಯ್ದೊಂದು ಪದ್ಮಾಕರಹಿಮಜಲವ[೧]ತುಂ ಂದು[೧] ಮೇಲೊಟ್ಟೆ ತಣ್ಪಂ
ಪಡೆದಂಭೋಜಾತಪತ್ರಂಗಳ ಕೊಡೆವಿಡಿದಲ್ಲಿಂ ನಿಕುಂಜಸ್ಥಳಕ್ಕೆ
[೨]ಯ್ದಿಡಿದುತ್ಪಲ್ಲಂಗಳಂ[೨] ಸಲ್ಲಕಿಯೆಳದಳಿರಂ ಪೇಚಕಸ್ಥಾನಮಂ ಕೈ
ದುಡುಕುತ್ತಾಘ್ರಾಣಿಸುತ್ತುಂ ಮಸೆಗನುವಶಮಾಗಿರ್ದು[೩]ದಲ್ಲೊಂ[೩]ದಿಭೇಂದ್ರಂ ೧೪೮

(ಜಗನ್ನಾಥವಿಜಯಂ ೧೬-೧೦)

ಬಿದುವೋ ಕೂಟಮೊ ಕರ್ಣತಾಳಮೊ ಪತತ್ರಕ್ಷೇಪಮೋ ನಿರ್ಗಲ
ನ್ಮದಮೋ ನಿರ್ಝರಮೋ ಲಲಾಟಮೊ ಶಿಲಾವಿಸ್ತಾರಮೋ ಕಣ್ಣಕೆಂ
ಪೊ ದವಜ್ವಾಲೆಯೊ ಮೆಯ್ಯ ಕರ್ಪೊ ಕರಿಕೋ ಪೇರಾನೆಯೋ ವಜ್ರಿಗೊ
ಡ್ಡಿದ ನೀಲಾದ್ರಿಯೊ ಪೇಱಿದೆಂಬಿನಮುಗುರ್ವಾದತ್ತು ಮತ್ತೊಂದಿಭಂ ೧೪೯

(ಸೂಕ್ತಿಸುಧಾರ್ಣವಂ ೩-೪೪, ಜಗನ್ನಾಥವಿಜಯಂ ೧೬-೮)

ಒರ್ಮೆ ವನಸ್ಥಳೀಕಮಲಪಾಂಸುವನಿಂಬೆನೆ ಮೆಯ್ಯೊಳೊಟ್ಟಿಕೊಂ
ಡೊರ್ಮೆ ಕರಾಗ್ರಮಂ ನೆಗಪಿ ಸಂಭ್ರಮದಿಂ ಪರಿದೊರ್ಮೆ ಶೈಲಸಿಂ
ಧೂರ್ಮಿಗೆ ಬೆರ್ಚಿ ತಾಯ್ವಿಡಿಯ [೪]ಸೋಗಿಲನೊ[೪]ಯ್ಯನೆ ಸೋಂಕಿ ನಿಲ್ವ ಮು
ದ್ದೊರ್ಮೆಯುಮೊಪ್ಪಿ ತೋಱಿ ಕಳಭವ್ರಜಮಿರ್ದುದದೊಂದು ತಾಣದೊಳ್ ೧೫೦

(ಜಗನ್ನಾಥವಿಜಯಂ ೧೬-೧೧)

ಮದಗಜಗಂಧದುದ್ದೆಸಕೆ ಭೋಂಕನೆ ಲಂಘಿಸಿ ಚಂದ್ರಕಾಂತಕೂ
ಟದ ಕೆಲದಲ್ಲಿ ನಿಂದಿಭದುದಗ್ರತನು ಪ್ರತಿಬಿಂಬಮಂ ಮದೇ
ಭದ ತನುಗೆತ್ತು ಪಾಯ್ದು ಶಿಲೆಯಂ ಮೃತವಾದುದಿಭದ್ವಿಷಂ ಬರ್ದುಂ
ಕಿದುದಿಭಮಂತೆ ನಿರ್ಮಲರ ಸನ್ನಿಧಿ ಮಾಱ್ಕುಮಪಾಯನಾಶಮಂ ೧೫೧

(ಜಗನ್ನಾಥವಿಜಯಂ ೧೬-೨೯; ಸೂಕ್ತಿಸುಧಾರ್ಣವಂ ೩-೬೭)

ಕೊಳದೊಳ್ ಬಾಲಮೃಣಾಳಿನೀ ಕಬಳಮಂ ಕಿಱಿತ್ತಿತ್ತು ಹಸ್ತಾಗ್ರದಿಂ
ತಿಳಿನೀರಂ ತೆಗೆದೊಯ್ದು ನೂಡಿಸಿ ಪರಿಮ್ಲಾನಾಸ್ಯದೊಳ್ ಶೀಕರಂ
ಗಳನೀಡಾಡಿ ಪೊದಱ್ದು ಪಚ್ಚೆಗೊಡೆಯೆಂಬಂತೆತ್ತಿ ಪಂಕೇಜಿನೀ
ದಳಮಂ ಬಾಳಕರೇಣುಸಂ ಬಯಕೆಯೊಳ್ ಕೊಂಡಾಡುತಿರ್ದತ್ತಿಭಂ ೧೫೨

(ಲೀಲಾವತಿ ೮-೪; ಸೂಕ್ತಿಸುಧಾರ್ಣವಂ ೩-೫೧)

---

[೧] ಕೊಂಡು (ಅ) [೨] ಯ್ದುಡಿಪತ್ತುತ್ಪಲ್ಲಮಂ (ಅ) [೩] ದಂದೊಂ (ಅ) [೪] ಸೋಂಕಿ
ಸೊಳೊ (ಸ)

ಪಿರಿದುಂ ಬಾ[1]ನೇಭ[1]ವೊಂದು ಸ್ಫಟಿಕಮಯಶಿಲಾಭ್ಯಂತರಾತ್ಮೀಯರೂಪಂ
ಕರಿಗೆತ್ತೆಯ್ತಂದು ಪಾಯಲ್ ಮುಱಿಯೆ ರದನಯುಗ್ಮಗಳಂ ತಂತೆ[2] ನೋವು
ತ್ತಿರೆ[2]ಗಣ್ಣಂ ಮುಚ್ಚಿ ತದ್ರೂಪಮನೆ ಕರಿಣಿಗೆತ್ತಾಡುತ್ತಾತ್ಮೀಯರೂಪಂ
ಕರಮಂ ಮೇಲಿಕ್ಕಿ ನಿಂದಿರ್ದುದು ವಿಪುಳಕುಭೃತ್ಕುಂಜದೊಳ್ ಕುಂಜರೇಂದ್ರಂ ೧೫೩
(ಸೂಕ್ತಿಸುಧಾರ್ಣವಂ ೩-೪೩)

ಬೆದಱಿ ಮನಂ ವನಸ್ಥಳದೊಳೊಂದಿಭಮಿರ್ದುದು ಮೂರ್ಧಪಿಂಡಮ
ಲ್ಲದು ಶಿಖರಸ್ಥಳಂ ನಿಟಿಲಮಲ್ಲದು ಪಾಸಱಿ ಕರ್ಣತಾಳಮ
ಲ್ಲದು ಚಳಪಕ್ಷಸಂಹತಿ ಮದಪ್ಲವಮಲ್ಲದು[3] ನಿರ್ಝರಪ್ಲವಂ[3]
ಮದಗಜಮಲ್ಲದಿಂದ್ರನೊಳಿದಿರ್ಚಿದ ನೀಳನಗೇಂದ್ರಮೆಂಬಿನಂ ೧೫೪
(ಪಂಪರಾಮಾಯಣಂ ೧೦-೧೫೯; ಸೂಕ್ತಿಸುಧಾರ್ಣವಂ ೩-೪೭)

ಮೆಡುತ್ತುಂ ಚಂದನಸಲ್ಲಕೀಕಬಳಮಂ ತತ್ಪಲ್ಲವಾನೀಕದಿಂ
ತೊಡೆಯುತ್ತುಂ ಮೊಗಮಂ ನೆೞಲ್ವಿಡಿಯುತುಂ ನಿಂದಚ್ಚಿಱಿಂ ಸೋಂಕುತುಂ
ಕಡೆಗಣ್ಣಿಂ ನಸುನೋಡುತುಂ ತುಡುಕುತುಂ ಚಿತ್ತೋದ್ಭವಸ್ಥಾನಮಂ
ಪಿಡಿಯಂ ಕಾದಪ್ರದಂಡಮಾದ ನಸೆಯೊಳ್ ಕೂಡಿತ್ತು ಮತ್ತೊಂದಿಭಂ ೧೫೫
(ಸೂಕ್ತಿಸುಧಾರ್ಣವಂ ೩-೪೯)

ಮೊರೆದೊಡವಾಯ್ತು ನಿರ್ಝರದ ನಾದಮುಮಂ ಮದಸೌರಭಕ್ಕೆ ತ
ತ್ಕರಟತಟಾಂತದೊಳ್ ಸುೞಿವ ತುಂಬಿಯ ನಾದಮುಮಂ ಪುಳಿಂದಸೌಂ
ದರಿಯರ ಗೀತನಾದಮುಮನಾಲಿಸಿ ಸೋಲ್ತು ನೆಱಲ್ದೊಱಲ್ದು ಸುಂ
ದರಗಿರಿಕಂದರೋದರದೊಳಿರ್ದುದದೊಂದು ಮದಾಂಧಸಿಂಧುರಂ ೧೫೬
(ಸೂಕ್ತಿಸುಧಾರ್ಣವಂ ೩-೫೨)

ಕೊಳದೊಳಗೊಂದಿ ಮಿಂದು ಬಸವೂವ್ರಡಿಯುಂ ತೆಗೆದೊಟ್ಟಿಕೊಂಡು ತ
ನ್ನಳಿನದುಕೂಲನಾಂತು ನೆೞಲಾದೆಡೆಯಲ್ಲಿ ಮಲಂಗಿ ಮೆಲ್ಲನು
ಬ್ಬಳಿಸಿದ ನಲ್ಮೆಯಿಂದೆ ಪಿಡಿಯುಂ ಪಿಡಿದಲ್ಲಿಯೆ ಕೂಡಿ ನಿಚ್ಚಲುಂ
ಸುಳಿವಳಿಗಳ್ಗೆ ದಾನಮಯಮಾಗಿರುತಿರ್ದುದದೊಂದನೇಕಪಂ ೧೫೭

ಕರಿ ಬರೆ ಕಯ್ಯ ನೀಡಡೆ ಕರೇಣುವಿರಲ್ಕದು ಕೋಪಮೆಂದು ಪೊ
ದ್ದಿರೆ ಹೊರೆಗೆಯ್ದದಿತ್ತ ತಳಿರಂ ತೆಗೆದಿಟ್ಟು ಸರಕ್ಕನೆಯ್ದಲಾ
ಕರಿ ಒಱಸಂದು ಮುಂದುವರಿದಡ್ಡಮಿರಲ್ ಬಸೆನೋಡಿ ನೋಡದಂ
ತಿರೆ ಮುಖಕುಂಭ ಮೇಚಕಕೆ ಕೈಯಿಡಲಾ ವಶವಶ್ಯವಾಯ್ತು ಹೋ(?) ೧೫೮

---

[1] ನಾಂಥ (ಸೂ) [2] ನೋಡುತ್ತಿರ (ಸೂ) [3] ವೃಷ್ಟಿಧಾರೆ ಸಂ (ಸ)

ಬರಿಗಯ್ಯಿತ್ತಿರಪೆಬ್ಬಿಸುತ್ತಡಿಗಳಂ ನೀವುತ್ತೆ ಸನ್ಮಾರ್ಗದೊಳ್
ಬರಿಸುತ್ತಂ ಕೊಳನಲ್ಲಿಗೊಯ್ದು ತನುವಂ ನೀರಿಂದೆ ತಾನುರ್ದುತಂ
ವರಪರ್ಣೌಘದೆ ಮೇಪನಿಕ್ಕಿ ವನವೃಂದಾರಾಮದಾಛಾಯೆಯೊಳ್
ಪೊರೆಯುತ್ತಿರ್ದಪುದಾ ಜರದ್ಗಜವನಾ ಪೆಣ್ಣಾನೆ ತಾತ್ಪರ್ಯದಿಂ ೧೫೯

ಪಸಿದೊಡೆ ಸಲ್ಲಕೀಕಿಸಲಯಂಗಳನೊಯ್ಯನೆ ನೀಡಿ ಮೆಯ್ಯ ತೀನ್
ಮುಸೆದೊಡೆ ಕೋಡೊಳಿಟ್ಟೊರಸಿ ನೀರ್ಗೆಳಸಿರ್ದೊಡೆ ತಂದು ನೀರನೂ
ಡಿಸಿ ನಸೆಯಿಂಚ್ಚೆಯಾದೊಡಗೂಡಿ ಬೞಲ್ದೊಡೆ ಕರ್ಣತಾಳವುಂ
ಪಸರಿಸಿ ತನ್ನ ಕೈಪಿಡಿಯವೋಲ್ ಪಿಡಿಯಂ ಪಿಡಿದಿರ್ದುದೊಂದಿಭಂ ೧೬೦
(ಚಂದ್ರಪ್ರಭಪುರಾಣಂ ೫-೬೪; ಸೂಕ್ತಿಸುಧಾರ್ಣವಂ ೩-೫೦)

## ಸಿಂಹವರ್ಣನಂ

ಕೆದಱಿದ ಕೇಸರಂ ಕುಸಿದು ಪಿಂದೊಗೆದೊಡ್ಡಿದ ಕಂಧರಂ ನೆಱೆ ಕ
ಟ್ಟಿದ ಬಸುರೆತ್ತಿದೇಕ ಚರಣಂ ತೆಱೆದಾನನವಾಳೆ ಸುತ್ತಿಸು
ತ್ತಿದ ಕುಡಿವಾಲವೊಪ್ಪೆ ಕಿವಿಗಳ್ ಕಿಱುಪುತ್ತಿರೆ ಪಾಯ್ದು ದೇವಕೂ
ಟದ ಕೞುವಿಟ್ಟ ಕೇಸರಿಯೊಲಿರ್ದುದು ಕೇಸರಿ ಕುಂಭಿಕುಂಭದೊಳ್ ೧೬೧
(ಲೀಲಾವತಿ ೮-೨೧ ಸೂಕ್ತಿಸುಧಾರ್ಣವಂ ೩-೬೨)

ಕರದ ನಖಂಗಳಿಂದುಗಿದು ಕೋಪದಿ ಸೀಳ್ದು ಸಿಱುಂಬುಳಾಡಿ ಕುಂ
ಜರಗುರುಕುಂಭಮಂಡಲದಿನಲ್ಲುಗುತಂದು ತುಳುಂಕಿಕೊಂಡು ನೆ
ತ್ತರ ಪೊಸಲಜ್ಜೆಯೊಳ್ ಕೆದಱಿ ಕಂಗೆಸೆದಿರ್ದುದು ರಕ್ತಸಿಕ್ತ ಕೇ
ಸರವೆಸೆದತ್ತು ಕೇಸರಿಯ ಬೀರದ ಬಿತ್ತುಗಳಂತೆ ಮುತ್ತುಗಳ್ ೧೬೨

ಉಗುವೆಂಟಂ ಮದವೆತ್ತಿ ಕಟ್ಟೆ [1]ವಿಸರ[2]ಚ್ಚೀತ್ಕಾರ ಭೀರುಸ್ವನಂ
ಮಿಗೆ ಬಾ[2]ಯೊಳ್ ಬರಿ[2]ಕೆಯ್ಯನಿಟ್ಟು ಸುಗಿವನ್ನಂ ಗರ್ಜಿಸುತ್ತೆಯ್ದೆ ಮು
ತ್ತುಗಳೆತ್ತಂ ಬಿದುವಿಂ ಸ್ವರೌದ್ರರಸಬಿಂದುಶ್ರೇಣಿಯೊಲ್ ಸೂಸೆ ದಂ
ತಿಗಳಂ ಸೀಳ್ದು ಸಿಱುಂಬುಳಾಡಿದುದದೊಂದುತ್ಕಂಠಕಂಠೀರವಂ ೧೬೩
(ಜಗನ್ನಾಥವಿಜಯಂ ೧೬-೧೨; ಸೂಕ್ತಿಸುಧಾರ್ಣವಂ ೩-೬೮)

---

[1] ವಿಲಸ (ಸ) [2] ಯಂಬಿಡೆ (ಸೂ)

## ಪಂದಿಯ ವರ್ಣನಂ

ಮಿಱುಗುವ ದಾಡೆಯಿಂದಣೆದು ಪೆರ್ದರಿಯಂ ಕರದಿಂದಮೆತ್ತುತುಂ
ತುಱುತುಱು ತಿಂಬ ಕಂದರಮು[1]ನಿ[1]ತ್ತರಗೊಂಡು ಮಹಾಮಹೀಜದೊಳ್
ತಱತಱನಾಗಿ ಮೂೞೂರಸುತುಂ ಮಲೆಯುತ್ತೊಲೆಯುತ್ತಮಲ್ಲಿ ಕೈ
ಪಱಿದ ಗಜೇಂದ್ರನಂತೆ ಬರುತಿರ್ದುದು ಭೀಕರನೊಂದು ಸೂಕರಂ ೧೬೪
(ಶೂದ್ರಕಂ—ಕಾವ್ಯಸಾರಂ ೧೧೧೨; ಸೂಕ್ತಿಸುಧಾರ್ಣವಂ ೩-೩೩)

ಉರಿ ತೀಡುತ್ತಿರ್ಪ ಕಣ್ಣಿಂದೆಳೆನೆೞಯೊಗೆದಂತಿರ್ಪ ಕೋರ್ದಾಡೆ ಪೊಯ್ವೆ
ತ್ತಿರೆ ಸಂಧ್ಯಾಕಾಲದಾಕಾರಮನನುಕರಿಸುತ್ತಿರ್ಪ ತನ್ನೊಂದು ಕಾಯಂ
ದರಿಯಂ ಕೋಡೆತ್ತಿ ಕೋಡೊಳ್ ತೊಡರ್ದು ಬಿಡದೆ ಸೊಕ್ಕಿರ್ದ ಬೆನ್ನಿಂ ದಿಟಂ ದಿ
ಕ್ಕರಿ ಕೈಬಿಟ್ಟಿರ್ದುದೆಂಬಂತೆಸೆದುದಡವಿಯೊಳ್ ದೀರ್ಘದೇಹಂ ವರಾಹಂ ೧೬೫

## ಭೇರುಂಡವರ್ಣನಂ

ಮರದಿಂದಾ ಸರ್ಪನಂ ಹಸ್ತಿಯೆ ಪಿಡುಗುಂ ಹಸ್ತಿಯಂ ಸರ್ಪನಂ ಕೇ
ಸರಿ ಕೋಪಾಟೋಪದಿಂ ಪಾಯ್ದಿರದೆ ಪಿಡುಗುಮಾ ಹಸ್ತಿಯಂ ಸರ್ಪನಂ ಕೇ
ಸರಿಯಂ ಸಿಂಹಾರಿಯೆಂಟುಂ ಪದದಲಿಱುಗುಮಾ ಹಸ್ತಿಯಂ ಸರ್ಪನಂ ಕೇ
ಸರಿಯಂ ಸಿಂಹಾರಿಯಂ ಪಕ್ಕದೊಳಿಱುಕಿಯೆ ಪಾಱುತ್ತು ಭೇರುಂಡಮಾಗಳ್ ೧೬೬

ಮರೆಯಂ ನುಂಗಿತ್ತು ಪೆರ್ಬಾವಜಗರಮನಿಭಂ ಕುತ್ತಿ ಸುತ್ತಿತ್ತು ಕೋಡೊಳ್
ಕರಿಯಂ ಪೊಯ್ದತ್ತು ಸಿಂಗಂ ಪಿಡಿದುದು ಶರಭಂ ಸಿಂಗಮಂ ಕೋಪದಿಂದಂ
ಮರೆ ಪೆರ್ಬಾವಾನೆ ಸಿಂಗಂ ಶರಭಮಿನಿತುಮಂ ಕರ್ಚಿ ಭೇರುಂಡನಂದಂ
ಬರದೊಳ್ ಪಾಱುತ್ತಿರಲ್ಕಚ್ಚರಿವಡೆ ತಲೆಯಂ ತೂಗಿದಂ ವಿಕ್ರಮಾಂಕಂ ೧೬೭
(ಸೂಕ್ತಿಸುಧಾರ್ಣವಂ ೩-೭೭)

ತುಂಡಯುಗಂಗಳಿಂ ನೆಗಪಿಕೊಂಡೆರಡಂ [2]ನೆೞ[2] ಪಾಱುಪೋಪ ಭೇ
ರುಂಡನ ತುಂಡದೊಂದು ಶರಭಂ ಜಗುಳ್ದೊಯ್ಯನೆ ಬೀ[3]ೞುವನ್ನೆಗಂ[3]
ಚಂಡಿಸಿ ಪಾಯಲೊಂದಿಟಿಯಲೊಂದೆ[4]ಳೆಯು[4]ತ್ತಿರೆ ವಕ್ತ್ರವಾ ನಭೋ
ಮಂಡಲದಲ್ಲಿ ನಿಂದುದನಭೀಕ್ಷಿಸಿದಂ ಕಲಿಸೋಯಿಬಲ್ಲಹಂ ೧೬೮
(ಲೀಲಾವತಿ ೮-೨೭; ಸೂಕ್ತಿಸುಧಾರ್ಣವಂ ೩-೭೮)

---

೧ ನೊ(ಸೂ) ೨ ಮಿಗೆ(ಸೂ) ೩ ೞ ಬೇಗದಿಂ(ಸೂ) ೪ ಟಿಲು(ಸೂ)

## ಪುಲಿಯ ವರ್ಣನಂ

ಮೆಳೆಯೊಳಡಂಗಿ ಕುಕ್ಕುಱಿಸಿ ಮುಂದಣ ಕಾಲ್ಗಳ ನೀಡಿ ಮೇಲೆ ತ
ತ್ತ್ರಲೆಯನಿಡುತ್ತ ಜೃಂಭಿಸುವ ಮುಕ್ಷ್ನಕಮುಂ ಕೊನೆವಾಲದಗ್ರದಿಂ
ತೊಲಗಿಸಿ ವಕ್ತ್ರಮುಂ ತಡವುತಂತರದಿಂ ಚರಿಸುತ್ತಮೊಪ್ಪುವೆ
ಕ್ಕಲಗಳ ನೋಡುತಂ ಪುಲಿಯದೊಂದಿರುತಿರ್ದುದನಂತರೌದ್ರದಿಂ ೧೭೯

ಪುಲ್ಲೆಯ ಹಿಂಡನೊಂದು ಪುಲಿ ಕುತ್ತಱಿಖೊಳೊಯ್ಯನೆ ಕಂಡು ಹಜ್ಜೆಯಂ
ಮೆಲ್ಲನೆ ಮೆಟ್ಟಿ ಹುಲ್ಲೊಳೆ ಹುದುಂಗಿ ಹುದುಂಗಿಯವಕ್ಕೆ ಲಂಘಿಸು
ತ್ತಲ್ಲಣದಿಂ ಕುನುಂಗಿ ನೆಱೆ ನಿಟ್ಟಿಸಿ ನೀಳ್ದ ಕೊರಳ್ಗೆ ಪಾಯ್ದು ತ
ಳ್ತುಳ್ಳಿದೆನೆತ್ತರಂ ಪಡೆದು ಪೀರ್ದೆಳೆದಿಕ್ಕಿದುದಿಕ್ಕೆದಾಣದೊಳ್ ೧೮೦

ಮೆಲ್ಲನೆ ನೀಡಿ ಮೆಟ್ಟುವಡಿ ನಿಶ್ಚಲವಾಲಮುರಲ್ದ ಕರ್ಣಮು
ಲ್ಲಲ್ಲಿಗೆ ನಿಂದು ನಿಳ್ಕಿ ನಸು ನೋಟ್ಪಿ ಪಿಶಂಗವಿಲೋಚನಂಗಳೊ
ತ್ತಿಲ್ಲದ ತಾಣದೊಳ್ ನೆಲಕೆ ಪರ್ಬುವ ಗಾತ್ರಮುಗುರ್ವನೀಯೆ ಪೆ
ರ್ಬುಲ್ಲೆಗೆ ಬಂದು ಸಾರ್ದುದು ತರಕ್ಷು ಮೃಗಾವಳಿಯಿಕ್ಕೆದಾಣಮಂ ೧೮೧

(ಸೂಕ್ತಿಸುಧಾರ್ಣವಂ ೩–೧೫೩)

ಚಲವಾಲಂ ಸ್ಥೂಲಗಾತ್ರಂ [೧]ವಿನಿಭೃತವದನಾಭೀಳ[೧]ರಕ್ತೇಕ್ಷಣಂ ಪೆ
ರ್ಬುಲಿ ತಾಮುರ್ಟ್ಟಾದುದಂ ಸಂಕಟದ ಸರಣಿಯೊಳ್ ಕಂಡು ಬಲ್ವಂದಿಯಂ ಪಾ
ಯಲೊಡಂ ಸ್ಕಂಧಾ[೨]ಗ್ರದೊಳ್ ಪಲ್ಕಡಿದೊಡಮುಗುರೊಳ್[೨] ಕೂರುಗುರ್ಗೊಯ್ಯೆ
ನೊಂದಾ
ಪುಲಿಯಂ ಪೋಟ್ದಿಂತೆ ಪೊಯ್ದೆತ್ತಿದುದು ಸರಿಸದಿಂ ಕ್ರೋಡನಾಂತೊಂದು ಕೋಡೋಳ್

(ಸೂಕ್ತಿಸುಧಾರ್ಣವಂ ೩–೩೨)

ತೀಡುವ ಗಾಳಿಯಿಂದಱಿದು ಮೈಸೊವಡಂ ಮೊಗಮೆತ್ತಿ ಸುತ್ತಲುಂ
ನೋಡೆ ಕಱುಂಕೆ ಸೂಸೆ ಕಡೆವಾಯ್ಗಳೊಳಾಲಿಸಿ ಕಾಲಸೊಪ್ಪಳಂ
ಕೂಡೆ ಪೊದಟ್ಟಿ ಪೊಣ್ಮಿದ ಭಯಾತುರದಿಂದಿರ್ದ[೩]ಗೂಡಿವಾಯ್ದು ಕೆ[೩]
ಟ್ಟೋಡಲೊಡ[೪]ರ್ಚಲಾ ವಿಪಿನದೊಳಾ[೪] ಪುಲಿ ಪಾಯ್ದುದು ಪುಲ್ಲೆವಿಂಡಿನೊಳ್

(ಸೂಕ್ತಿಸುಧಾರ್ಣವಂ ೩–೧೫೪)

---

[೧] ವಿಕೃತವದನಾಭೀಳ(ಸೂ) [೨] ದಿಂದಂ ಕಡಿದೊಡರುಗಳೊಳ್(ಸೂ) [೩] ವಾಯೆ ಗಂಡುಗೆ(ಸೂ) [೪] ರ್ಚಿ ಪೆಪ್ಪಳಿಪಿನಂ(ಸೂ)

ಮರದಡಿಯಲ್ಲಿ ಸೋವ ಕಳಭಕ್ಕೆ ಶಿಲಾಗ್ರದೊಳಿರ್ದು ಲಂಘಿಪಾ
ವರಹರಿ ತನ್ಮಹೀರುಹದ ಶಾಖೆಯೆನಲ್ವಯಲಲ್ಲಿ ತಾಗಿ ಬೀ
ೞ್ದಿರೆ ಶರಭಂ ಕಡಂಗಿ ಪೊಡೆದೆತ್ತುತಲೊಯ್ವುದು ಚಿತ್ರವಕ್ಕಟಾ
ಧರೆಯೊಳೆ ಮಾಡಿದಾ ಶಿಶುವಧಂ ಮಿಗೆ ಕೈಯೊಡೆ ತೋಱದಿರ್ಕುಮೇ ೧೭೪

ಪುಟುಗೆಱದಾಡೆ ನಿಚ್ಚನುಸೆದೊಂದೆಡೆಯಲ್ಲಿರೆ ಕಂಡು ರೋಷದಿಂ
ಘಟಿಯಲನೆ ತಾಗಲೆಂದು ಸೆಡೆದಿರ್ಪಿನಮಾವುದನಿಕ್ಕಲೆಂದು ಸಂ
ದೊಳೆ ಹರಿ ಪಾಱಿ ಕೊಡೆ ತಿವಿದಿರ್ದುವು ತದ್ಗಜಶೃಂಗದೇಱನೊಳ್
ಬಳಹರಿ ಬೀೞ್ವುದಾ ವಿಷಮಸಂಧಿಯೊಳಾವನನೆಯ್ದೆ ಬಾೞ್ವನೋ ೧೭೫

ಹರಿ ಪೊಯ್ಯಲ್ ಬಯಲಲ್ಲಿ ಬಿರ್ದಿಭಕೆ ಪಂದಲ್ಗಟ್ಟಿ ಕಾಸಾರಮಂ
ಕರದಿಂ ತೋಡಿ ಸುರಕ್ತಮಂ ತೊಳೆವುತೇಱಂ ಕಂಡು ರಂಭಾಚ್ಛದಂ
ಸ್ಥಿರಮಪ್ಪಂತುಱಿ ಕಟ್ಟಿ ಮೆಲ್ಲನುಸುರಾಡಲ್ ನೀರನೂಡಿಚ್ಛೆವೆ
ತ್ತುರು ಪರ್ಣೌಘಮನಿಕ್ಕಿ ಪೋಹುಗೊಳಲಾ ಪೆಣ್ಣಾನೆ ಕಾಯ್ದಾತ್ಮನಂ ೧೭೬

ಹರಿ ಕರಿಯಂ ತಗುಳ್ದು ಬರೆ ಸೂಕರನಾ ಕರಿ[೧]ಗಳ್ಕಿ[೧] ಪೊಕ್ಕು ಬಿ
ರ್ಚರ ಬಿಱವಂತು ಪೆರ್ಬಿದಿರನೆತ್ತಿಡೊಡಂತದು ತಾಗೆ ಮೇಘಮಂ
ಕರಿ ಮುಱದೊತ್ತೆ ಸೂಕರನನಾ ಕರಿಯಂ ಹರಿ ಮೆಟ್ಟೆ ನಿಲ್ದೊಡಂ
ಸುರಿದುವು ಮೇಘಜೇಭಜ ವರಾಹಜ ವೇಣುಜ ಮೌಕ್ತಿಕವ್ರಜಂ ೧೭೭

(ಸೂಕ್ತಿಸುಧಾರ್ಣವಂ ೩–೭೪)

ಬಳೆದ ಸಿಖಂಡವಳ್ಳಿಱಯೆ ಕೇಸರಿ ಸೀಳೆ ಸಮೀರಪಾತವ
ಗ್ಗಳಿಸೆ ಪುಳಿಂದರಾರ್ದಿಸೆ ಸಿಡಿಲ್ದುಗಿತಂದವು ಪುಷ್ಪಸಾಯಕಂ
ಗಳ ಪೊಗರ್ವಟ್ಟು ಚಂದ್ರಿಕೆಯ ಬಿತ್ತೆಳವಿಂಚಿನ ತತ್ತಿ ಕಾರಕಂ
ಗಳ ಮುಱಯೆಂಬ ವಾರಿಧರ ವಾರಣ ವೇಣು ವರಾಹ ಮೌಕ್ತಿಕಂ ೧೭೮

(ಜಗನ್ನಾಥವಿಜಯಂ ೧೬–೩೮)

ಅರುಣಾಕ್ಷಂ ರೌದ್ರರೂಪಂ ಘುರುಘುರುತಮುಖಶ್ರೇಣಿಶೃಂಗಂ ಶಿಲಾನಿ
ಷ್ಠುರದೇಹಂ ದೀರ್ಘವಾಲಂ ಕಠಿಣ ನಖಪುಟಂ ರೇಣುಭಾಳಸ್ಥಳಂ ಕ
ರ್ಬುರನಾದಂ ವೃತ್ತಕಾರಂ ಕುಸುಮಧವಳಿಮಂ ತೋಱ ಫೇನಂ ಕರಂ ಭೀ
ಕರಮಾಗಲ್ಕೊಪ್ಪುಗುಂ ಕಾನನದೊಳಿಭಸಮಾನಂ ಲುಲಾಯಪ್ರತಾನಂ ೧೭೯

---

[೧] ಗಂಜಿ(ಸೂ)

ಮುರಿದ ಕೊರಲ್ ನಿಮಿರ್ದ ಕಿವಿ ಕೆತ್ತುವ ಮೆಯ್ ಕಟವಾಯಪುಲ್ಲುಗಳ್
ತರಳವಿಲೋಚನಂ ಸೊವಡನಾಲಿಸಿ ಬೆಚ್ಚಿ ಬೆದರ್ತು ಬೇಗದಿಂ
ಸರಳಿಸಿ ನಿಂದು ನಿಂದು ಪೆಱಗಂ ನಡೆನೋೞ್ಪತಿಭೀತಿ ತಮ್ಮೊಳೆ
ಚ್ಚರಿವಡೆದಿರ್ಪ ಪುಲ್ಲೆಗಳಗೊಂದಣಮೊಪ್ಪಿದುವಾ ವನಾಂತದೊಳ್ ೧೮೦

ಕತ್ತಲಿಸಿರ್ದ ಪೇರಡವಿಯೊಳ್ ಸಲೆ ಬೆಳ್ಮಿಗ ಕೋೞ್ಮಿಗಂಗಳಂ
ಮಿತ್ತುವಿನಂದದಿಂ ತವಿಸಿ ಪನ್ನಗಲೋಕದ ಜೀವರಾಶಿಗಳ್
ಪೊತ್ತುವ ಮಾೞ್ಕೆಯಿಂ ಕಿಡಿಗಳಿಂದೊಗೆತರ್ಪರೊ ಭಿಲ್ಲರೆಂಬಿನಂ
ಪುತ್ತನಗುೞ್ದು ಪೆರ್ಗರಡಿಗಳ್ ಮೊಗವಿಟ್ಟಿಸೆಗಂ ವನಾಂತದೊಳ್ ೧೮೧

ಮರೆಯನೆಱೆಗೊಳ್ವ ಪಾವಂ
ಬರಿಕಯ್ಯೊಳ್ ಸುತ್ತಿಪಿಡಿವ ಹಸ್ತಿಯ ಸೀಳ್ವಾ
ಕರಿರಿಪುವನೊಯ್ವ ಶರಭನ
ಶಿರಮಂ ಭೇರುಂಡನೆತ್ತಿ ಪಾಱಿದುದಾಗಳ್ ೧೮೨

ನೀಲದ ಕೋಡುಂಗಲ್ಗಳೆ
ನೀಲದ್ಯುತಿ ಮುಸು[೧]ಱಿ ಮಸಳಿಸುತೆ ಮೇಗಣ[೧] ತಾ
ರಾಳಿಯ ಹಾದಿಯ ಬಟ್ಟೆಗೆ
ಶೈಲಂ ಬರೆ ತೊಲಗಿದಂತೆ ಕೆಲದೊಳ್ ತೋರ್ಕುಂ ೧೮೩
(ಲೀಲಾವತಿ ೯–೩೪ ಸೂಕ್ತಿಸುಧಾರ್ಣವಂ, ೩–೨೦)

ಪುದಿದಡವಿಯ ಕೞ್ತಲೆ ಶೂ
ಲದೊಳಿಕ್ಕಿದೊಡಿೞಿದು ಸೋರ್ವ ತಿಂಗಳ ಪೆಣನಂ
ದದೊಳಿರ್ದುದು ಕೞಿಗೊಕ್ಕು
ಬಿೞ್ದ ನೆಯ್ಯಿಂ ಜೇನಪುಟ್ಟೆ ಪೆರ್ಮರ[೨]ಗೊಂಬೊಳ್[೨] ೧೮೪
(ಲೀಲಾವತಿ ೬–೩೧; ಸೂಕ್ತಿಸುಧಾರ್ಣವಂ ೩–೮೩)

ಬೆಳಗಂ ಪಸರಿಸುವರುಣಾ
ಚಲದೊಳ್ ಮರೆ ನಿಲೆ ದವಾಗ್ನಿ ಮುಸುಕಿದುದದನಂ
ದೆಳಱಿ ಮಗನತ್ತಲಸುವಂ
ಕಳೆದುದು ಸುವಿವೇಕವುಂಟೆ ಮೋಹಾತುರರೊಳ್ ೧೮೫

---

[೧]ಱಿ ಮುಸುಳೆ ಮೇಗಣ ಮಿೞ್ೞ(ಸೂ) [೨]ಗಾಡೊಳ್(ಸೂ)

ಮರೆಯನೆೞಿಗೊಂಡು ಮಱಿ ಪ
ಟ್ಟಿರೆಯಿರೆ ಕಾದುರಿವ ಸೂರ್ಯಕಾಂತದಿನಿರದೆೞ್ಚ
ತ್ತಿರದೋಡಿದುದಜಗರವ
ಸ್ಥಿರಗುಣವುಳ್ಳರಿಗೆ ಆತ್ಮನೇಂ ನಿಲ್ದಪುದೇ ೧೮೬

ಒಡವಾರದೆ ಕೈದುಡುಕಲ್
ಸೆಡೆದೋಡುತೆ ಮೇವನಿಕ್ಕಲುಗುಳುತೆ ಪದದೊಳ್
ಕಡೆಯೊಳ್ ನಿಲುತುಂ ಕಳಭಂ
ಕಡುಮುಳಿದುದು ಮೊಲೆಯನೀಯದೆಯ್ದುವ ಪಿಡಿಯೊಳ್ ೧೮೭

ಒಕ್ಕಮದವುಂಬ ತುಂಬಿಯ
ನಕ್ಕಟ ಸಸಿನಿರದೆ ಪಿಡಿಯೆ ಪುಷ್ಕರದೊಳಗಡು
ಪೊಕ್ಕು ಮೊೞಿಯಲ್ಕೆ ಗನ್ನೆಗ
ದಕ್ಕಾಡುವ ಕಳಭವಿಭಕದೇಂ ಸಂತಸಮೋ ೧೮೮

ಹರನ ಮುರಹರನ ವಾಣೀ
ವರನ ಸುಧಾಕರನನೆಸೆವ ಸತ್ಕುಲದಿಂ ದಿನ
ಕರನ ವಾಸವನ ಬೆಸಗೊಳ
ಲಿರೆ ತನ್ನೊಳಗನ್ಯದಿಂದಮೆಸೆದುದರಣ್ಯಂ ೧೮೯

ಕರಿಯುಂ ಕಂಠೀರವನುಂ
ಹರಿಣನು ಪೆರ್ಬುಲಿಯುಂ ಮಹಿಷದರ್ದುರುಗಳು ಮುಂ
ಗುರಿಯುಂ ಖಗಮುಂ ಸಾಳ್ವಿಗ
ಳಿರಲಾಜ್ಞೆಯಲಿಂಬುಗೊಂಡನಾ ವನರಾಜಂ ೧೯೦

ಎಲ್ಲಾ ಜೀವದೊಳಂ ದಯ
ಮುಳ್ಳುದೆ ಸದ್ಧರ್ಮಮೆಂಬ ಶಾಸ್ತ್ರದ ಪವಣಂ
ಬಲ್ಲುದರಿ (?) ಕಾನನೋರ್ವಿಪ
ನಲ್ಲಿ ಚರಾಚರಾಮನೆಯ್ದೆ ರಕ್ಷಿಸುತಿರ್ಪಂ ೧೯೧

ಬಲಿಮುಖನ ಬಲದಿ ಸೀತಾ
ಲಲನೆಯನೊಯ್ದಸುರನಸುವ ಮುಸುಳಿಸಿ ಮತ್ತಾ
ಬಲಮಂ ತಾಳಿದೆ ರಘುಜಂ
ತೊಲಗಲು ಕಾನನಮಹೀಶ ಸಲಹಿದನವರಂ ೧೯೨

ಅದು ಸರಿವ ದೞುವಿನಾಗರ
ವದು ಭೂಜವ್ರಜದ ತಾಣಮದು ಮೃಗಸಂತಾ
ನದ ನೆಲೆಯದು ಶಬರಾನೀ
ಕದ ಜನ್ಮಸ್ಥಳವೆನಿಪ್ಪುದೊಪ್ಪುವರಣ್ಯಂ ೧೯೩

ಎಳಸಿ ಗಿರಿಯುಟ್ಟ ಪಟ್ಟಾ
ವಳಿಯೆನಿಕುಂ ತದ್ವನಂ ಲತಾವಳಿ ಪತ್ರಾ
ವಳಿ ಪುಷ್ಪಾವಳಿ ಹಂಸಾ
ವಳಿ ಮೃಗಾವಳಿಯ ಪಂಕ್ತಿಗಳಿಂದಂ ೧೯೪

ಹರನಂಗದಂತೆ ಮೆಱೆದುದು
ಗಿರಿಕರ್ಣಿಕೆಯಿರವಿನಿಂದಲಿರಲಾ ವಿಪಿನಂ
ಹರಿಯುರದ ತೆಱದಿ ಮೆಱೆದುದು
ಪರಿಭಾವಿಸೆ ವಿಷ್ಣುಕಾಂತೆಯಿರಲಾ ವಿಪಿನಂ ೧೯೫

ಹೊಸರೀತಿಯುಸುರ್ವ ಕವಿಗಂ
ಹಸಿತೃಷೆಯಿಲ್ಲದವನೆಯ್ದೆ ತಂಡುಲವಡುವಾ
ಸಸಿಮುಖಿಯ ಪೋಲ್ತು ಕಾನನ
ವೆಸೆದುದು ಬಗೆ ತೇಗು ಬಾಗೆ ಭೂಮೀರುಹದಿಂ ೧೯೬

ತರತರದಿಂದೆ ತೋರ್ಪ ಸರಿವಿಂ ದರಿವಿಂ ಪರಿವೊಳ್ಳ್‌ರಂಗಳಿಂ
ತರುಕುಳದಿಂ ಲತಾವಿಸರದಿಂ ಮಡುವಿಂ ಗಿಡುವಿಂ ಗುಹಾಳಿಯಿಂ
ಸರಸಿಗಳಿಂದೆ ಪೆರ್ಮೞೆಗಳಿಂ ಕೆಱೆಯಿಂ ತೊಱೆಯಿಂ ನದಂಗಳಿಂ
ಪರಿವೊನಲಿಂ ಬಿಲಂಗಳಿನರಣ್ಯದಿನಲ್ಲಿಯ ತಪ್ಪಲೊಪ್ಪುಗುಂ ೧೯೭

## ಶಬರರ ವರ್ಣನಂ

ಅದಱೊಳ್ ಭೀಕರಕಾಲಕಿಂಕರನಿಭಂ ಭೀಷ್ಮಾನನಂ ರೌದ್ರಸಂ
ಮದನೇತ್ರಂ ಘನಕೃಷ್ಣಕಾಯಕಠಿನಂ ಕಾಠಿನ್ಯಧರ್ಮಂ ಭಯ
ಪ್ರದ ಬಾಣಾವಳಿ ನಿಷ್ಠುರಧ್ವನಿಚಯಂ ನಾನಾಮೃಗಾಯುಷ್ಯದಾ
ಪದಲಂಕಾರದಿನೊ[1]ಪ್ಪೆ[1] ಲುಬ್ಧಕಕುಲಂ ತೀವಿರ್ಪುದಂತಾವಗಂ ೧೯೮

(ಗಿರಿಜಾಕಲ್ಯಾಣಂ ೧-೭೮)

---

[1]ಪ್ಪಿ (ಅ)

ಬಡಿಕೋಲ್ ಕಿಗ್ಗಟ್ಟು ಹಾಸಂ ಶುನಕವಿತತಿ ಹೇರಿಟ್ಟೆ ಕೂರಂಬುಗಳ್ ಕೈ
ಪೊಡೆ ಬಿಲ್ ಪುಲ್ದಂಡೆ ಬೆಳ್ವಾರ್ಪಟ ತೆರೆಬಲೆಗಳ್ ಸಾಳುವಂ ಕೂಳೆಗಾಳಂ
ಗಿಡುಗಂ ಬಲ್ವಂಡಿಯೊಳ್ ದೀಹದಪುಲಿ ನಿಶಿತಾಸ್ತ್ರಂಗಳುಗ್ರತ್ವಮುಂ ಸಂ
ಗಡಿಸು[೧]ತ್ತಿಂತೊ[೧]ಪ್ಪೆ ವಿಂಧ್ಯಾಟವಿಗೆ ನಡೆದುದ್ಯತ್ಕಿರಾತಪ್ರಜಾತಂ ೧೯೯
(ಗಿರಿಜಾಕಲ್ಯಾಣಂ ೧-೭೯)

ಇದು ನವಕಾಳಮೇಘಚಯಮಲ್ಲಿದು ಘೋರಮಹಾಂಧಕಾರಮ
ಲ್ಲಿದು ವಿಚಳತ್ತಮಾಳವನಮಲ್ಲಿದನಂತಕೃತಾಂತಸೈನ್ಯಮ
ಲ್ಲಿಮ ಕಲಿಕಾಲಬಂಧುಕುಳಮಲ್ಲಿದು ದುರ್ಧರದಾನವೌಘಮೆಂ
ಬುದುಮೆನಿಸಿರ್ದುದಲ್ಲಿ ಬರುತಿರ್ದುದನಂತಕಿರಾತಸಂಕುಳಂ ೨೦೦

ಮೈಟ್ಟಿದ ಕೆಪ್ಪು ಪೆರ್ಬಿದಿರಬಿಲ್ ಕುಡಿಮೀಸೆಯುಮೊಪ್ಪೆ ಕಾಗಿನೊಳ್
ದಟ್ಟಿಯು ಕುಪ್ಪಸಂ ತಲೆಗೆ ಸುತ್ತಿದ ನೇಣ್ ಪೆಱಗೆಯ್ದಿಸಿರ್ಪ ನಾಯ್
ಕಟ್ಟಿದ ಕಲ್ಲಿ ಕೆಂಗಱಯ ಕೋಲ್ ಗುರುಗುಂಜಿಯ ದಂಡೆಯೊಪ್ಪಲುಂ
ದಿಟ್ಟಿಗೆ ಚೆಲ್ವನಾಗಿ ಸುೞಂದಂ ವನದೊಳ್ ಶಬರಾಧಿನಾಯಕಂ ೨೦೧

ಉಡೆದೊವಲುಟ್ಟು ಕಾಳಿಕೆಯ ಕುಪ್ಪಸವಿಟ್ಟು ಪದಂಗಳಲ್ಲಿ ಮೆ
ಲ್ಲಡಿಗಳ ಸಾರ್ಚಿಕೊಂಡು ಹದವಿಲ್ಲು ಸರಳ್ಗಳನುಗ್ರನಾಯ್ಗಳಂ
ಬಡಿಗೆಯ ಕೋಲ್ಗಳಂ ಬಲೆಯ ದೀಹದ ಹಕ್ಕಿಯ ಕೂರಿತಿಟ್ಟೆಯುಂ
ಪಿಡಿದುಮರಣ್ಯದೊಳ್ ಚರಿಸುತಿರ್ದನದೊರ್ವ ಪುಳಿಂದನಾಯಕಂ ೨೦೨

ಎಕ್ಕಲನ ಭಯವ ಮನದೊಳ್
ಲೆಕ್ಕಿಸದ ಲುಲಾಯ ಪುಂಡರೀಕಗಳಿಂ ಗಂ
ಟಿಕ್ಕಿ ಬರುತಿರ್ಪ ಧೀವರ
ಮಿಕ್ಕಮೃಗಂಗಳಿನ ಭಯಮದಿನಿತಿಲ್ಲವನೊಳ್ (?) ೨೦೩

ತರಟುದಲೆ ಹುರುಪುವ್ಯೆ ಹೆ
ಬ್ಬಿರಿದಿಹ ಹಿಮ್ಮಡದ ಬೀಟೆ ಮೇಲಿಕ್ಕುವೞಿತೂಂ
ದರುವೆಯ ಪಡೆಯದನಾ ವನ
ಚರನೊಪ್ಪಿದನಲ್ಲಿ ಬಲೆಸಮೇತಂ ಬನದೊಳ್ ೨೦೪

---

[೧] ತ್ತಿ ದೊರ್ (ಅ)

ವಾಗುರಿಕೆಯ ನೆಲೆವೇಟದ
ಮೇಗಣ ಪರಿಪಕ್ವಬಿಂಬಫಳರಸಮಂ ಪೀ
ರ್ದಾಗಳೆರ್ದೆದಣ್ಣನೆ ದಣಿ
ದೋಗಡಿಸುವನುಱಿದ ಪಣ್ಣನೆಲ್ಲಂ ಭಿಲ್ಲಂ ೨೦೫

ಕೆಲದೊಳ್ ಪುಳಿಂದಿಯಿರೆ ಪೆ
ರ್ಬುಲಿ ಬಂದೊಡನುಂಜನಳ್ಕನೋಡಂ ನೋಡಂ
ಚಲದಿಂ ಕಾಡಂ ಕಾಡಂ
ಸಲೆ ಪಸಿವಂ ಮಱೆದು ತಣಿದು ಬೇಡಂ ಬೇಡಂ ೨೦೬

(ಗಿರಿಜಾಕಲ್ಯಾಣಂ ೧-೧೧೭)

ನಿಂದಂನಿಂದಂತುವೀ ವೀರದ ರದನಿ ಕರಂ ಬಂದೊಡಂಬಂದೊಡಂ ಗೊಂ
ಡಂದಾವಂದಾವನಂತಿಪ್ಪಸರಪಸರಮಂ ಕಾಣ್ಬನಾ ಮಾತದಿರ್ಕೆ
ನ್ನಂದಂ ನಂದಂ ಕನಲ್ದಿರ್ಪೊಡೆ ಪೊಡೆ ಪುಲಿಯಂ ಬೇಗದಿಂ ಬೇಗದಿಂದಂ
ಬಂದಂ ಬಂದಂತೆ ಕೊಂದಿಕ್ಕುವ ಕುವರನನಂ ಸೋಂಕಿರಾತಂ ಕಿರಾತಂ ೨೦೭

(ಗಿರಿಜಾಕಲ್ಯಾಣಂ ೧-೧೨೪)

ಬಿದಿರಂ ಬಿದಿರಂ ನಡೆನಡೆ
ಯುದೆಯುದೆ ಪಿಡಿಪಿಡಿಗೆ ಬಂದ ಕರಿಯಂ ಕರಿಯಂ
ಪದೆದೆಚ್ಚಂ ಕಲಿಕಲಿ ಪೇ
ಸದೆ ಸದೆದಪೆನೆಂದು ಬೇಡರೆನೆ ನಲಿದೆಸುವಂ ೨೦೮

(ಗಿರಿಜಾಕಲ್ಯಾಣಂ ೧-೧೨೫)

ತಿರುವೊಳೆ ಕೋಲನಿಟ್ಟು ತೆಗೆಯಲ್ಕದು ನೆಲ್ಲನಿತೆಯ್ದೆ ಜಾರಲಾ
ಹರಿಣನನೆಚ್ಚೊಡುರ್ಚಿ ನೆಲದೊಳ್ ಮೊನೆದೋರ್ಪುದು ಚೋದ್ಯಮೆಂತು ಭಾ
ಪುರೆ ವಧುಲುಬ್ಧ ನಿನ್ನನವಳೊಂದಿರಲಾವಗಮೊಲ್ದು ಮೋಹದಾ
ತರುಣಿಗೆ ಪೇಟವೇಟ್ಟುದೆನೆ ನಕ್ಕುದು ಭಿಲ್ಲರದೊಂದು ಸಂಕುಳಂ ೨೦೯

ಸಿಂಹಶಿರಸ್ಥ ರತ್ನತತಿಯಂ ಗಜಮಸ್ತಕಮೌಕ್ತಿಕಂಗಳಂ
ಸಂಹರಿಸುತ್ತಲೊರ್ವ ಶಬರಂ ಕಡುಚಂದದ ಬಾಲೆಗಿತ್ತು ಮ
ತ್ತಂ ಹೊರೆಗೆಯ್ದದೀಕೆಯ ಕುಚಂ ಬಳೆಮೊಡ್ಡಿದೊಡೆನ್ನ ಕಯ್ಯ ಬಿಲ್
ತಾಂ ಹದನಾದೊಡಂ ತಿಳಿಯಲೆಳ್ಳನಿತೆಯ್ದದುಮೆಂದು ಚಿಂತಿಪಂ ೨೧೦

ಕರ್ಬೊನ್ನಿಂದಂ ವಿಧಾತ್ರಂ ಸಮೆದನಿವನನೆಂಬೊಂದು ಕಾರ್ಕಶ್ಯದಿಂದಂ
ಸರ್ಬಾಂಗಂ ಕಣ್ಗ ಗುರ್ವಂ ಪಡೆಯಲಡವಿಯುಂ ಕೂಡೆ ಕಾಳಿಂದಿ ಸುತ್ತಂ
ಪರ್ಬಿತ್ತೆಂಬೊಂದು ನೀಲೋತ್ಪಲದ ರುಚಿರ ಶ್ಯಾಮಹೇಮಾಂಶುಜಾಲಂ
ಪರ್ಬಲ್ ಬಂದಂ ಪುಳಿಂದಪ್ರಕರಬಹುಳಸೇನಾಪರೀತಂ ಕಿರಾತಂ ೨೧೧

(ಕಾದಂಬರಿ ಪೂ. ಭಾ. ೧೬೫, ಸೂಕ್ತಿಸುಧಾರ್ಣವಂ ೩–೧೦೬)

## ಶಬರೀವರ್ಣನಂ

ಚಿತ್ರದ ಕಂಕಣಂ ಬಳಹದೋಲೆ ಕುರುಳ್ಗಳವಟ್ಟೆ ಕಾಡಪೂ
ಕತ್ತರಿವೀಲಿಯುಳ್ಳಡೆ ವನೇಭಜಮೌಕ್ತಿಕಹಾರಯಷ್ಟಿ ಬೆಂ
ಗೊತ್ತಿದ ಬಿಲ್ಸರಳ್ ಗದಗದಿಪ್ಪ ಕುಚಂ ಸುಲಿಪಲ್ಲಕಾಂತಿ ಚೆ
ಲ್ವೆತ್ತಧರಂ ಮನಂಗೊಳೆ ಪುಳಿಂದಿಯರೊಪ್ಪುಗುಮಾ ವನಾಂತದೊಳ್ ೨೧೨

ತಳಿರ ಸವಂಗ ಪೂತ ಸೆಳೆಗೊಂಬಿನ ಬಿಲ್ ನವಪುಲ್ಲಕಂಕಣಂ
ಬಿಳಿಯಸಿಯಂಬು ಮಾಂದಳಿರ ಕೈಪೊಡೆ ತೋರದುಱುಂಬಿನೊಳ್ ತೆಱಂ
ಬೊಳೆವಲಗೊಂಚಲೊಪ್ಪೆ ತನು ನೀಲಶಲಾಕೆಯೊಲಾಗೆ ಕಾಮನಂ
ತಳವಡೆ ನಿಂದಳಂದು ಪೊಲೆಬಾರದ ಬಾಲೆ ಪುಳಿಂದಲೀಲೆಯಿಂ ೨೧೩

(ಲೀಲಾವತಿ ೮–೨೮, ಸೂಕ್ತಿಸುಧಾರ್ಣವಂ ೩–೨೦೭)

ಪೊಳೆದು ಕದಂಪನಪ್ಪಳಿಸಿ ಪಾಲೆಯೊಳೊಪ್ಪುವ ದಂತದೋಲೆಯಿಂ
ದಳವಡೆ ಲೀಲೆಯಿಂ ಮಸಿಯ ಬಣ್ಣದ ಜೇಡಿತಿ ತಪ್ಪಿಲೊಳ್ ಥಳ
ತ್ಥಳಿಸುವ ತೋರಮುತ್ತುಗಳನಾಯ್ದಳಗಂ ಮುಗಿಲಂ ಪಳಂಚಿ ಬಿ
ರ್ದೞೆಯುಡುಜಾಲಮಂ ಹಿಮಕರಂಬೆರಸಾಯ್ದ ನಿಶಾವಧೂಟಿಯೊಲ್ ೨೧೪

(ಲೀಲಾವತಿ ೮–೩೬; ಸೂಕ್ತಿಸುಧಾರ್ಣವಂ ೩–೨೧೪)

ಸುಲಿಪಲ್ ಕೆನ್ನೆಯ ಕೆಂದಳಿರ್ ಪೊಗದ ಖಾಡಾಖಾಡಿ ಪುರ್ಬಿಕ್ಕಿತುಂ
ಗೆಲವಿಂ ಕೆಕ್ಕುವ ಪೆಚ್ಚುವಾತು ನಡೆನೋಡುತ್ತಿರ್ಪೊಡಾ ಸ್ಥೈಪಿಸಿಂ
ಪೊಲೆ ನೂಂಕಲ್ ನಸುಜಾರ್ವ ಪೇಲುದು ನಯುಂಪೋರ್ಪಂಗದಂತಸ್ಸ್ತದಾ
ಸೆಲೆಯಂ ಸೂಚಿಪ ಕಣ್ಣ ಭಾವದ ಪುಳಿಂದಸ್ತ್ರೀಯರೇಂ ಬಂದರೋ ೨೧೫

ಕಮಲಜನಿಲ್ಲಿ ಬೈತನೊಲವಿಂ ಕುಮುದೇಕ್ಷಣ ವಜ್ರದಂತವಿ
ದ್ರುಮರದನಚ್ಛದಂಗಳನನುರ್ಚಿದ ಜಂಗಮನೀಲಪುತ್ರಿಕಾ
ಸಮಿತಿಯನೆಂಬಿನಂ ಮಿಸುಪ ಕಣ್ ಸುಲಿಪಲ್ಲರುಣಾಧರಂ ಸಕಾ
ಳಿಮ ತನುಲೇಖೆಯೊಪ್ಪಿರೆ ಪುಳಿಂದಿಯರಿರ್ದರದೊಂದು ತಾಣದೊಳ್ ೨೧೬
(ಜಗನ್ನಾಥವಿಜಯಂ ೧೬–೧೭)

ಕಮಳನಯನಂ ಕಂಬುಗ್ರೀವಂ ಘನಸ್ತನಮಂಡಲಂ
ಭ್ರಮರರುಚಿಮತ್ಕೇಶಂ ಬಿಂಬಾಧರಂ ನಳಿತೋಳ್ ಬೆಡಂ
ಗಮರ್ದಿರೆ ಮೊಗಂ ರಂಭಾಸ್ತಂಭೋರು ತೆಳ್ವಸಿಱುಪ್ಪೆ ವಿ
ಭ್ರಮದ ಕಣಿಯಂ ಪೋಲ್ತರ್ ನಿಲ್ತಲ್ಲಿ ಬೇಡಿತಿಯರ್ ಕೆಲರ್ ೨೧೭
(ಕಾವ್ಯಾವಲೋಕನಂ –೬೭೮–)

ಅಲರ್ಗಣ್ ಪೊಂಗಿದ ಲೋಳೆವಾಯ್ ನಗೆಮೊಗಂ ತೊಂಗಲ್ಗುರುಳ್ ಕೆಂದಳಂ
ಸುಲಿಪಲ್ ಸೋರ್ಮುಡಿ ತೆಳ್ವಸಿಱ್ ಪೆಱೆನೊಸಲ್ ಪೊಂಬಾೞೆ ಪಚ್ಚೋಲೆ ನೇ
ಱಲಪಣ್ಣಂ ತಿಳಿಯೆಣ್ಣೆಯೊಳ್ ತೊಳಸಿ ತೊಯ್ದಂತಿರ್ಪ ನುಣ್ಗುರ್ಪು ಪೆ
ರ್ಮೊಲೆ ಚೆಲ್ವಾಗಿರೆ ನಿಂದ ಬೇಡಿತಿಯರಂ ಕಂಡಂ ನೃಪೇಂದ್ರಾತ್ಮಜಂ ೨೧೮
(ಕಾವ್ಯಾವಲೋಕನಂ ೨೦೬; ಸೂಕ್ತಿಸುಧಾರ್ಣವಂ ೩–೨೧೫)

ಕಾಡಿಗೆಯೆಚ್ಚಿ ಪಲ್ಸುಲಿದು ಕೆಂದಳಿರಂ ನಿಱಿಯುಟ್ಟು ಮೊಲ್ಲೆಯಂ
ಸೂಡಿ ಮದೇಭಮಸ್ತಕದ ಮುತ್ತಿನಹಾರಮನಿಕ್ಕಿ ಬೇಡನಂ
ಬೇಡಿತಿ ಬೇಡಿ ತಂಬುಲಮನಾನನಮಂ ಮಿಗೆ ನೋಡೆ ಪಂದಿ ಕೋ
ಡಾಡಿಸಿದಂದಮಾಯ್ತುಡರೆ ನೋಡಿದ ನೋಟಮಪೂರ್ವ[1]ರೂಪೆಯಂ[1] ೨೧೯
(ಸೂಕ್ತಿಸುಧಾರ್ಣವಂ ೩–೨೧೬)

ಸನ್ನೆಯ ಬಲ್ಲವಳ್ ಬರಲಿ ನಿಂತಿದಿರಾಡುವಳ್ಳೈದಲಿಂಗಿತಂ
ತನ್ನೆಡೆಗೊಂಡವಳ್ ತೆರಳಿಲಿಚ್ಛೆಯನೀವವಳೊಲ್ದು ಕಾಣಲೆಂ
ದುನ್ನತ ನೂತ್ನಮಪ್ಪ ಸುಡಿಗಾರ್ತಿಯರಂ ನಡೆಗೊಳ್ಳಲೀಗಲಾ
ತಂ ನವಮನ್ಮಥಂ ಚದುರೆ ಸಿಂದಿರಡೆಯ್ದಿತು ಲುಬ್ಧಕೀಜನಂ (?) ೨೨೦

ಜಲಕೇಳೀದ್ರವದಿಂಪೆ ನಾಂದ ತೆಱದಿಂಪೋಲಾಡಿ ಪೂಗೊಯ್ದು ಪೂ
ಗೊಳದಿಂದಂ ಪೊಱಮಟ್ಟು ನಿಂದ ಶಬರೀಸಂದೋಹವಂದಾದಿಯು
ಷ್ಪಳಿಕಾನೀಕದಿನೊಕ್ಕ ನೀರ್ವನಿಗಳಿಂ ತೀರಂ ಸಮಂ ಬಾಗೆ ಪೊ
ಯ್ದಳೆ ಜಾಲಂಗಳಿನಿಂದ್ರನೀಲಮಣಿಯುಂ ಕಟ್ಟಿರ್ದವೋಲೊಪ್ಪುಗುಂ (?) ೨೨೧

[1] ದೂಱಿಯಾ (ಸ)

ಆನೆಯ ನೆತ್ತಿಯಂ ಬಿರಿವಿನಂ ಪರಿದೆಚ್ಚುದಿರ್ದಜ್ಜಮುತ್ತನೇಂ
ತಾನೆ ವಿನೋದದಿಂ ತುಡಿಸನೇ ಪೊಲೆಬಾರದ ಮುನ್ನಮೀಗಳಾ
ಯ್ತೇನೆಸಕಂ ನಿನತ್ತು ಪತಿಗೀ ಪೊಸಜವ್ವನದೇಟಿಗ್ಗಿಯಿಂ ನಿಜೋ
ತ್ಪೀನ ಕುಚಂಗಳೊಳ್ ಪಿರಿಯ ಮುತ್ತಿನಹಾರಮನಿಕ್ಕುತಿರ್ದಪಂ ೨೨೨

(ಲೀಲಾವತಿ ೮-೩೭)

ಕರಿಕುಂಭೋದ್ಭವ ಮೌಕ್ತಿಕಪ್ರತತಿಯುಂಟೀ ನಿಮ್ಮೊಳೆಂದೆನ್ನಲಾ
ಕರಿಯಾನಾಲಸೆ ಬೇಡನಬ್ಬೆ ಸೊಸೆಯಂ ಕಣ್ಸನ್ನೆಯೊಳ್ ತೋಱಿದಳ್
ಕರಿಕುಂಭಪ್ರತಿಮಾನಕುಂಭಕುಚೆಯಾದಂದಿಂದ ಮುಗ್ಗೇಹದೊಳ್
ಕರಿಕುಂಭೋದ್ಭವ ನಾಸ್ತಿಯೆಂದಳಿದು ತಾನೇನೆಂಬ ತಾತ್ಪರ್ಯಮೋ ೨೨೩

ಹರಿಯಂ ನೋಯಿಸಿ ನಾಲ್ಕು ವಾಸರದೊಳಾಂ ತಂದಾ ಲಸದ್ರತ್ನಮಂ
ಪೆರರ್ಗೇಂ ತೋಱುವುದಲ್ಲಿವಾನೆಯ ಸುಮುಕ್ತಾನೀಕದೊಳ್ ಕೂಡಿ ತಾಂ
ಪರಿಗೆಯ್ಯಲ್ ಮಿಗೆ ಪಚ್ಚೆಸಾಟಿ ಬೆಲೆಯೆಂದಾ ಬೇಡವೆಣ್ ಮಾತಿಗಾ
ಹರದಂ ನಕ್ಕುರೆಯೇನುಮಂ ಕುಡದೆ ಪೋದಂ ನೋಡಲೇಂ ಚಿತ್ರಮೋ (?) ೨೨೪

ಬಿಡುಗಿವಿ ಮಿಂಚುವೆತ್ತ ಸುಲಿಪಲ್ ಕುಣಿದಾಡುವ ಕುಂತಳಂ ನೊಸಲ್
ಬಿಡಿದ ಬೆಮರ್ ಕದಕ್ಕದಿಪ ಪೆರ್ಮೊಲೆ ಪಾಡುವ ಸುಪ್ಪಿಯಿಂಚರಂ
ಪಿಡಿವ ತಳಿಕ್ಕೆ ಬಲ್ಪೊನಕೆ ಜಾಱುವ ಸೋರ್ಮುಡಿ ನೀಡಿದಂಘ್ರಿ ಚೆ
ಲ್ಪಡೆದಿರಲಕ್ಕಿಗುಟ್ಟುವ ಪುಳಿಂದಿಯರೊಪ್ಪುಗುಮಾ ನಗೇಂದ್ರದೊಳ್ ೨೨೫

ನನೆವೆರಸುಟ್ಟ ಮಾಂದಳಿರುವೊಪ್ಪಿರೆ ಕಾಡಲರಿಂ ತುಱುಂಬಿ ಚಂ
ದನದೊರಳಲ್ಲಿ ಪೊಯ್ದು ಬಿದಿರಕ್ಕಿಯನುನ್ಮದದಂತಿದಂತದೊಂ
ದೊನಕೆಯನೆತ್ತಿ ಸುಣ್ಣನಿಯ ಸುಪ್ಪಿಯ ಗಾವರದೊಳ್ ತೊಡರ್ಚಿ ಜ
ನ್ಪನಿಗ ಪುಳಿಂದಿ ಪಾಡಿದಳೊಜಲ್ದು ಮನಃಪ್ರಿಯನಂಕಮಾಲೆಯಂ ೨೨೬

(ಲೀಲಾವತಿ ೮-೩೦, ಸೂಕ್ತಿಸುಧಾರ್ಣವಂ ೩-೨೦೮)

ತುಱುಗೆವೆಗಣ್ಣ ಕಾಂತಿ ಮರಗಟ್ಟಿಲೆಯಂ ಬೆದಱಟ್ಟೆ ತೊಂಡೆವಾ
ಯ್ದೆಱೆ ಕಿಸುಸಂಜೆವೀಱೆ ದಶನಾಂಶು ರಸನಾಮೃತಪೂರಮೆಂಬಿನಂ
ತುಱುಗಿರೆ ಸಿಂಹವಾನೆ ಪುಲಿಪುಲ್ಲೆ ನವಿಲ್ ಫಣಿ ತನ್ಮ ವೈರಮಂ
ಮಱೆದೊಡನಾಲಿಸಲ್ ಶಬರಿ ಪಾಡಿದಳಚ್ಯುತನಂಕಮಾಲೆಯಂ ೨೨೭

(ಜಗನ್ನಾಥವಿಜಯಂ ೧೬-೨೫, ಸೂಕ್ತಿಸುಧಾರ್ಣವಂ ೩-೨೧೭)

ರಾಗರಸಂ ಪೊನಲ್ವೊನಲನಟ್ಟುವಿನಂ ಕವಿತಂದು ತೋಯ್ವವೋಲ್
ತೂಗುವ ಕೆಂದಳಿರ್ ತೊಲಗೆ ತುಂಬಿಯ ಬಣ್ಣದ ಮೆಯ್ಯ ಬಣ್ಣದಿಂ
ಕೋಗಿಲೆಯಂತೆ ಕಣ್ಗೊಳಿಸುತಂ ಕಳಕಂಠಿಕೆ ಕೊಂಬನೇಱಿ ಕಾ
ಟ್ಬೊಗಳ ಸೂಡುತಂ ಶಬರಿ ಪಾಡಿದಳಾಗ ಕಲಾವಿಲಾಸನಂ ೨೨೮

(ಲೀಲಾವತಿ ೮-೩೪)

ತಳಿರ್ಗಳ ಸೀರೆಯುಟ್ಟು ಗುಱುಗುಂಜಿಯ ಹಾರಮನಾಂತು ಮುಂದೆ ಶೀ
ತಳ ಶಶಿಕಾಂತದಿಂ ಸಮೆದೊರಲ್ಗಳೊಳಂ ಬಿದಿರಕ್ಕಿಯಿಕ್ಕಿ ನಿ
ಶ್ಚಳಮನ ಸುವ್ವಿ ಕಾಡೊಡೆಯ ಸುವ್ವಿ ಮನೋಹರ ಸುವ್ವಿ ಸುವ್ವಿಯೆಂ
ದೞವಡೆ ರಾಗದಿಂ ಭಳಿಸಿದರ್ ವನದಲ್ಲಿ ಪುಳಿಂದಕಾಂತೆಯರ್ ೨೨೯

(ಗಿರಿಜಾಕಲ್ಯಾಣಂ ೧-೧೨೩)

ಸೆಳೆನಡು ಬಳ್ಕುತೊಲ್ದು ನಳಿತೋಳಲಗುತ್ತಿರೆ ಮುತ್ತಿನೋಲೆ ಸಂ
ಚಳಿಸೆ ಕುಚಂ ಕದಕ್ಕದಿಸೆ ಸುವ್ವಿಯ ಗಾವರವೊಪ್ಪೆ ಪೂಣ್ದುರಂ
ಬಳಲಲು ರಕ್ತಚಂದನದ ನಿಂದೊರಳೊಳ್ ಬಿದಿರಕ್ಕಿಯಿಕ್ಕಿ ನಿ
ರ್ಮಳತರ ದಂತದೊಂದೊನಕೆಯಂ ಪಿಡಿದೆತ್ತಿ ಪುಳಿಂದಿ ಪಾಡಿದಳ್ ೨೩೦

ಅಡವಿಯ ಹುಲ್ಲೆಗಳ್ ಬರೆದ ಹುಲ್ಲೆಗಳಂತಿರೆ ವನ್ಯದಂತಿಗಳ್
ತೊಡರ್ದು ತೊಡರ್ಪಿನೊಳ್ ತೊಡರ್ದ ದಂತಿಗಳಂತಿರೆ ನುಣ್ಪು ವೀಣೆಯಂ
ಮಿಡಿದವೊಲಾಗೆ ಪಾಡಿವಳೊಱಲ್ದರನೇಱಲಪಣ್ಣನೆಣ್ಣೆಯೊಳ್
ತೊಡರ್ದವೊಲಪ್ಪ ಬಣ್ಣದ ಪುಳಿಂದಿ ಮನೋಭವನಂಕಮಾಲೆಯಂ ೨೩೧

(ಸೂಕ್ತಿಸುಧಾರ್ಣವಂ ೩-೨೧೧)

ದನಿಯ ಪೊಗರ್ ಮನೋಭವನ ಬಾಳ್ವೊಗರಂತಿರೆ ಚಿತ್ತಮಿಟ್ಟು ಮೋ
ಪನೆ ಮಱಿದಾಲಿಸುತ್ತೆಸೆವ ಪುಲ್ಲೆಯುಮಾಗಳದರ್ಕೆ ಸಾರ್ದ ಬೇ
ಡನುಮಿರೆ ಚಾಪಮಂ ತೆಗೆದು ಚಿತ್ರಿಸಿದಂತೆ ಮನೋನುರಾಗದಿಂ
ವನಚರಿ ಪಾಡಿದಳ್ ಮಧುರಗೀತಗಳಂ ಕವಿರಾಜನುಲ್ಲನಾ ೨೩೨

(ಲೀಲಾವತಿ ೮-೩೨, ಸೂಕ್ತಿಸುಧಾರ್ಣವಂ ೩-೨೧೨)

ಇಂಚರಮುಮರ್ದಿನ ಸವಿಯ ಪ
ಳಂಚಿದ ಕಿವಿಗಳ್ಗೆ ವೃತ್ತಕುಚಿ ಪತಿಯುರಮಂ
ಮಿಂಚಿನವೊಲಪ್ಪಿ ಮಿಡಿದ ವಿ
ಪಂಚಿಯೆನೆ ಪುಳಿಂದಿ ಪಾಡಿದಳ್ ಮಾನವನಂ ೨೩೩

(ಲೀಲಾವತಿ ೮-೩೧)

ಬೀಣೆಯ ದಂಡಿಗೆಯಂತಿರೆ
ಮಾಣದೆ ಮೊಱೆವಳಿಗಳಿಂ ಸನಾಳಾಂಬುಜಮಂ
ಜಾಣಿಂದೆ ಪಿಡಿದು ಪಾಡಿದ
ಳೇಣೀದೃಶೆ ಶಬರಿ ಸುಕರಕವಿಶೇಖರನಂ ೨೩೪

(ಲೀಲಾವತಿ ೮-೩೩)

ಕೆಡೆದುದೊ ನೀಲದ ಸಱೆಯೆಂ
ದೊಡವೆರ್ಚಿದ ಬೆಗಡುಗೊಂಡು ಬೆಳತಿಗೆಗಣ್ಣಿಂ
ಕುಡುಮಿಂಚಿನ ತುಡುಗೆಗಳಿಂ,
ತುಡಿಸು[೧]ವ ತೆಱನಿದು[೧] ಮುಗಿಲ್ಗೆ ಶಬರಿಯರರೆಬರ್ ೨೩೫

(ಲೀಲಾವತಿ ೭-೧೧೦)

ಮರದಡಿಯೊಳ್ ಮುದುಡಿದ ಪಯ
ಗರಡಿಯ ಮೈಯಲ್ಲಿ ಪಱಿಯೆ ಪರೆದೆಡೆಯೆಡೆಯಿಂ
ತರುಣರವಿಕಿರಣತತಿ ವನ
ಚರಿಯರ್ ಪುಲಿಗೆತ್ತು ತೊಲಗುವರ್ ಗಿರಿತಟದೊಳ್ ೨೩೬

(ಲೀಲಾವತಿ ೭-೧೧೪)

ತೋರಬಿದಿರ್ಮುತ್ತಿನ ನವ
ಹಾ[೨]ರದ[೨] ಕೆಂದಳಿರ್ಗಳುಡೆಯ ವನಚರಿಯೊರ್ವಳ್
ತಾರಾವಳಿಯಿಂ ನವಸಂ
ಧ್ಯಾರಾಗದೊಳೆಸೆವ ನಿಶಿಯನನುಕರಿಸಿರ್ದಳ್ ೨೩೭

(ಜಗನ್ನಾಥವಿಜಯಂ ೧೬-೧೮; ಸೂಕ್ತಿಸುಧಾರ್ಣವಂ ೩-೨೩೨)

ಲಲಿತಲತಾಕಟುರೂಪೋ
ನ್ಮಿಲನಮಿದೆಂಬಂತೆ ಶಬರಿದಂಪತಿಗಳ್ ಕೋ
[೩]ಮಲಿಮ[೩]ಕಠೋರಮೃದೂಕ್ತಿಗೆ
ನೆಲೆಯೆನಿಸಿದ[೪]ರಸದೃಶ[೪]ಕ್ರಿಯಾಪಟುಗಾ[೫]ತ್ರರ್[೫] ೨೩೮

(ಜಗನ್ನಾಥವಿಜಯಂ ೧೬-೧೯)

---

[೧] ತಂತೆಜಗಿ(ಸ) [೨] ರಂ(ಸ) [೩] ದುಳಿತ(ಸ) [೪] ಸದೃಶಂ(ಸ) [೫] ತ್ರಂ(ಸ)

ತರುಣ ತಮಾಲಲತೌಘದ
ಪೊರೆಯೊಳ್ ಗೇಯಸ್ವನಾನುಮಿತ ತನುಲತೆಗಳ್
ಕರಮೆಸೆಯೆ ಗೇಯಗೋಷ್ಠಿಗೆ
ನೆರೆದಿರ್ದ ಪುಳಿಂದಕಾಂತೆಯರ್ಕಳ್ ಮೆಱೆಗುಂ ೨೩೯

(ಜಗನ್ನಾಥವಿಜಯಂ ೧೬–೨೪)

ಪೊಸತಳಿರನುಟ್ಟು ಕಣಲಿಗೆ
ಯುಸಿಯೋಲೆಯ ತೊಟ್ಟು ಬಿದಿರಮುತ್ತಂ ಪಲವಂ
ಪೊಸತಾಗಿ ಕೊಯ್ದು ಕೇದಗೆ
ಯೆಸಳಂ ಮುಡಿದೋರ್ವ ಶಬರಿ ಕಣ್ಗೆಸೆದಿರ್ದಳ್ ೨೪೦

ಪೆರ್ಮರನನಡರ್ವ ನವಲತೆ
ಕಾರ್ಮುಗಿಲೊಳ್ ತಳ್ತ ಮಿಂಚು ವಿಂಧ್ಯಾಚಳಮಂ
ನೆರ್ಮ್ಮಿದ ನರ್ಮದೆಯೆನಿಸಿದ
ಳೊರ್ಮೆಯೆ ವನಚರನನಪ್ಪಿ ವನಚರಿಯೊರ್ವಳ್ ೨೪೧

(ಕಾವ್ಯಾವಲೋಕನಂ –೨೧೭–)

ಮಿಸುಗುವ ದಂತಿದಂತಮುಸಲಂ ಕರಪಲ್ಲವಯುಗ್ಮದೊಳ್ ಬೆಡಂ
ಗೆಸೆದಿರೆ ರಕ್ತಚಂದನದ ಪೇರೊರಳೊಳ್ ಬಿದಿರಕ್ಕಿಯಿಕ್ಕಿ ರಂ
ಜಿಸೆ ಬಗೆಗೊಂಡು ಗಾವರದೊಳೊಂದಿದ ಸುವ್ವಿ ಮುಸಕ್ಕೆ ರಾಗಮಂ
ಪಸರಿಸೆ ಪಾಡಿದಳ್ ಶಬರಿ ಕಾದಲನಿಂಗಿತದಂಕಮಾಲೆಯಂ ೨೪೨

(ಸೂಕ್ತಿಸುಧಾರ್ಣವಂ ೩–೨೦೯)

ಎಣ್ಣೆಯೊಳಂಜನೇಱಲತನಿ
ವಣ್ಣಂ ನುಣ್ಣಿಸಿದನಬ್ಜಭವನೆನಿಸಿದ ನೈ
ವಣ್ಣದ ಶಬರಿ ತಮಾಲದ
ತಣ್ಣೆಳಲೊಳ್ ಕಣ್ಣ ಬೆಳಗೆ ಬೆಳಗಾಗಿರ್ದಳ್ ೨೪೩

(ಸೂಕ್ತಿಸುಧಾರ್ಣವಂ ೩–೨೦೪)

ಬೆಳಗಂ ಕಟ್ಟಿಲಿಸುವ ಮೆಳೆ
ಮೆಳೆಯೊಳ್ ಪೊಕ್ಕಲ್ಲಿ ತನ್ನ ಕಂಗಳ ಬೆಳಗಿಂ
ಬೆಳಗಾಗಿರೆ ಬೆಳಗಿಲ್ಲದ
ಮೆಳೆಯಿಲ್ಲೆಂದಬಳೆ ಶಬರಿ ಸೊಬಗಱಿಂದಿರ್ದಳ್ ೨೪೪

(ಗಿರಿಜಾಕಲ್ಯಾಣಂ ೧–೧೨೭, ಸೂಕ್ತಿಸುಧಾರ್ಣವಂ ೩–೨೦೫)

ಇರೆ ಸುಪ್ರೌಢಕಿರಾತಂ
ತರುಣಿಯ ಮುಗ್ಧತೆಗೆ ಮೆಚ್ಚಿಯುಬಳೆಯ ಕಣ್ಣಂ
ಬರೆಮುಚ್ಚಿಯಿಡಿದ ಕಟ್ಟಿಲೆ
ದೊರೆಕೊಂಡಿತ್ತೆಂದು ನೆರೆದು ಸುಖಿಯಾಗಿರ್ದಂ ೨೪೫
(ಗಿರಿಜಾಕಲ್ಯಾಣಂ ೧–೧೨೮, ಸೂಕ್ತಿಸುಧಾರ್ಣವಂ ೩–೨೦೬)

ಮುಡುಪೆನಿಲುವಲ್ಲಿ ತಾಳಿದ
ಸದಮಲ ತಾಟಂಕಮಲ್ಲದೆರಡಂ ತಂದೊ
ಲ್ದೊದವಿದ್ದ ತೊಡವನೊಲ್ಲದೆ
ಜೆದೆಬೇಡಿತಿ ಗುಂಜೆದೊಡವನವಳುಂ ಪಟಿಂವಳ್ ೨೪೬

ನಲ್ಲನಿಲ್ಲದೊಡೆ ಮುತ್ತಂ
ಬಲ್ಲಿದ ಪರದನ ಮುಖಕ್ಕೆ ಮುನ್ನಿನ ಸಲ್ಲೆಯಿ
ನೆಲ್ಲವನಿಟ್ಟಿಂ ಪಚ್ಚೆಯ
ನಲ್ಗಯ್ಯಂ ತೂಗಿಸುತ್ತೆ ಪದಕಂಗೆಯ್ಯಲ್ (?) ೨೪೭

ಕಾಡಗಿಳಿ ಬಂದು ಪಿತ್ತಿಲ
ಮಾಡಮೊಳಿರ್ದೆನ್ನ ನುಡಿಸಿ ಪೋಪುದು ನಿಚ್ಚಂ
ಗೂಡೊಳಗಿಟ್ಟಾರಯ್ಯಲ್
ಜೇಡನ ಭಯಮೊಳವುವದಱ ನುಡಿ ಗಿಳಿಗೊಳವೇ ೨೪೮

ಇನಿಯನಿವಳಾಯತಾಕ್ಷಿಯ
ನನುವಿಂದಂ ಮುಚ್ಚೆ ಮನೆಯ ಸರ್ವಚಕೋರಂ
ಜಿನುಗುತಸು ಕಳೆವುತಿರಲಾ
ತನ ಕೈದೆಗೆಯಲ್ ಬರ್ದುಕಿದುದ ನಾಂ ಕಂಡೆಂ ೨೪೯

ಕಣ್ಗೊಳೆ ಕೋರಿಕೊಂಡು ಸವಿಯುಂ ಸಲೆ ಮುಕ್ಕುಳಿಪಂತೆ ನೋಟ್ಟಿ ಕಾ
ಟಿಪ್ಪಣ್ಣ ಕುಚಂಗಳಪ್ಪಿ ಮಿಗೆ ಬಪ್ಪವೊಲಂದಿದಿರೊಡ್ಡಿ ಮೋಹಿಸಲ್
ಬಣ್ಣನೆ ಸಾರ್ದು ತಚ್ಛಬರಿಯುಂಘ್ರಿಗೆ ಬೀಟ್ದ್ರಿರದೆಯ್ದೆ ಕೂಡುತುಂ
ಸುಣ್ಣನೆ ಕಾಣದಂತೆ ಪಟುವೊಕ್ಕ ಪುಳಿಂದನದೆನ್ನ ಧೂರ್ತನೋ ೨೫೦

ಮತ್ತಗಜಮಸ್ತಕದ ಪೊಸ
ಮುತ್ತಂ ಬಲ್ಪಿಂದೆ ತಂದೆನೆಂದೊಲವಿಂದಂ
[1][ಮುತ್ತಂ][1] ತುಂಗಪಯೋಧರೆ
ಗಿತ್ತಂ ಮತ್ತೊಬ್ಬ ಶಬರಿ ಮಿಗೆ ನಗೆ ವನದೊಳ್ ೨೫೧

[1] ವೃತ್ತ (ಸ)

ಎಳೆನವಿಲ ಕಳಾಪಂಗಳ
ನಳವಡೆ ತಳೆದುಂ ಮದೇಭಮಸ್ತಕ ಮುಕ್ತಾ
ಫಳವಿಳಸಿತ ಸಾಪತ್ನೀ
ಕುಳಿಪೊಳಗುರ್ವಿಸುವ ಶಬರಿಯಿರವು ವಿಚಿತ್ರಂ ೨೫೨

ಕರಿಗಮನೆ ಶಬರಿ ಬರೆ ಕೇ
ಸರಿ ಕಾಣುತೆ ಮುಳಿದು ಬೆನ್ನನಟ್ಟಲ್ಕೋಡಿಯೆ
ತರುವನತಿವೇಗಮುಡರಲ್
ಮರಗಳ್ ತಲೆ ಪರೆವುತಿರ್ದುದೇನೊ ವಿಚಿತ್ರಂ ೨೫೩

ನಡೆಯಲ್ಕೆ ಸಿಂಹವೆಯ್ದಲ್
ನುಡಿವುತ್ತಂ ಚೂತವೋಜತಿ ಮಾರ್ಜಾಲ ಕರಂ
ಪಿಡಿಯಲ್ಕಂ ಕಣ್ಣಂ ಬಿಡೆ
ತಡೆಯಡೆ ಪುಲಿಯಟ್ಟೆ ಬರಲ್ ಶಬರಿಯೆ ಚಿತ್ರಂ ೨೫೪

ಬನದ ಪುಳಿಂದಿಯೊರ್ವಳನುರಾಗದಿ ಪಲ್ಲವಮುಟ್ಟು ಗುಂಜಿಯಿಂ
ದನುನಯಮಾದ ಭೂಷಣಮ ತೊಟ್ಟು ಪಸುರ್ಪಳುವಚ್ಚಜೊಟ್ಟಸೊ
ಯ್ಯನೆ ಪಣೆಗಿಟ್ಟು ಚಂದನದ ಪೇರೊರಳೊಳ್ ಬಿದಿರಕ್ಕಿಯಿಕ್ಕಿಗುಟ್ಟಲಾ
ಪೊನಕೆ ಕರಂ ಚಿಗುರ್ತು ತಳಿರುಂ ಮುಗುಳಾದುದದೇಂ ವಿಚಿತ್ರಮೋ ೨೫೫

## ಬೇಟೆಯ ವರ್ಣನಂ

ಪುಲಿವಲೆ ಕೊಂಬು ಕಲ್ಲಿ ಮಿಡಿ ಕಣ್ಣಿ ತೊವಲ್ವಲೆ ಸಿಕ್ಕದಕ್ಕ ಪೆ
ರ್ಬೊಲವಲೆ ಸಂದ ಹಾಸುವಲೆ ನೀರ್ವಲೆ ಮೇಲ್ವಲೆ ಸೊರ್ಕುವಾರ್ದು ಪೆ
ರ್ಬಲೆ ಬಿಡುವಾರು ಸೋವಲೆಯೆಂಬಿನಿತಂ ಪೊರೆಗಟ್ಟಿ ಕಾನನ
ಸ್ಥಳದೊಳಗೊಲ್ದು ತೋಹುವಿಡಿದೊಡ್ಡಿದರೆಯ್ದೆ ಪುಳಿಂದನಾಯಕರ್ ೨೫೬

ತಡಿಕೆವಲೆ ಕಣ್ಣಿವಲೆ ನಿ
ಟ್ಟೆಡ ಕೀಲುವಲೆ ಗೂಂಟವಲೆ ಪೊಣರ್ಚುವ ಬಲೆ ಮುಂ
ಬಿಡುವಲೆ ಸಿಡಿವಲೆ ನಿಡುವಲೆ
ನಡೆವಲೆ ಪಡಿವಲೆಗಳೊಪ್ಪಿದುವು ಲುಬ್ಧಕರೊಳ್ ೨೫೭

ತೊಗರಂ ಹಿಂಡುಗಲಂಕೆ ಸಾಳುವನಭಂಗಂ ಜಾಯಿಲಂ ಸೂಚಿವಾ
ಲಗನುದ್ದಂಡನೊರಂಟನಟ್ಟುಬಳಗಂ ಜೋಗಂ ಜವಂ ರಕ್ಕಸಂ
ಪೊಗೆಗಣ್ಣಂ ಕರಿಬಂದಿಕಾಜಿನಧಟಂ ವೇಗಾಯ್ಲನೆಂದೆಂಬ ಕು
ನ್ನಿಗಳಂ ಹಾಸದೊಳಿಟ್ಟು ಕಾಡೊಡೆಯರಂದೆಯ್ದಿತ್ತು ಕಾಂತಾರಮಂ ೨೫೮

ರಾಹುವಿನಂತೆ ಯಕ್ಷಪತಿವೈರಿ ನಿರೋಧಿನಿಯಂತೆ ಪುಂಡರೀ
ಕಾಹಿತಕಾರಿ ದುಷ್ಟಶಿಶುಪಾಲಕನಂತಿರೆ ಕೃಷ್ಣಸಾರತೇ
ಜೋಹರಕಾರಣಂ ಕುರುಕುಲಾಧಿಪನಂತೆ ವೃಕೋದರಾರಿ ಕೇಳ್
ಸಾಹಸಮಲ್ಲ ನಿನ್ನಧಟನಂಕದ ಜಾಯಿಲನುರ್ವರಾಧಿಪಾ ೨೫೯

ಹರಿಣನ ಬೇಂಟೆ ಪೆರ್ಬುಲಿಯ ಬೇಂಟೆ ವರಾಹನ ವೀರಬೇಂಟೆ ಪೆ
ರ್ಗಡಿಯ ಬೇಂಟೆ ಪೆರ್ಮರೆಯ ಬೇಂಟೆ ವಿಹಂಗದ ಮೊತ್ತವೇಂಟೆ ತ
ತ್ತರಿಗಳ ಬೇಂಟೆ ಸಿಂಹಗಳ ಬೇಂಟೆಗಳೆಂಬ ವಿವಾದಿಯಾದ ಭೀ
ಕರ ಮೃಗಸಂಘಸಂಹನನಮೊಪ್ಪಿತು ಪರ್ವಿದರಣ್ಯಮಧ್ಯದೊಳ್ ೨೬೦

ನಡೆಯೆಂಬಬ್ಬರಿಸೆಂಬ ಪರ್ವಿ ಪರಿಯೆಂಬಾರೆಂಬ ಸಾರೆಂಬ ಸಂ
ಗಡಿಸೆಂಬಡ್ಡಮಿರೆಂಬ ಸಾರ್ದು ಸರಿವಂ ಕಟ್ಟೆಂಬ ಮುಟ್ಟೆಂಬ ಪಿಂ
ದಡಸೆಂಬೊತ್ತರಿಸೆಂಬ ಸುತ್ತ ನಿಲಿಸೆಂಬೆಯ್ದೆಂಬ ಮೈದೋಱುತಂ
ಪೊಡೆಯೆಂಬೊಂದು ಪುಳಿಂದವೃಂದನಿನದಂ ಪೊಣ್ಮಿತ್ತು ಕಾಂತಾರದೊಳ್ ೨೬೧

ಮರೆ ಹರಿದೋಡೆ ಹಂದಿ ಗತಿಗೆಟ್ಟಿರೆ ಪೆರ್ಬುಲಿಗುರ್ಬುಗುಂದೆ ಕೇ
ಸರಿ ಮುರಿದೇಱೆ ಕಾಯ್ದು ಕರಿ ಮೇಪುಱದಾಲಿಸೆ ಪುಲ್ಲೆವಿಂಡುಗಳ್
ಮುರಿದು ಬಿಗುರ್ತು ನೋಡೆ ಕಡವುಕ್ಕಡವಿರ್ದವರಂತೆ ಝೋಂಪಿಸು
ತ್ತಿರೆ ಭರದಿಂದೆ ಬೇಂಟೆವಱೆಯುಬ್ಬರಮುಬ್ಬರಮಾಯ್ತರಣ್ಯದೊಳ್ ೨೬೨

(ಸೂಕ್ತಿಸುಧಾರ್ಣವಂ ೩-೧೧೬)

ಮತ್ತಗಜಂಗಳ ಕೋಡಂ
ಕತ್ತುರಿ ಮಿಗಮಂ ಪೊದಟ್ಟಿ ಪೊಂಬುಲಿದೊವಲಂ
ಚಿತ್ತೈಪುದೆಂದು ಕಾಣ್ಕೆಯ
ನಿತ್ತು ಮನಂಬಡೆದು ಧರಣಿಪತಿಗಿಂತೆಂದಂ ೨೬೩

(ಸೂಕ್ತಿಸುಧಾರ್ಣವಂ ೩-೮೮)

ತುಱುತುಱನೆ ತಿಂಬ ತನುವಂ
ನೆಱೆ ಪಂದಿಗಳೊಱಸಿಕೊಂಡು ಭರದಿಂದೆತ್ತಂ
ತಱಿಯದ ಕೋಡುಂಗಲ್ಲುಂ
ಮುಱಿಯದ ಪೆರ್ಮರನುಮಿಲ್ಲಾ ಕಾಡೊಳ್ ೨೬೪
(ಸೂಕ್ತಿಸುಧಾರ್ಣವಂ ೩-೯೨)

ಬಿಡುವುದು ತಡವೆನೆ ಮೊಲನಂ
ಪಿಡಿವುದು ಕಾಣ್ಬಳವಿಯೊಳಗೆ ಸರಳಿಪ ಮರೆಯಂ
ತಡೆಗಡಿದು ಕರ್ಚಿ ಮೃಗಮುಂ
ಕೆಡೆವಿಡಿವಾ ನಾಯ್ಗಳರಸನಿಂತಿರವೇಡಾ ೨೬೫
(ಸೂಕ್ತಿಸುಧಾರ್ಣವಂ ೩-೯೭)

ಮುಸಗಿ ಕನಲ್ದು ನಿನ್ನಣುಗಿನೇಕದ ನಾಯ್ ಮರೆವಜ್ಜೆಗಾಣ್ಬುದುಂ
ಮುಸೆವುದು ಕೋಡಕತ್ತಿಗಳನಾಗಳೆ ಸುಂಟುಗೆಗೋಲ್ಗಳೆಲ್ಲಮುಂ
ಬಸಿವುದು ಕೋಪದಿಂದರೆಯುತಿಪ್ಪುದು ಸಂಬರಮುಂ ಕ್ಷಣಾರ್ಧದಿಂ
ಪೊಸೆವುದು ಕಿಚ್ಚಿನಲ್ಲಿ ಪೆಱತೇನದು ಮಾಣದಿಳಾಧಿನಾಯಕಾ ೨೬೬
(ಸೂಕ್ತಿಸುಧಾರ್ಣವಂ ೩-೯೮)

ಸೋಪಿನ ತೋಪಿನ ಪಳಹದ
ಕೋಪಿನ ಪಾಳಿವದ ಗೋರಿವೇಂಟೆಗೆ ಮತ್ತಂ
ಚಾಪಪ್ರವೀಣರುದ್ಧತ
ಕೋಪರ್ ನಡೆಗೊಂಡರಲ್ಲಿ ಮುಂದೆ ಪುಳಿಂದರ್ ೨೬೭
(ಸೂಕ್ತಿಸುಧಾರ್ಣವಂ ೩-೧೦೪)

ಬರೆದರೊ ನೆತ್ತರಿನೆಂಬಂ
ತಿರೆ ಪಜ್ಜೆಗಳೆಸೆಯೆ ನಾಂದು ನೆತ್ತರೊಳೆತ್ತಂ
ಕರಿಮಸ್ತಕದೊಳ್ ಮುಕ್ತೋ
ತ್ಕರ ಸಾಲಿಡೆ ತೋಱುದತ್ತು ಮೃಗಪತಿಮಾರ್ಗಂ ೨೬೮
(ಸೂಕ್ತಿಸುಧಾರ್ಣವಂ ೩-೧೦೯)

ಇದೆ ಮರೆ ಹಿಕ್ಕೆಯಿಕ್ಕಿದೆಡೆ ಪುಲ್ಲೆಯ ಬಾಯ ಕಱುಂಕೆ ಸೂ
ಸಿದತ್ತಿದೆ ಕೆಸಱೊಳ್ಪೊದಟ್ದು ನಡೆಗೊಂಡುದು ಪಂದಿಯ ಹಿಂಡು ಮುಂದೆ ಸೋ
ಡದೆ ಹೊಲಸಂಟೆ ಕಾಂಬುದದು ಪೆರ್ಬುಲಿಯಿರ್ದ ಪೊದರ್ಪ್ರನುತ್ತ ಪೆ
ರ್ಚಿದ ವನದಲ್ಲಿ ಪಜ್ಜೆವಱಿಯಿಂ ನಡೆಗೊಂಡುದು ಭಿಲ್ಲಸಂಕುಳಂ ೨೬೯

ಹಂದಿಗೆ ಸಾಳುವಂ ಮರೆಗೆ ಜಾಯಿಲನೇಣಕುಲಕ್ಕೆ ಚುಂಚುವಾ
ಲಂ ದಿಣಿದಿರ್ದ ಕೊಂಡಗುರಿಗಂ ತೊಗರಂ ವೃಕಸಂಕುಳಕ್ಕೆ ಜೂ
ಗಂ ದಿಟವಲ್ತೆ ಮಾರಿಯೆಲೆಭೂಪತಿ ನೋೞ್ಪೊಡೆ ತೋರ್ಪೆನೆಂದು ನೋ
ಡೆಂದತಿಭಾಷೆಯಂ ನುಡಿಯುತಿರ್ದನದೊಬ್ಬ ಪುಳಿಂದನಾಯಕಂ ೨೭೦

ಎಲೆಯಲೆ ಹೋಯ್ತುಹೋಯ್ತು ಮೊಲನಟ್ಟೆಱಿಯಟ್ಟೆರಿ ಸಾರುಸಾರು ಪೆ
ರ್ಬುಲಿಯುಲಿಯಟ್ಟೆ ಪೋದಪುದೆಯಾರ್ದೆಸೆಯಾರ್ದೆಸೆ ಯಿತ್ತಲಿತ್ತಲಿ
ಕ್ಕಲಸಿದಿರಾಗಿ ಬರ್ಪುದಿದೆ ನಾಯ್ವಿಡು ನಾಯ್ವಿಡುಗೆಂದೆನುತ್ತ ಹೆ
ಗ್ಗಲಿಸುವ ಬೇಡರುಬ್ಬರವಗುರ್ವಿಸಿತಾ ವನಪೇಶಮಧ್ಯದೊಳ್ ೨೭೧

ಮೆಳೆಗಳನೊತ್ತಿಗೊಳ್ ಮರನನೇಱು ಕೆಲಂಬಿಡದಿತ್ತ ಜಾಱು ಬಂ
ದೊಳಪೊಗದಿರ್ ಬದೊಳ್ ಪಿಡಿದ(?) ನಾಯ್ಗಳನಟ್ಟೆರೆಯಿತ್ತಲಿತ್ತ ಪೋ
ಯ್ತೆಲೆಯೆಲೆ ಕಾಹುಕಟ್ಟು ಕೆಡಪೌ ಬಲೆಗಾಗಿರೆ ಸೋಹೆನಿಪ್ಪ ತ
ತ್ಪ್ರಳಿಕಳಮುಣ್ಮೆ ಬೇಡವಡೆ ಬೊಬ್ಬಿಡುತಿರ್ದುದು ತದ್ವನಾಂತದೊಳ್ ೨೭೨

ತೊಡು ಕೋಲಂ ಹರಿಣಂಗೆ ಹಾಸುಬಲೆಯಂ ಕೋಕಂಗೆ ನೀದಾರ್ಣಮಂ
ಬಿಡು ಪೆರ್ಬಂದಿಗೆ ನಾಯುಬಾಯ ಮೊಲನಂ ಕೈಗೆತ್ತಿಕೊಳ್ ಬಿಲ್ಲಿಯಂ
ಕುಡೆ ಕುತ್ತೆಬ್ಬಿಸು ಮೇಲೆಪೊಯ್ದು ಹುಲಿಯಂ ಹೊಯ್ ತೋಳನಂ ಹೊಯಿ ಹೊ
ಕ್ಕಿಡು ಹೊಯ್ದಂಗೆಯೊಳೆಯ್ದು ಮುಂದೆ ಸರಿವಂ ನೀಂ ಕಟ್ಟುಸಾರಂಗಮಂ ೨೭೩

ಇಡು ಪೊಲನಂ ತೆರಳ್ಚದಿಸು ಪುಲ್ಲೆಗಳಂ ಬಲೆಯೊಡ್ಡಿ ಖಡ್ಗಿಯಂ
ಪಿಡಿ ಮರೆವಿಂಡನೆಚ್ಚು ಪುಲಿಯಂ ಛಲದಿಂದಿಱು ಪಂದಿಯೊತ್ತುಗೊಂ
ಡೊಡೆ ಬಿಡು ನಾಯ್ಗಳಂ ಸಮೆದ ಪೆರ್ಗುೞಿಯೊಳ್ ಕರಿಪೋತಕಂಗಳಂ
ಕೆಡಪು ಮರಳ್ಚು ಸಿಂಹಮನೆನಿಪ್ಪ ಘನಧ್ವನಿಯಾಯ್ತರಣ್ಯದೊಳ್ ೨೭೪
(ಗಿರಿಜಾಕಲ್ಯಾಣಂ ೧–೮೩)

ಕರಡಿಗೆ ಕೇಶಮಂ ಮರೆಗೆ ವಸ್ತ್ರಮನಾ ನವಿಲಿಂಗೆ ಕುಂಚಮಂ
ಕರಯುಗಮಂ ಕವಲ್ಪಿಡಿದ ಕೊಂಬುಗಳುಳ್ಳ ಮೃಗಕ್ಕೆ ಸಂದ ಪೆ
ರ್ಗರಡಿಗೆ ಮೀಸೆಯಂ ಚಮರಿಗೊಪ್ಪುವ ವಾಲಮನಯ್ದೆ ತೋರ್ಪ ಬೆ
ಳ್ಳೆರಳೆಗೆ ಬೊಟ್ಟನೆತ್ತುವ ರವಂ ಪಿರಿದಾದುದು ಸನ್ನೆವೇಂಟೆಯೊಳ್ ೨೭೫

ಬರಿಕ್ಕೈವೀಸುವ ಕೇಸರಿ
ಬರೆ ಪೊಯ್ದೆಱಗುವ ಸುಪಂದಿ ಬರೆ ಮೊಳಕಾಲಂ
ಭರದಿಂದೆತ್ತುವ ಪುಲಿಯೆ
ಬ್ಬಿರೆ ನೆಲನಂ ಪತ್ತೆ ಸನ್ನೆವೇಂಟೆಯೊಳರೆಬರ್ ೨೭೬

ನಡುಗಿತ್ತು ವಿಹಗತತಿಯು
ರ್ಕುಡುಗಿತ್ತು ಮೃಗಾಳಿ ತಮ್ಮ ನಿಜಪೋತಕಮಂ
ಮಡಗಿತ್ತು ಗೂಡುಗುಹೆಯೊಳ್
ತೊಡಗಿತ್ತು ಕಿರಾತಭೀಕರಧ್ವನಿ ವನದೊಳ್ ೨೭೭
(ಗಿರಿಜಾಕಲ್ಯಾಣಂ ೧–೮೪)

ನಡೆನಡೆದು ನಸು ಬಳಲಿಂಕು
ತ್ತ್ರಿಡಬಲನಂ ನೋಡಿ ಕೂಡೆಯಾಘ್ರಾಣಿಸುತಂ
ಗಿಡುವಿನ ಸರುವಿನ ದರುವಿನ
ಮಡುವಿನ ಬಟಿಗೊಂಡು ಶುನಕನಟ್ಟಿತು ಮೊಲನಂ ೨೭೮
(ಗಿರಿಜಾಕಲ್ಯಾಣಂ–೧೮೫)

ಅಟ್ಟಿದೊಡೆ ತಿರುಗಿ ಮುರಿಮುರಿ
ದೊಟ್ಟೈಸುತೆ ಕೊಂಕಿ ಪರಿಯುತೆಡನಂ ಬಲನಂ
ದಿಟ್ಟಿಸುತೆ ನಿಂದು ನಿಲ್ಲದೆ
ನಿಟ್ಟೋಟದೊಳೋಡಿತೆಸೆವ ಮುಸಕದ ಶಶಕಂ ೨೭೯
(ಗಿರಿಜಾಕಲ್ಯಾಣಂ ೧–೮೬)

ಬಿಡದೋಡೆ ಕಂಡು ಶಬರಂ
ಕಡುಮುಳಿದಜಿಕಯಟ್ಟಿ ತಿರುಗಿ ತಿರುಗುತ್ತಂ ಸಂ
ಗಡಿಸಿ ಪರಿದುಬುಬೆನುತ್ತಂ
ಬಡಿಕೋಲಿಂದಿಟ್ಟನಧಿಕಬಲನಂ ಮೊಲನಂ ೨೮೦
(ಗಿರಿಜಾಕಲ್ಯಾಣಂ ೧–೮೭)

ಇಡೆ ತಿರುಗುತ್ತ ಬರ್ಪ ಬಡಿಕೋಲೊಳೆ ಸಿಲ್ಕುತೆ ಸಿಲ್ಕದಾ ಮೊಲಂ
ಗಿಡುಗಳೊಳೋಡಿ ಪೊಕ್ಕ ಪದದೊಳ್ ಘನರಾಹುವ ಕೋಟಿಗ್ಗ ಭೀತಿಗೊಂ
ಡುಡುಪತಿ ಬಿಂಬದಿಂದೆ ಸರಿದೋಡಿ ಮುಗಿಲ್ಗಳೊಳೆಯ್ದಿ ಪೊಕ್ಕು ಗಂ
ಡುಡುಗಿ ಸುರುಳ್ದ ತಚ್ಛಶಕನಂ ನೆರೆ ಪೋಲ್ತುದು ಕಾಡ ಪೆರ್ಮೊಲಂ ೨೮೧
(ಗಿರಿಜಾಕಲ್ಯಾಣಂ ೧–೮೮)

ಚರಿಸದೆ ಮೇಹುಗೊಳ್ಳದೆ ಸಲಿಕ್ಕೆಯನೊಲ್ಲದೆ ನಿದ್ರೆಯಿಲ್ಲದೊ
ಳ್ಮರನಮೊದಲ್ಗೆ ಸಾರದೆ ಮೃಗಾಳಿಯ ಸೇರದೆ ನೀರ್ಗೆ ಪಾರದು
ರ್ಧರ ಮದನಾಗ್ನಿಗಳ್ಕಿ ತನುತಾಪದೆ ಜೇಗೆಗೆ ಬಳ್ಕಿ ಸುಕ್ಕಿ ವಲ್ಲಭಾ
ವಿರಹದೊಳಿರ್ದುದೊಂದು ಹರಿಣಂ ಬರೆದೊತ್ತಿದ ನೂತನ ಚಿತ್ರಮೆಂಬಿನಂ ೨೮೨

ನಿಮಿರ್ದ ಕೊರಲ್ ಮರಲ್ದು ಮಡಿದೂಱಿದ ಮುಂದಣಕಾಲ್ಗಳೆಟ್ಟಿ ಪ
ಶ್ಚಿಮತನು ಜೋಲ್ದುರಂ ಪೆಱಗನಪ್ಪಿದ ಕೊಂಬುಗಳಾಲಿಸುತ್ತೆ ವಿ
ಶ್ರಮಿಸುವ ಕರ್ಣಮುಳ್ಮುಗುಳ್ದ ಕಣ್ ಮಿಡುಕಾಡುವ ಕಂಠನಾಳಮುಂ
ದಮರ್ದಿರೆ ನೀರನುಂಬೆರಲೆಯಂ ಬರಲೊಲ್ಲದೆ ನೋಡಿದಂ ನೃಪಂ ೨೮೩

(ಲೀಲಾವತಿ ೬-೫೬)

ಪಸರಂ ಬೆತ್ತೆಡೆಯಾದ ನೀಡಡಿ ಪೊದಟ್ದಾಕರ್ಣವಾಕುಂಚಿತಾ
ಸ್ತ್ರಸಮೇತೋಚ್ಚಕರಾಗ್ರಮಸ್ಖಲಿತಚಿತ್ತಂ ಸಂಸ್ಫುಟಾಲೋಕನಂ
ಕುಸಿದಂಗಂ ಮಿಗೆ ದೃಷ್ಟಿ ಮುಷ್ಟಿ ಶರಸಂಧಾನಂಗಳೊಂದಾಗಿ ತಾ
ನೆಸಲಂಪೊಂದು ಕುರಂಗಮಂ ಶಬರನೊಪ್ಪಿರ್ದಂ ಮಹಾರಣ್ಯದೊಳ್ ೨೮೪

ಕಂಡುದು ಮೃಗತತಿಯತಿಭಯ
ಗೊಂಡುದು ಪೆಪ್ಪಳಿಸುತಗಿದು ಸರಿದೋಡೆ ಕರಂ
ದುಂಡಿಸುತಿರ್ದಪುದೆಂದುರು
ಚಂಡಾಸ್ತ್ರದಿನಸಮಶಬರನಿಸೆ ಕಾನನದೊಳ್ ೨೮೫

ತಿರುಗುವ ತನು ಬೆಚ್ಚುವ ಕಣ್
ಪರಿವ ಮನಂ ನಟ್ಟ ಕಿವಿಯಡಂಗುವ ಸುಯ್ಲಿಂ
ಸರಳಂ ಮೀಱುತೆ ಹರಿಣಂ
ಸರಳಿಸಿತ್ತೈದಾಱನೇೞನೆಂಟೊಂಬತ್ತಂ ೨೮೬

ಕುನಿಕುನಿದು ವನದ ಗಿಡುಗಿಡು
ವಿನ ಮಱೆಮಱೆಯಲ್ಲಿ ಸುೞಿದು ಸುೞಿದೋಡುತ ಠ
ಕ್ಕಿನ ಹರಿಣನನತಿಭರದಿಂ
ತನತನಗೆ ಪುಳಿಂದರಟ್ಟೆ ಮುಟ್ಟುತ್ತೆಚ್ಚರ್ ೨೮೭

ನಿಲ್ಕೆ ಶಬರಾಳಿಯೆಚ್ಚ ಸ
ರಳ್ ಕಿೞಿಕಿೞಿದು ನಟ್ಟು ಗಱಿದೋಱುತ್ತಂ
ನಾಲ್ಕುಂ ಮೆಯ್ಯೊಳ್ ತೀವಿರೆ
ಸಿಲ್ಕಿದ ಮೃಗನೆಯ್ಯಮೃಗದ ತೆಱನಾಯ್ತಾಗಳ್ ೨೮೮

ತೊರೆದ ಕುಚಂಗಳಿಂದೆ ಕೊಣಸಂ ನಸೆಯಿಂ ಮೃಗನುಂ ಕುರಂಗಿ ಸಾ
ರ್ದಿರಲೆಡೆಗೊಂಡು[1]ಭಲ್ಲದಿನೆ[1]ರಳ್ಕಡಿಯಾಗೆ ಕಿರಾತನೆಚ್ಚೊಡಂ
ತರಿಸದೆ ಪುಲ್ಲೆ ಸಾರ್ಚಿ[2]ಮುಱಿಯಂ[2] ಮೊಲೆಯಂ ನೆರೆಪೇಣನಂ ಬೞಿ
ಕ್ಕೆರಡುಡಿಯಾಯ್ತು ಕೇವಲಮೆ ದೇಹಿಗೆ ಸಂಸೃತಿಮೋಹಬಂಧನಂ ೨೮೯

(ಜಗನ್ನಾಥವಿಜಯಂ ೧೬-೨೨)

ಹರಿಣನನಾರ್ದಿಸಲ್ಕೆ ಶಬರಂ ಶಬರಪ್ರಿಯಕಾಂತೆ ಬಂದು ಬ
ೞಿದ್ದರಳೆಯನೀಕ್ಷಿಸುತ್ತುಮಿರಲಾಕೆಯ ಕೇಕರಕಾಂತಿಜಾಲದಿಂ
ಪರಿವೃತಮಾಗಿ ತನ್ಮೃಗಮುದೇಂ ಪಡೆದತ್ತೊ ಮೃಗಾಂಕಮಂಡಲಂ
ಧರಗವತೀರ್ಣಮಾದುದೆನಿಪೊಂದಭಿಶಂಕೆಯನೊಂದು ತಾಣದೊಳ್ ೨೯೦

(ಜಗನ್ನಾಥವಿಜಯಂ ೧೬-೨೩)

ಪುಲ್ಲೆಯನಂದು ತಾನಿಸುತ ಪೋಲ್ದ ಮೃಗಾಕ್ಷಿಯನಲ್ಲಿ ಭಾವಿಸಲ್
ಫುಲ್ಲಶರೇಶನಾರ್ದೆಸೆ ಪುಳಿಂದನ ಕೈಯುಡುಗಿತ್ತು ನೋಡು ಮು
ನ್ನೆಲ್ಲಿಱಿಯಲ್ಕೆ ಪೋದವರನಾರೆಳೆಯಲ್ವಶಮೆಂಬ ಗಾದೆಯಿಂ
ದೆಲ್ಲಸುಭಿಲ್ಲರಾ ಶಬರಿಯೊಳ್ ಶಬರೇಶನನೊಲ್ದು ಕೂಡಿದರ್ ೨೯೧

ಈ ಸರಲೊಂದಕೆಂಟೆರಳೆಯಂ ನೆಱೆ ತಾಗದೊಡಿನ್ನು ಶಸ್ತ್ರಸಂ
ನ್ಯಾಸಮುದೆಂದು ಬೇಡದಿರನೆಚ್ಚಱಿಸಲ್ ಕಡೆಮುಟ್ಟೆ ಹೋಗದಂ
ದಾಸರದಾಡಿಗೊಂದು ಸರಲೆಚ್ಚದಱಿಂದಮೆ ನೂಂಕಿ ಪುಲ್ಲೆಯಂ
ಹೇಸದೆ ಕೊಂದನಾ ಶರದ ಚೆಲ್ವಚಮತ್ಕೃತಿಗೆಲ್ಲರೊಪ್ಪಿದರ್ ೨೯೨

ಸ್ಮರನರಲಂಬಿನಿಂದೆರಡುಲಕ್ಷ್ಯಮನೊರ್ಮೆಸೆವಂತೆ ಹುಲ್ಲೆಯಾ
ಶಿರವೆರಡೊರ್ಮೆ ಖಂಡಿಸುವ ಚಿತ್ರಮನೀಕ್ಷಿಸಿಮೆಂದು ಬೇಡನಂ
ದೆರಡರ ಕೋಟ್ಗಿಳಂ ಸೆಣೆದು ಮೈಮುರಿವೊಂದಿದ ಕಾಲದಲ್ಲಿಯಾ
ಶಿರಪಱಿಯೆಚ್ಚ ಲುಬ್ಧಕನನಾ ಶಬರೇಶ್ವರರಲ್ಲಿ ಮೆಚ್ಚಿದರ್ ೨೯೩

ಮೇಲೊರ್ವ ಶಬರ ತಾನತಿ
ಲೀಲೆಯೊಳಂ ಹರಿಣನೊಂದು ಮೇವುದ ಕಾಣುತ
ಬಾಲಮನಾಲಗೆಯೆರಡಂ
ಕೋಲೊಂದಱಲೆಚ್ಚನಾತನೇಂ ಚತುರತೆಯೋ ೨೯೪

---

[1] ವಲ್ಲಭಸ(ಸ) [2] ಮುಗನಂ(ಸ)

ಪೊಸನಸೆಯೊಳ್ ಮೃಗಂ ಮೃಗಿಯನಗ್ಗಲಿಸುತ್ತಿರೆ ಬೇಡನಿಂಬುವೆ
ತ್ತಿಸಲೆರಡಂಬನಂಬಿನೊಳೆ ಮಾರ್ಮಸೆವುತ್ತಿರೆ ಪುಲ್ಲೆ ಕಂಡು ಚಿಃ
ಕಿಸುಗುಳಿ ಬೇಡ ನಮ್ಮೆಸೆವೊಡಂಬೆರಡಂ ಮಸೆವಾಸೆಯೇಕೆಯೆ
ಮ್ಮಸುವೆರಡೊಂದೆಜೀವಮೆಸು ಮೋಹೆಸೆಯಲ್ ಸರಳೊಂದೆ ಸಾಲದೇ ೨೯೫

(ಸೂಕ್ತಿಸುಧಾರ್ಣವಂ ೩–೨೨೯)

ಹರಿಣಿಯನೆಚ್ಚು ತತ್ಪತಿ ಕುರಂಗನುನಾರ್ದೆಸಲೆಂದು ಬಾಣಮಂ
ತಿರುವಿನೊಳಿಟ್ಟು ತೀವಿ ತೆಗೆವನ್ನಗಮಂಗಜನಸ್ತ್ರಘಾತದಿಂ
ಪೆರಳೆ ನೆಲಕ್ಕೆ ಬೀೞೆ ಮಝು ಭಾಪುಪಕಾರಿಯೆನುತ್ತ ಬಿಲ್ಲುಮಂ
ಸರಳುಮನಿಕ್ಕಿ ಕೈಮುಗಿದು ವರ್ಣಿಸಿದಂ ಸ್ಮರನಂ ವನೇಚರಂ ೨೯೬

(ಕಾವ್ಯಸಾರಂ–೧೧೦೨, ಸೂಕ್ತಿಸುಧಾರ್ಣವಂ ೩–೨೩೦)

ಮೃಗವೆರಡೊಂದು ತಾಣದಿ ಬರುತ್ತಿರಲುಂ ಬಿಱುಬಿಲ್ಲ ನಾರಿಯಂ
ತೆಗೆದು ಪುಳಿಂದನಾರ್ದು ಬಿಡೆ ಕೊರ್ಗಣೆಯೋಪಳ ನಟ್ಟುದೆಂದು ತೊ
ಟ್ಟಗೆ ಹರಿಣಂ ನೆಲಕ್ಕೆ ಕೆಡೆಯಲ್ಕದನೋವದೆ ನಾಡೆ ಶೀಘ್ರದಿಂ
ಪಗಿದೊಱಗಿತ್ತು ಹುಲ್ಲೆ ಭಲರೇಯೆನುತಂ ನುಡಿದಂ ವನೇಚರಂ ೨೯೭

ಒಡನೆ ಬರಲ್ಕೆ ಸತ್ವವನುಗೂಡದಿರಲ್ ಮಱುಹುಲ್ಲೆ ತಾಯಸಂ
ಗಡ ಬಿಡಮೊಯ್ಯನೊಯ್ಯನೊದಗುತ್ತಿರಲೊರ್ವಪುಳಿಂದ ಕಂಡು ನೀ
ಡಡಿಯಿಡುತುಬ್ಬಿಯಾರ್ದೆಸಲು ಕಾಣುತಲಾಕ್ಷಣ ತಾಯಿಬಂದು ಮುಂ
ಪಡಿಸಿ ಸರಲ್ಗೆ ತತ್ತನುವನಿತ್ತುದು ಪುತ್ರವಿಮೋಹವೆಂತುಟೋ ೨೯೮

ಶರಹತಿಯಿಂ ಹತಮಾಗು
ತ್ತಿರಲಾ ಮಾತೆಯನೆ ಕಂಡು ಮಱಿಯುದೞಿದೆಯೊಳ್
ಪೊರಳುತ್ತಂ ಮೊಲೆಯುಣುತಿರೆ
ಪರಿದೆಚ್ಚಂ ಪಿಶಿತಲೋಲರೊಳ್ ದಯೆಯುಂಟೆ ೨೯೯

ಸತಿಸಹಿತೇಣನೊಂದು ಪರಿಯುತ್ತಿರೆ ಲುಬ್ಧಕನೆಯ್ದೆ ಬೇಗದಿಂ
ಪತಿಯನೆಸಲ್ಕೆ ಬೀೞಲದ ಕಾಣುತಲಾ ಪತಿಭಕ್ತೆ ಪುಲ್ಲೆ ತ
ತ್ಪತಿಯ ಪದದ್ವಯಂಗಳೊಳು ಬೀೞುತ ಜೀವನುಬಿಟ್ಟುದಾಗಳಾ
ಸತಿಯಗುಣಕ್ಕೆ ಭಿಲ್ಲರುಗಳಾಶ್ಚರಿಯಂಗಳ ಮಾಡಿ ನೋಡಿದರ್ ೩೦೦

ಅರಸಿ ಕುರಂಗ ಸತ್ಸತಿಯನೆಲ್ಲೆಡೆಯೊಳ್ ನಡೆನೋಡಿ ಕಾಣದಾ
ನೆರೆಯುಟಿಲುತ್ತ ಲುಬ್ಧಕಶರಾಳಿಯೊಳಂ ಹತವಾದಳೆಂಬ ನಿ
ರ್ಭರದತಿದುಃಖದಿಂ ಸತಿಯರಿಲ್ಲದ ಬಾಟುವೆ ಪೊಲ್ಲದೆಂದು ಗೋ
ಣ್ಮುರಿತಿಯಿನಗಾಗ್ರದಿಂ ನೆಲಕೆ ಬಿಟ್ಟುದು ನಲ್ಲಳಗಲ್ಕೆಯೆಂತುಟೋ ೩೦೧

ಅಗಲಿ ಶರೀರದಿಂದುಟಿಽವನಲ್ಲ ಮನಃಪ್ರಿಯ ತನ್ನನೆಂದು ಮು
ಚ್ಚಿಗಡೊಳು ದುಃಖದಿಂದಱಿಸಿ ಮುನ್ನಿನ ತಾಣದೊಳೆಯ್ದೆ ನೋಡುತಾ
ನಗದಡಿಯಲ್ಲಿ ಗೋಣ್ಮುಱಿಯೆ ಬಿರ್ದುದ ವಲ್ಲಭೆ ಕಾಣುತಲ್ಲಿವು
ಬ್ಬೆಗ ಮಿಗೆ ಕೂಡೆ ಬೀಟ್ಟಿಸುವ ಬಿಟ್ಟುದು ತತ್ಪತಿಮೋಹಮೆಂತುಟೋ ೩೦೨

## ಹುಲಿಯ ಬೇಟೆ

ಭಂಡಿಯ ಪುಲಿಯಂ ಮೆಲ್ಲನೆ
ಕೊಂಡಿಟಿಽಪುತೆ ಸರಿದು ಕೊರಲ ಹಾಸದ ನೇಣಂ
ಕಂಡಳವಿಗೆ ಸಿಲ್ಕಿದ ಮೃಗ
ಮಂಡಲಮನದರ್ಕೆ ತೋಱಿ ಶಬರಾಧೀಶಂ ೩೦೩

(ಗಿರಿಜಾಕಲ್ಯಾಣಂ ೧-೯೪)

ನಿಮಿರ್ದಗಂ ನೀಳ್ದ ಮುಂಗಾಲುಡುಗಿ ನಡೆವ ಪಿಂಗಾಲ್ ಚಲದ್ವಾಲದಂಡಂ
ವಿಮುಳಚ್ಚಂಡಾಕ್ಷಿ ಸೂಕ್ಷ್ಮಶ್ವಸನವದನಮುತ್ಯೇಕಚಿತ್ತಂ ನಿರಸ್ತ
ಕ್ರಮಗಾಥಂ ಕೂಡಿ ತನ್ನೊಳ್ ಬಗೆದಳವಿಗೆ ನಿಂದೇಣನಂ ಕಂಡು ಪೊಯ್ದು
ತ್ತಮಱು[1]ತ್ತಾಡೊತ್ತಿ ಪೀ[1]ಱುತ್ತಡಸಿ ಕೆಡಪಿತೊಂದೇಣನಂ ಚಿತ್ರಕಾಯಂ ೩೦೪

(ಗಿರಿಜಾಕಲ್ಯಾಣಂ ೧-೯೫)

ಪೊದಱಿಳಗತ್ಯುನ್ನತತರ
ಮದಾಂಧತಾನಂತಬಲವಿಭೂಷಣನಪ್ಪ
ಗ್ಗದ ಪೆರ್ಬುಲಿಯಿರೆ ಶಬರರ್
ಮುದದಿಂದಂ ನೋಡೆ ಕಂಡು[2]ಸೋಪಲ್ಮಾಗಳ್[2] ೩೦೫

(ಗಿರಿಜಾಕಲ್ಯಾಣಂ ೧-೯೬)

---

[1]ತಾಱುತ್ತೆ ಕೀ(ಅ) [2]ಮುತ್ತೊಂದೆಡೆಯೊಳ್(ಅ)

ಮೆಳೆಯೊಳಗಿರ್ದ ಪೆರ್ಬುಲಿಯನಾರ್ದು ಪುಳಿಂದನಿಕಾಯಮೆಟ್ಟಿ ಪಿಂ
ಗಳತರಲೋಚನಂ ಬಹಳಸಂಹನನಂ ಪೃಥುಳಾಸ್ಯಗಹ್ವ[1]ರಂ
ಗ[1]ಳಿತನಿಶಾತದಂಷ್ಟ್ರನತಿರೋಷಣನಂ ಘನಚಿತ್ರಕಾಯನು
ಜ್ವಳಚರಣಂ ವಿಘೂರ್ಣಿತಗಳಂ ಪೊಱಮಟ್ಟುದುದಗ್ರವೃತ್ತಿಯಿಂ ೨೦೬

(ಗಿರಿಜಾಕಲ್ಯಾಣಂ ೧-೯೭)

ನಿರ್ಘರಿಸುತ್ತೆ ಬೇಂಟೆಯ ಕಿರಾತರರಣ್ಯಮನೆಯ್ದು ತಲ್ಲಿ ಪೆ
ಚ್ಚಿರ್ದ ಮೃಗಂಗಳಂ ತವಿಸುವಬ್ಬರಬೊಬ್ಬೆಗಳೆಯ್ದೆ ಪರ್ಬಲು
ರ್ಬಿದ್ದುದಮೊಂದು ಪೆರ್ಬುಲಿ ಗುಹಾಂತರಮಂ ಪೊಱಮಟ್ಟು ಬಂದು ಮುಂ ಪ
ರ್ಬಿದುದದೊಂದು ಪೆರ್ಮೆಳೆಯ ಪೊಕ್ಕಡಗಿರ್ದುದದೇನ ಬಣ್ಣಿಪೆಂ ೨೦೭

ನೆಲದೊಳಡಂಗಿ ಕುಕ್ಕುರಿಸಿ ಮುಂದಣ ಕಾಲ್ಗಳ ನೀಡಿ ಮೇಲೆ ತ
ತ್ತಲೆಯನಿಡುತ್ತೆ ಜೃಂಭಿಸುವ ಮುಕ್ಕ್ವಕಮಂ ಚರಣಾಗ್ರದಿಂದಮಂ
ತೊಲಗಿಸಿ ವಕ್ತ್ರಮಂ ತಡೆವುತಂ ಚಲಿಸುತ್ತವೆ ಬಾಲಮೊಪ್ಪುವೆ
ಕ್ಕಲಗಳ ನೋಡುತಂ ರಿಪುನಿವಾರಣನಾ ಪುಲಿಯಿರ್ಪ ರೌದ್ರಮಂ ೨೦೮

ಪೊಱಮಡೆ ಕಂಡುಕಂಡು ಮಿಗೆ ದಂಡೆಯನಿತ್ತು ಕಱುತ್ತು ಹತ್ತೆ ಸಾ
ರ್ದಱುಬಿಗಿಲುತ್ತ ಸುತ್ತಿದ ಕಿರಾತಕುಲಂ ಮುರ್ಷು ಭಾಪೆನುತ್ತೆ ಬೊ
ಬ್ಬಿಱಿಯೆ ಕುನುಂಗಿ ಕುಕ್ಕುರಿಸಿ ಸಿಳ್ರನೆ ಕೀೞ್ತಲಗಿಂ ಕಡಂಗಿ ಕಾ
ಯ್ವಱಿದನಪೊರ್ವ ಲುಬ್ಧಕನುಗರ್ವಿನ ಪೆರ್ಬುಲಿಯಂ ವನಾಂತದೊಳ್ ೨೦೯

ಮೆಳೆಯಿಂದಂ ಪೊಱಮಟ್ಟು ಮೆಯ್ಮುರಿದು ಕಿಗ್ಗಣ್ಣಿಕ್ಕಿ ಕಂಡಾಳ್ಗಳಂ
ನೆಲನಂ ಘರ್ಜಿಸಿ ಪೊಯ್ದು ಬಾಯ್ದೆಱೆದು ಪುರ್ಬಿಕ್ಕುತ್ತ ವಾಲಾಗ್ರಮಂ
ಮುಳಸಿಂ ದಾಡೆಗಳಿಂದೆ ಕಚ್ಚಿ ಸೆಳೆವುತ್ತುತ್ಕ್ಷೇಪದಿಂ ಪಾಯ್ವ ಪೆ
ರ್ಬುಲಿಯಂ ದಂಡೆಯೊಳಾಂತು ನಿಂತು ತಿವಿದಂ ವಿಕ್ರಾಂತಕಂಠೀರವಂ ೨೧೦

ಜಡಿವನ್ನಂ ಸ್ಥೂಲವಾಲಂ ಕುಸಿದು ಘಳುಘುಳುಧ್ವಾನದಿಂ ಘರ್ಜಿಸುತ್ತುಂ
ಕಿಡಿಗಳ್ ಕಣ್ಣಾಲಿಯಿಂದಂ ಕೆದಱೆ ಮುಳಿದು ಮೇಲ್ವಾಯ್ವ ಶಾರ್ದೂಲಮಂ ಪೊ
ಕ್ಕುಡಿಯೊಳ್ ಮೇಲ್ದಂಡೆಗೊಂಡುರ್ಚಿದ ಕಿಱುಯಲಗಿಂದೊಂದೆರಬ್ಬೊಱುನಾಲ್ಕೈ
ಡಡಕಿಲ್ಗೊಂಡೇಱು ಬೆನ್ನೊಳ್ ಪೊಳೆವಿನಮಿಱಿದಂ ವೀರವಿಂಧ್ಯಾಧರೇಂದ್ರಂ ೨೧೧

(ಸೂಕ್ತಿಸುಧಾರ್ಣವಂ, ೨-೧೨೭)

---

[1]ಕೋಧ್ವ(ಅ)

ಚಳಲಾಂಗೂಲಂ ಸಮುದ್ಯದ್ಘುಳುಘುಳಿತಗಳಧ್ವಾನರೌದ್ರಾನನಂ ಪಿಂ
ಗಳನೇತ್ರೋಜ್ಜೃಂಭಿತಂ ತಾಂ ಪುಲಿ ನಿಲಲಿದಿರೊಳ್ ತದ್ಭಯಭ್ರಾಂತೆ ಕೌತೂ
ಹಳೆ ನಲ್ಲಳ್ ಭೋಂಕನಪ್ಪಲ್ ಪುಲಿಯ ಭಯದೆ ತ[1]ಳ್ತ[1]ಪ್ಪು ಬಿಟ್ಟ[2]ಪ್ಪಳಿಂ[2]ದು
ನ್ಮಳದಿಂದಂ ತೀವಿ ತೊಟ್ಟಂ ಮಿಸುಕದೆಸಪೆ ನಿಂದಂತೆ ನಿಂದಂ ಪುಳಿಂದಂ ೩೧೨
(ಸೂಕ್ತಿಸುಧಾರ್ಣವಂ ೩-೧೫೫)

ಇಡುಕುಱಿತೂಳೆಯ್ದೆ ಪೆರ್ಬುಲಿಯುಗುರ್ಬಿಸಿ ಸೈಕನೆ ಪೋಲುವಾಯೆ ಮುಂ
ದಡಿಯಿಡುತೆಯ್ದೆ ಗಂಟಲೆಡೆಯಂ ಪಿಡಿದೊತ್ತುವ ತಾಣದೊಳ್ ನಖಂ
ಮುಡುಪಸವುಂಕೆ ಕಂಡು ಸತಿ ಕಂಟಿಸಿ ಕಾಡುವಳೆಂದು ಬಂದು ತ
ನ್ನೊಡನೆಯ ಬೇಂಟೆಕಾಱವಡೆಯಂ ನುಡಿಸಾಕೆಗಮುಂಟುಮಾಡಿದಂ ೩೧೩

ಪುಲಿಯುಗುರೆಯ್ದೆ ನಾಂಟಲುರಮಂ ಸುಳಿದೆಯ್ದೆ ಪುಳಿಂದನೊತ್ತಿಗಂ
ಟಲನದು ಪಾಯೆ ತದ್ವ್ರಣವಿದನ್ಯವಧೂಟಿಯೊಳಾದುದೆಂದವಳ್
ಕಲುಷಿತೆಯಕ್ಕುಮೆಂದಱಿದು ಭಾವಿಸಿ ನೋಡದೆ ತನ್ನ ನೋವನಾ
ಪುಲಿವೆರಸಾ ವ್ರಣಂಬೆರಸು ವಲ್ಲಭೆಯಲ್ಲಿಗೆ ತಂದು ತೋಱಿದಂ ೩೧೪

ಹುಲಿ ಬಿಲದಿಂ ಬಿಸಲ್ಗೆಳಸಿ ಪಟ್ಟಿರೆ ಕಂಡು ವನೇಚರಂ ಕಱು
ತ್ತಲಗನೆ ಕಿಱ್ತು ದಂಡೆಗುಡೆ ಕೊರ್ಬಿದ ಪೆರ್ಬುಲಿ ಪೋಲೆವಾಯಲಾ
ಪುಲಿಯನೆ ಕುತ್ತಿಯಪ್ಪಳಿಸೆ ಕಂಡು ಪುಳಿಂದೆ ಮನೋನುರಾಗದಿಂ
ಕಲಿಗಳದೇವ ಭಾಪೆನುತಲಪ್ಪಿದಳೋವುತೆ ತನ್ನ ನಲ್ಲನಂ ೩೧೫
(ಸೂಕ್ತಿಸುಧಾರ್ಣವಂ ೩-೨೨೮)

ಅಸಿತಾಹಿವ್ಯೂಹಸೋಹಂ ಪುದಿಯೆ ಮದಮಯೂರೋತ್ಕರಂ ಚಂದ್ರಕಾಂತ
ಪ್ರಸರಗ್ರಾಸಂಗಳೊಳ್ ಮಾರ್ಪೊಳೆವ ನವತಮಾಲಸ್ಫುರಚ್ಛಾಖೆಯಂ ಖಂ
ಡಿಸಲೆಂದೈತಂದಸಂತಾ ಶಿಲೆಯೊಳಗಣಶೋಕಸ್ತರುಚ್ಛಾಯೆ ತಳ್ತು
ರ್ವಿಸೆ ಮಾಂಸಭ್ರಾಂತಿಯಿಂ ತದ್ಗಿರಿಯೊಳೆಳೆಸುಗುಂ ಬಾಲಶಾರ್ದೂಲಜಾಲಂ ೩೧೬
(ಸೂಕ್ತಿಸುಧಾರ್ಣವಂ ೩-೧೯೮)

ಉಗುರ್ಪೊಯ್ಲೀತನ ಮೆಯ್ಯೊಳೀ ಪುಲಿಯ ಪ್ರೊಯ್ಲಿಂದಾದುದೆಂದೋಪನಳ್
ಬಗೆವಂತನ್ಯವಧೂರತೋತ್ಸವನಖಾಂಕಾನೀಕಮಂ ಮುಚ್ಚುವು
ಜ್ಜುಗದಿಂದಂ ಪಿಡಿದೊಂದು ಪೆರ್ಬುಲಿಯನೊಬ್ಬಂ ಕುಕ್ಷಿಯಿಂದೊತ್ತಿ ತ
ನ್ನ ಗೃಹಕ್ಕೆಯ್ತರುತಿರ್ದನೊಂದೆಡೆಯೊಳುದ್ಯದ್ಧೀವರಂ ಧೀವರಂ ೩೧೭
(ಜಗನ್ನಾಥವಿಜಯಂ ೧೬-೨೦; ಸೂಕ್ತಿಸುಧಾರ್ಣವಂ ೩-೧೫೩)

---

[1]ನ್ನ(ಸೂ) [2]ಪ್ಪುದೆಂ(ಸ)

ಇದಿರೊಳ್ ಪುಲಿ ಗರ್ಜಿಸಿ ನಿಲೆ
ಬೆದಱು ಕರಂ ಶಬರಿ ಬರಿಯುನಪ್ಪಲೊಡಂ ರೋ
ಷದಿನಲರ್ದುದೊಂದು ಕಣ್ ರಾ
ಗದೆ ಮುಗುಳ್ವುದದೊಂದು ಕಣ್ ವನೇಚರಪತಿಯಾ ೩೧೮
(ಚಂದ್ರಪ್ರಭಪುರಾಣಂ ೫–೫೯; ಸೂಕ್ತಿಸುಧಾರ್ಣವಂ ೩ ೧೫೬)

ಬಿದಿರ ಸಿಡುಂಬಿನೊಳ್ ಗಜಱು ಗರ್ಜಿಸಿ ಪೆರ್ಬುಲಿ ಪಾಯೆ ಕಯ್ದುಗೆ
ಯ್ಯೆಡೆ ಕೆಲಸಾರ್ದು ಮೆಯ್ ಪೊಣರ್ದು[1] ತೊಟ್ಟನೆ ಗಂಟಲನೊತ್ತಿ ಕಿಬ್ಬಿಸಿರ್
ತಿದಿಯವೊಲಾಗೆ ಕಣ್ ತುಮುೞ್ತು ಬಿರ್ದು ಮುಸುಂಬಿ ಜವಂಗೆ ಬಿರ್ದನಿ
ಕ್ಕಿದನುಸಿರಿಕ್ಕಲೀಯದುಸಿರಿಕ್ಕುವವೋಲ್ ಶಬರಂ ಮಹಾಬಳಂ ೩೧೯
(ಮಲ್ಲಿನಾಥಪುರಾಣಂ ೧೦–೭೩; ಸೂಕ್ತಿಸುಧಾರ್ಣವಂ ೩–೧೩೯)

ತನತನಗೆ ಪಂದಿವೇಂಟೆಯ
ವನಚರರೆಯ್ತಂದು ನಿಂದು ನೀರ್ದಾಣದೊಳೊ
ಗ್ಗಿನ ಮರನ ಮಱೆಯೊಳಿರೆ ಮೆ
ಲ್ಲನೆ ಬಂದತ್ತೊಂದು ಸೊಕ್ಕಿದೆಕ್ಕಲನಾಗಳ್ ೩೨೦

ಧೀರಂ ಪಿಂಗಳಲೋಚನಂ ನಿಶಿತದಂಷ್ಟ್ರಂ ಭೀಷ್ಮನಕ್ತ್ರಂ ಘನ
ಕ್ರೂರಂ ವಜ್ರಸಮಾನರೋಮನಿಚಯಂ ಸಂಪೂರ್ಣಕಾಯಂ ಸ್ಥಿರಂ
ಶೂರಂ ರೌದ್ರಗಭೀರಚಿತ್ತನತಿಮಾನಿ ಸ್ವಲ್ಪಪುಚ್ಛಾನ್ವಿತಂ
ಘೋರಾರಣ್ಯಚರಂ ವಿರಾಜಿಸಿದುದುದ್ಯದ್ಭೀಕರಂ ಸೂಕರಂ ೩೨೧
(ಗಿರಿಜಾಕಲ್ಯಾಣಂ ೧–೧೦೦)

ನಿಟ್ಟಿಸಿ ನೋಡುತಂ ನಡೆವ ನಾಯಿಗಳಂ ತಗುಳುತ್ತಮೆಚ್ಚ ಕೋ
ಲ್ಗುಟ್ಟುತಮುಗ್ರರೂಪದೊಳೆ ಬರ್ಪುದನಂತಸಹಾಯಶೂರನಾ
ದಿಟ್ಟಿಯೊಳಾಲಿಸಿಟ್ಟೆಡಲದಂತದು ಕಂಧಮನುರ್ಚಿ ಧಾತ್ರಿಯೊಳ್
ಕಟ್ಟಿದ ಕಂಭದೊಳ್ ಕಳಭಮಿರ್ಪವೊಲಿರ್ದುದು ಸೊಕ್ಕಿದೆಕ್ಕಲಂ ೩೨೨

ಒತ್ತಿಸೊಳಿರ್ದು ಕೈಪಱುವ ದಂತಿಯವೋಲ್ ಕಡುಪಿಂದೆ ದಾಡೆಗು
ಟ್ಟುತ್ತಿರೆ ನೋಡಿ ಕಂಡಿರದೆ ಚಾಪಮನೋಪಳ ಕೈಗೆ ನೀಡಿ ನೀ
ನತ್ತಿರು ಸಾರ್ದುಯೆಂದಲಗನೊಯ್ಯನೆ ಕಿೞ್ತಿಡೆ ಕಂಡು ದಿಂಡುವಾ
ಯ್ದೊತ್ತಿದ ಪಂದಿಯುಂ ಮುಳಿದು ಕುತ್ತಿದನೊತ್ತಿದನಾ ವನೇಚರಂ ೩೨೩
(ಸೂಕ್ತಿಸುಧಾರ್ಣವಂ ೩–೧೩೨)

---

[1] ಯ್ಯೋಲೆವ.(ಕ)

ಬಳಸುತ್ತಂ ಪಾಯಿಸುತ್ತಂ ತುಡುಕಿತುಡುಕಿ ಪಿಂದಟ್ಟುತಂ ಮುಂದೆ ಮುಂದ
ನ್ನಳಿಸುತ್ತಂ ಕುಕ್ಕುರಂಗಳ್ ತೆಗೆಯೆ ಮಿಗೆ ಬಟಿಲ್ದೊಯ್ಯನಂತಂತೆ ಕಿಗ್ಗ
ಣ್ಣೊಳೆ ನೋಡುತ್ತೋರೆಯಿಂದಂ ಪಿರಿಯ ದರಿಯನಾನಲ್ಕೆ ಸಾರ್ದಂಡುಗೊಂಡಿ
ರ್ದಿಳೆ ಕಂಪಂಗೊಳ್ವಿನಂ ಘರ್ಜಿಸಿದುದು ಮುಳಿನಾಭೀಳದೇಹಂ ವರಾಹಂ ೩೨೪

ಅಡಸಿದೊಡೆಕ್ಕಲಂ ತಗುಳ್ದು ಘೋಂಕನೆ ಪಾಯೆ [1]ಬೆದರ್ದ[1] ನಲ್ಲಳಂ
ಸೆಡೆಯದಿರೆಂದು [2]ಪಿಂ[2]ದಿರಿಸಿ ಗಾತ್ರಮನಿಕ್ಕಿ ಕುನುಂಗಿ ನೋಱತಯಂ
ಪಿಡಿದೆಡಗಯ್ಯೊಳುದ್ಧರಿಸಿ ಸಬ್ರನೆ ಕಿತ್ತಲಗಿಂಡೆ ಪಂದಿಯಂ
ನಡುಕಡಿಯೋಪಿನಂ ತಿವಿದು ಮೆಚ್ಚಿಸಿದಂ ಶಬರಂ ಪುಳಿಂದಿಯಂ ೩೨೫

(ಸೂಕ್ತಿಸುಧಾರ್ಣವಂ ೩-೧೩೫)

ಮುಸ್ತಾಕಂದಮನೆತ್ತಿ ಬೇರ್ಗಳನಿತಂ ತಿಂದುಗ್ರದೇಹಂ ಮಿಗ
ಲ್ವೆತ್ತಂಭಪ್ಲವಮಾದ ಪೆರ್ಗೆಱತಗಳಂ ಪಾಯ್ದಲ್ಲಿ ಮುನ್ನಾಯ್ಗಳಂ
ಕುಸ್ತಾಲಂಬಿತಮಾಡುತಂ ಬಿಡುಬಿಡೆಂದಾರ್ದಿರ್ದ ಬೇಡರ್ಕಳಂ
ಹಸ್ತವ್ಯಾಜದೊಳೊಕ್ಕಲಿಕ್ಕಿ ಕೆಡೆಪಿತ್ತಂದೊಂದು ನಿಂದೆಕ್ಕಲಂ ೩೨೬

ಪೆರ್ಮೆಳೆಯೊತ್ತುಗೊಂಡಿದಿರನಾಲಿಸಿ ದಾಡೆಯ ಕುಟ್ಟೆ ಕೋಪದಿಂ
ಘೂರ್ಮಿಸುತಟ್ಟಿಮುಟ್ಟೆ ಬಹ ಜಾಯಿಲನಂ ಕಡಿಖಂಡಮಾಡುತಂ
ಪೆರ್ಮೆಗಸಾಧ್ಯಮೆಂಬ ಬಲುಪಿಂದಮೆ ಸೂಕರನಿರ್ಪ ರೀತಿಯಂ
ದುರ್ಮನತರ್ಕೆಬರ್ಪ ಬಲುಜಾಯಿಲನಂ ಬಿಡಲಾರ್ದು ಬೇಗದಿಂ ೩೨೭

ಜಾರಿವರಿದಲ್ಲಿ ವನಚರ
ರೂರುದ್ವಯಗಳನೆ ಸೀಳೆ ಕುಕ್ಕುರಗಳನು ವಿ
ದಾರಿಸುತಾದಿವರಾಹನ
ಸೇರುವೆಗಿಬೆಯೆಂಬ ತೆಱದೊಳಿರ್ದುದು ಕ್ರೋಡಂ ೩೨೮

ಅಗ್ಗಳನೆಂಬಾ ನಾಯದ
ನೊಗ್ಗಿಸಿ ತಲೆದಡವಿ ಬಿಡಲ್ ಕಾಣುತ್ತದು ಮೇ
ಲಗ್ಗಳಿಸುತ್ತಂ ಸೆಳೆಯು
ಲ್ಕಿಗ್ಗಡಿಸರಿಯೆನಲು ಪೊಡೆಮುದಾ ಕುಕ್ಕುರನಂ ೩೨೯

---

[1]ಬೆಗಳ್ತ(ಸ) [2]ಮುಂ(ಸ)

ಬರೆ ಕಾಣುತ್ತಲ್ಲಿ ಭಿಲ್ಲಪ್ರಕರವಡಿಸಿ ಕೂರ್ನಾಯ್ಗಳಿಂ ಬಿಟ್ಟು ಬೊಬ್ಬಿ
ಟ್ಟರರೇ ಕೈಗೊಂಡು ನಾಲ್ಕುಂ ದೆಸೆಗೆ ಮಸಗೆ ಕಂಡೆಕ್ಕಲಂ ದಾಡೆಗುಟ್ಟು
ತ್ತೆರಡುಂ ಕಣ್ ವಿಸ್ಫುಲಿಂಗಂ ಸುರಿದಪುವೆನೆ ನೋಡುತ್ತೆ ಮುಂಗಾಣುತಲ್ಲಿಂ
ಖುರದಂಷ್ಟ್ರಾಗ್ರಂಗಳಿಂ ಭೂಮಿಯನಿರದೆ ಜೆಱಂಟಿತ್ತು ಮುಂಗಾಲ್ಗಳಿಂದಂ ೩೩೦

ನಟ್ಟಡವಿಯೊಳಗೆ ಮುಳಿಸಿಂ
ಮುಟ್ಟುವ ನಾಯ್ಗಳನೆ ತುಂಡಿಸಲ್ಕೆಂದುಱೆ ಕಿ
ರ್ಗುಟ್ಟುತೆ ಮುಂದಟ್ಟುತೆ ಸಿಂ
ದಟ್ಟುತೆ ಸೂಕರನಡರ್ದು ಸಾರ್ದುದು ಮೆಳೆಯಂ ೩೩೧
(ಗಿರಿಜಾಕಲ್ಯಾಣಂ ೧-೧೦೨)

ಕುಪ್ಪಳಿಸಿ ತುಱುಗಿ ಪರ್ವಿದ
ಱಕೊಪ್ಪನನಿರದಂಡುಗೊಂಡು ಪಂದಿಯು ಬೞಿಯೊಳ್
ನೊಪ್ಪಗೆಡೆದುಬ್ಬಿ ಪಾಯ್ವುತೆ
ಚಪ್ಪರಿಸುತ್ತುಗಿದು ಬಗಿದು ತೆಗೆದುವು ನಾಯ್ಗಳ್ ೩೩೨
(ಗಿರಿಜಾಕಲ್ಯಾಣಂ ೧-೧೦೩)

ಮುಳಿದಟ್ಟೆತೆಗೆದು ಬಳಸಿ
ತ್ತೊಳಪೊಕ್ಕು ಮರಳ್ದು ಮತ್ತೆ ಬೆನ್ನಟ್ಟೆ ಕರಂ
ಕಳಿದು ಪೆಡಂಬಾಯ್ದುೞಿಲಿಂ
ಬಳಲಿಸುತಿರೆ ನಿಂದು ಪಂದಿಯಂ ಶುನಕೇಂದ್ರಂ ೩೩೩
(ಗಿರಿಜಾಕಲ್ಯಾಣಂ ೧-೧೦೪)

ಮಿಕ್ಕು ಪುಗಲಿತ್ತು ಕಿರ್ಗ
ಣ್ಣುಕ್ಕುತ್ತೊಳಪೊಕ್ಕು ಜಾಯಿಲನ ಬಡನಡುಮಂ
ಚಕ್ಕನೆ ತುಂಡಿಸಿ ಮುಲೆಯುತೆ
ಧಿಕ್ಕರಿಸಿತ್ತತುಳ ಕೋಪನೀಡಂ ಕ್ರೋಡಂ ೩೩೪
(ಗಿರಿಜಾಕಲ್ಯಾಣಂ ೧-೧೦೫)

ಅಳ್ಕಿ ಪುಳಿಂದಂ ಕಾಣುತೆ
ತೞಿಸ್ಕ್ರಸಿಯೆ ಕೊಂಡು ಶುನಕನೆರಡುಂ ಕಡಿಯುಂ
ಕಾೞ್ಕಿಚ್ಚುರ್ಗೆ ತಗುಳ್ದ ತೆಱದಿಂ
ನಿೞಿಸ್ಕ್ರಸದೆ ನೊಂದು ಬೆಂದು ಬೞಲುತ್ತಿಂದಂ ೩೩೫
(ಗಿರಿಜಾಕಲ್ಯಾಣಂ ೧-೧೦೬)

ಪಾಸಿನಮೇಲೆ ಪಟ್ಟಿರಿಸಿ ಪಾಲೆಱೆದಂತೊಡಗೂಡಿ ಬಾಲಕಾ
ಭ್ಯಾಸದಿನೆತ್ತಿ ಸತ್ತಿಗೆಯ ತಣ್ಣೆೞಲೊಳ್ ಬಳೆವಂತು ಮಾಡಿಯು
ಚ್ಚಾಸನದಲ್ಲಿ ಕುಳ್ಳಿರಿಸಿ ಸಾಕಿದ ಕುನ್ನಿಯನೀ ವರಾಹನೀ
ಸಾಸಿಗನೀ ಕಠೋರವನನೆನ್ನಯ ಮುಂದೆ ಸಮಂತು ಕೊಲ್ವುದೇ ೩೩೬

(ಗಿರಿಜಾಕಲ್ಯಾಣಂ ೧-೧೦೬)

ಪಿಂಗದೆ ಕಿರಾತ ನಲವಿಂ
ಬೆಂಗೊಂಡೆಕ್ಕಲನನಟ್ಟಿ ಪಿಡಿದತಿಮುದದಿಂ
ಮುಂಗಾಣದೆನ್ನ ನಚ್ಚಿನ
ಸಿಂಗಮನುಗುೞುಗುೞಿಸುತ್ತೆ ವನಚರನಿಱಿದಂ ೩೩೭

(ಸೂಕ್ತಿಸುಧಾರ್ಣವಂ ೩-೨೨೭)

ಕಂಡೊರ್ವ ಶಬರ ಪಂದಿಯ
ಖಂಡೆಯಮಂ ಜಡಿದು ಪೊಡೆಯಲೊಂಪೆ ಪೊಯಿಲಿಗೆ
ತುಂಡವು ಮೂಱಾಗುತ್ತುಂ
ಡೆಂಢಣಿಸದೆ ಮುಂದಕಡಿಯನಿಟ್ಟುದು ಚಿತ್ರಂ ೩೩೮

ಇಕ್ಕೆಲದ ಶಬರರಾರ್ದಿಸೆ
ಯೆಕ್ಕಲನನದೊಂದು ಬಾಣ ನಡದಿರೆ ಸತಿ ಕಂ
ಡಕ್ಕಟ ಬಲ್ಲಾಳೇಯೆನ
ಲಕ್ಕಾ ನೀಂ ಪೆಣ್ಣೆನಲ್ಕೆ ಲಜ್ಜಿತೆಯಾದಳ್ ೩೩೯

(ಸೂಕ್ತಿಸುಧಾರ್ಣವಂ ೩-೧೩೬)

ಕೀಲಿಸಿ ಕಂಧರದೊಳ್ ಭೂ
ಪಾಲಕನಿಡೆ ನೊಂದು ಪಂದಿ ತಿರುಗುವ ಪದದೊಳ್
ಕೇಲಂ ಮಾಡುವ ತಿಗುರಿಯ
ಕೋಲಂದದೊಳಿರ್ದುದಿಟ್ಟಿ ತನು ಕೆಡೆವಿನೆಗಂ ೩೪೦

(ಸೂಕ್ತಿಸುಧಾರ್ಣವಂ ೩-೧೩೦)

# ಆನೆಯ ಬೇಟೆ

ವರಿಯಂ ದಂತಾಗ್ರದಿಂದೀಡಿಱಿದು ಕೆಡುಪುತ್ತಂ ಗುಲ್ಮವೃಕ್ಷಂಗಳಂ ತ
ತ್ಕರದಿಂದಂ ಸುತ್ತಿ ಕಿೞ್ತಿತ್ತುತೆ ನಿಜ[1]ಪುಳಕ[1]ಚ್ಛಾಯೆಯಂ ಕುಂಭಿಗೆತ್ತು
ದ್ಧುರಕೋಪಾಟೋಪದಿಂ ಕಂಡೆಱಗುತೆ ಮದನಸೌರಭ್ಯಲೋಲುಪ್ತಭೃಂಗೋ
ತ್ಕರಮಂ ಕರ್ಣಾಗ್ರದಿಂ ಸೋವುತ ಕರಿಯಿರೆ ನಿಂದೊಂದದಭ್ರಭ್ರಕಾಶಂ ೩೪೧

(ಗಿರಿಜಾಕಲ್ಯಾಣಂ ೧-೧೧೨)

ಅಟ್ಟಿಕೊಳುತ್ತಮಿರ್ಪ ಕರಿಕುಂಭಮುಮಂಬುಜದಲ್ಲಿ ಮಾಲೆಗೊಂ
ಡೆಟ್ಟಳಿಯಂ ತೆರಳ್ಚಿ ತೆರೆಗೋಱುವ ಶೀಕರಮುಂ ವಿಳಾಸಮಂ
ತಾಳ್ದಿದುವೊಪ್ಪೆ ತೋರಮೊಲೆಗಳ್ ಜಲದೇವಿಕಟಾಕ್ಷವೀಕ್ಷಣಂ
ನೀಳ್ದಿರೆ ನೋಡುತಂ ಬಿಡದೆ ಮುತ್ತಿನಸೇಸೆಯನಿಕ್ಕುವಂದದಿಂ ೩೪೨

(ಲೀಲಾವತಿ ೬-೯೬)

ಅದೆ ಕಳಹಂಸ[2]ಸಾರ್ದಪುದು[2] ಬಾಳಮೃಣಾಳಮಿದೆಂದು ತುಂಬಿ ಮಾ
ಣದೆ ಮುಸುಱುತ್ತಮಿರ್ದಪುದು ಪದ್ಮಮಿದೆಂದು ಪುಳಿಂದಿ ನಿಂದು ನೋ
ಡಿದಪಳಿದಾನೆಯೆಂದು ಕೊಳದೊಳ್ ನಲಿದಟ್ಟಿಕೊಳುತ್ತಮಿರ್ಪ ಪೋ
ತದ ರದನಾಗ್ರಮಂ ಪೊಳೆವ ಪುಷ್ಕರಮಂ ನಸುದೋರ್ಪ ಕುಂಭಮಂ ೩೪೩

(ಲೀಲಾವತಿ ೬-೯೭)

ಕಂಡು ಕಿರಾತನೊರ್ವನಿಭಮಸ್ತಕಮೌಕ್ತಿಕಲೋಭದಿಂದೆ ಕೋ
ದಂಡಮನಾರ್ಪಿನಿಂ ತೆಗೆದು ಕೂರ್ಪಿನ ಬಾಣದಿನೆಚ್ಚೊಡುರ್ಚೆ ವೇ
ತಂಡಲಲಾಟದಿಂ ನೆಱಗೆ ಪೇಚಕದೊಳ್ ಮಿಗೆ ಮೂಡೆ ತಲ್ಲಣಂ
ಗೊಂಡುರೆ ಕುರ್ಗಿ ಕುಕ್ಕುಱಿಸಿ ಘೀಳಿಡುತಿರ್ದುದು ಬಿಟ್ಟು ಭೂಮಿಯೊಳ್ ೩೪೪

(ಗಿರಿಜಾಕಲ್ಯಾಣಂ ೧-೧೧೩)

ನಡೆದು ಗಬಿಗಬಿನೆ ಮತ್ತೊಂ
ಪೆಡೆಯೊಳ್ ಗಜಮೆಯ್ದೆ ಪೊಕ್ಕು ನದಿಯೊಳ್ ಕಡುನೀ
ರಡಸಿ ತೆಗೆದೀಂಟೆ ಜಲಮಂ
ಬಿಡೆತಮ್ಮೊಳ್ ತೀವಿಕೊಂಡು ಚೆಲ್ಲುವ ಪದದೊಳ್ ೩೪೫

(ಗಿರಿಜಾಕಲ್ಯಾಣಂ ೧-೧೨೦)

---

[1] ವಿಪುಳ(ಅ) [2] ಸೂಪೆಳೆಯು(ಸ)

ಇಳೆಯೊಳ್ ತಮ್ಮಂ ಕಾದಾ
ಪುಳಿಂದನಾಯಕಿಯ[೧]ರಪ್ಪವರ್ಗಘ್ರ್ಯ[೧]ಮನಂ
ತಳವಡೆ [೨]ಕುಡುವಂ[೨]ತಿರ್ದುದು
ಜಳಪೂರಿತ ಹಸ್ತದಿಂದೆ ಹಸ್ತಿಕದಂಬಂ ೩೪೬
(ಗಿರಿಜಾಕಲ್ಯಾಣಂ ೧-೧೨೧)

ಪ್ರಕುಪಿತದಿಂ ತೆಗೆದಿಸೆ ಮು
ಸ್ತ್ರಕಮಂ ಕರಿ ನೊಂದು ತಿರುಗೆ ಪರಿವ ಶರಂ ಪೇ
ಚಕದಿಂದುರ್ಚೆ ಕರಂ ಲು
ಬ್ಧಕನಂ ತಾಗಿತ್ತು ಮುಗುಳ್ದು ವನದೊಳ್ ಚಿತ್ರಂ ೩೪೭
(ಗಿರಿಜಾಕಲ್ಯಾಣಂ ೧-೧೧೧)

ಉರವಣೆಯಿಂ ಕೃತಾಂತನವೊಲೆಯ್ದುವ ದಂತಿಯ ಮುಂದೆ ಪೊಕ್ಕು ಸಾ
ದ್ದುರಮನೆಸಲ್ [೩]ಪೆಡಂ[೩]ಮುಗುಳ್ದು ದಂತಿಯ ವಕ್ಷಮನುರ್ಚೆ ಪೇಚಕಾಂ
ತರದೆ ನುಸುಳ್ದು ತನ್ನುರಮನುರ್ಚಿದೊಡಚ್ಚರಿಪಟ್ಟನೆಚ್ಚುಬಿ
ತ್ತರಿಕೆಗಮಾ ತೆಱಂದಿಱಿದ ದಂತಿಗಮಾ ವನದೊಳ್ ವನೇಚರಂ ೩೪೮
(ಸೂಕ್ತಿಸುಧಾರ್ಣವಂ ೩-೧೫೮)

ಘನಗಜರಾಜನೊಂದು ಶಶಿಕಾಂತಶಿಲಾಂತದಿ ತನ್ನ ರೂಪ ನೆ
ಟ್ಟನೆ ಕರಿಗೆತ್ತು ಕೋಪಮಿಗೆ ತಾಗೆ ರದಂಗಳುಡಿರ್ದು ಬಿಂಬಮಂ
ವಿನಯದಿ ನೋಡಿನೋಡಿ ಕರದಿಂ ತಡವುತ್ತಿರಲಾ ಮದೇಭಮಂ
ವನಚರನಿಕ್ಕೆ ಬಂದು ಸಲೆ ನಿಟ್ಟಿಸಿ ಬಣ್ಣಿಸಿದಂ ಮನೋಜನಂ ೩೪೯

ಕರಿ ಪೊಣರ್ದಿಕ್ಕಲಂ ಮಲೆತು ಪೆರ್ಬುಲಿ ಪಾಯ್ದುಗಿಯಲ್ಕೆ ಡೊಣಿವಿ
ಟ್ಟುರದ ಪಿಸುಟ್ಟಿ ಪೆರ್ದೊಡೆಯ ನುರ್ಗಿದ ದಂಡೆಯ ಭಂಗಿ ರೌದ್ರಮಾ
ಗಿರೆ ನೆಱೆ ಮೂಱು ಬೇಂಟೆಯುಮನಾಡಿ ತದಾಮಿಷಭಾರದಿಂದೆ ಜೀ
ರ್ಗಿರೆಯುತಮಂತೆ ಕಾಲ್ನೊಲಪಿನಿಂ ಬರುತಿರ್ದನದೊರ್ವಲುಬ್ಧಕಂ ೩೫೦
(ಸೂಕ್ತಿಸುಧಾರ್ಣವಂ ೩-೧೬೪, ಜಗನ್ನಾಥವಿಜಯಂ ೧೬-೨೧)

ಕರಡಿಯನೆಚ್ಚೊಡುರ್ಚಿ ಸರಲುರ್ಕಿನ ಪಂದಿಯನುರ್ಚೆ ಭೀಕರೋ
ತ್ಕರಮಪ್ಪ ಪೆರ್ಬುಲಿಯನುರ್ಚಿದೊಡಂತವು ರೌದ್ರಕೋಪದಿಂ
ದಿರದೞಿತಯಟ್ಟಲಂಜದೆ ಕ್ರಮಂ ಪಿಡಿದೊಯ್ಯನೆ ನೇಣ ಕಿತ್ತು ಮಾ
ಕರಡಿಯನಾ ವರಾಹನುಮಾ ಪುಲಿಯಂ ತಿವಿದಂ ವನೇಚರಂ ೩೫೧
(ಸೂಕ್ತಿಸುಧಾರ್ಣವಂ ೩-೨೩೧)

---

[೧]ಯವ್ವನಕಘ್ರ್ಯ(ಸ) [೨]ಕೊಳ್ವಂ(ಸ) [೩]ಕರಂ(ಸ)

ಹರಿಹರಿ ಹಂದಿ ಜೆಳ್ಳೆರಳೆ ಪೆರ್ಬುಲಿ ಹುಲ್ಲೆ ಲುಲಾಯಸಂಕುಳಂ
ಮರೆ ವೃಕರಾಜಿ ಗಂಡಮೃಗ ಶಾಲ್ಮಲಿಸಂತತಿ ಕೋಕ ಪೆರ್ಮೊಲಂ
ಕರಡಿ ರುರುಪ್ರತಾನಮುಡು ಜೆಳ್ಳಲಿ ಪೆರ್ದರಿಯುಂಗಿ ಪೇರಿಣಿಲ್
ನುರದುಣಿಲೆಂಬಿವಂ ಕೆಡಪಿಯೇಂ ತಿರುಗಿತ್ತೊ ಕಿರಾತಸಂಕುಳಂ ೩೫೨

ಅಡವಿಯೊಳಾರ್ದು ಜೇಡವಡೆ ಬೇಂಟೆಯನಾಡಿ ಶರಪ್ರಘಾತದಿಂ
ಕೆಡಪಿದ ಬಲ್ಮೃಗಂಗಳ ಕಳೇವರಮಂ ಪೊಸಗಿಚ್ಚಿನಿಂದವಂ
ಸುಡು ಕಡಿ ಬಿರ್ಚು ಬಿಲ್ಪಿಡಿದು ಕೊಯ್ ಕೊರೆ ತಿನ್ನುವರ್ಗಿಕ್ಕೆನಿಪ್ಪ ನಾ
ಣ್ನುಡಿಗಳ ನಾಟಕಂ ಬಲಿದುದಾ ವನದೊಳ್ ಶಬರಪ್ರತಾನದೊಳ್ ೩೫೩

ಸಿಂಗದ ಕೇಸರಂ ಪುಲಿಯುಗುರ್ ಚಮರೀಮೃಗವಾಲಮಂ ಮದೇ
ಭಂಗಳ ಮುತ್ತು ಪೀಲಿಯೊರೆ ಪೂತಿಯ ಬೆಕ್ಕುಳಿಯ್ಯಮುಳ್ ವರಾ
ಹಂಗಳ ದಾಡೆ ಕತ್ತುರಿಯ ಹುಲ್ಲೆಗಳಿಂ ಮೊದಲಾದನಂತ ಸಾ
ರಂಗಳ ಭಾರದಿಂ ನಡೆದು ಬಂದನದೊಬ್ಬ ಪುಳಿಂದನಾಯಕಂ ೩೫೪

ಪರಿ ಜೆಂಬತ್ತೆಯುದ್ದ ನಾಯಂ ಬಿಡು ನಡೆಯಿಸು ದೀಹಂಗಳಂ ಪಾಶವಂ ವಾ
ಗುರೆಯಂ ಬೀಸಾಂಕೆಗೊಳ್ಳಾರ್ದೆಸು ಪೊಣರ್ದಿಱಿ ಕೊಲ್ಲೆಂಬ ಘೋರಸ್ವನಂ ಪೊ
ಣ್ಮಿರೆ ವನ್ಯಪ್ರಾಣಿಗಳ್ಗಂತಕನ ಪಡೆಯೆ ಧಾಳಿಟ್ಟವೋಲ್ ಬೇಡರಿರ್ದರ್
[1]ತರುಶಾಖಾಳೀವನಾಂತಸ್ತಿಮಿರಮೆ[1] ಶಬರವ್ರಾತಮಾಯ್ತೆಂಬಗುರ್ವಿಂ ೩೫೫
(ಜಗನ್ನಾಥವಿಜಯಂ ೧೬–೧೯; ಸೂಕ್ತಿಸುಧಾರ್ಣವಂ ೩–೧೧೨)

ಪಾಶದ ನೇಣ್ಗಳಂ ಪೊಸೆವ ಜಾಲಮನೊಪ್ಪಿರೆ ಮಾಟ್ಪ ಕಲ್ಲಿಯಂ
ಕಾಸಿದ ಕಂಬಿಯಂ ಸಮೆವ ಮಾರ್ಗಣಮಂ ಗಱಿಗಟ್ಟುತಿರ್ಪ ಬಿ
ಲ್ಗೀಸುವ ಬಾಣಮಂ ತಿರುಪಿ ತಿರ್ದುವ ಮಾರ್ತಿರುವಂ ತೊಡರ್ಚಿ ನೋ
ಟ್ಪ ಸಹಜಕ್ರಿಯಾವನ ವನೇಚರರಿಂ ಬಗೆಗೊಂಡುದಾವಗಂ ೩೫೬
(ಜಗನ್ನಾಥವಿಜಯಂ ೧೬–೧೬; ಸೂಕ್ತಿಸುಧಾರ್ಣವಂ ೩–೧೯೯)

ಬೇಂಟೆಯ ನಾಯ್ಗಳಂ ಪೊರೆವ ಪೆರ್ವಲೆಯಂ ಸಮೆಕಟ್ಟುತಿರ್ಪ ಬ
ಲ್ಸುಂಟಿಗೆಗೋಲ್ಗಳಂ ಬಸಿನ ದೀಹಮನೋವುವ ನೇರ್ಪುವೆತ್ತ ಕೈ
ದೋಂಟಿಯನೊಪ್ಪೆಕಟ್ಟುವ ಶರಂ ಪದನಾರಿಗೆ ಬಿಲ್ಲನಾರಿಯಂ
ತಾಂಟಿಸಿ ನೋಟ್ಪ ಜೀವಸದೊಳಿರ್ದುದು ಪಳ್ಳಿಯ ಬಿಲ್ಲಸಂಕುಳಂ ೩೫೭

---

[1]ಪರುಷಾಕಾರರ್ ವನಾಂತಸ್ತಬರಮೆ(ಸ)

ಪೊಸಪೊದೆಗಟ್ಟುವಂಬುಗಳ ಕುಪ್ಪಿಯನಾವರಿಪಾರ್ದ್ರಜಾಲಮುಂ
ಪಸರಿಪ ಸೆಂಡುಗೋಲ ಪಿಡಿಗಟ್ಟುವ ಪೀಲಿಗಳಿಂ ತರಂಗಮುಂ
ಪೊಸಯಿಪ ಚಿತ್ರಗಣ್ಣಿವಲೆಯುಂ ಸಮಕಟ್ಟುವ ೧ಕಿ೧ಟ್ಟುಗೂಟಮುಂ
ಬಸಿವ ಪುಳಿಂದಸಂಕುಳದ ಪೆರ್ಗಣದಿಂದೆಸೆದತ್ತು ಪಕ್ಕಣಂ ೩೫೮

(ಚಂದ್ರಪ್ರಭಪುರಾಣಂ ೫–೫೪; ಸೂಕ್ತಿಸುಧಾರ್ಣವಂ ೩–೨೦೦)

ಕರಿದಂತಂಗಳನಾಂತು ಪಿಲಿಯೊರೆಯುಂ ತಟಿಕ್ಕ್ಯಸಿ ಗಂಧೇಭಬಂ
ಧುರಮುಕ್ತಾಫಳಭಾರಮುಂ ತಳೆದು ಮಾಂಸವ್ರಾತಮುಂ ಪೊತ್ತು ಕೇ
ಸರಿ ಚರ್ಮವ್ರಜಮುಂ ತೆರಳ್ಚಿ ಚಮರೀವಾಲಂಗಳಂ ತಾಳ್ದು ಬಂ
ದರನೇಕರ್ ಬಟಿಸಂದು ಕಾಡೊಡೆಯನಂ ಕಾಂತಾರದೊಳ್ ಲುಬ್ಧಕರ್ ೩೫೯

(ಕಾದಂಬರಿ ಪೂ. ಭಾ.–೧೬೯; ಸೂಕ್ತಿಸುಧಾರ್ಣವಂ ೩–೧೭೦)

ಬಿದಿರುದಿರ್ದಕ್ಕಿ ಪಕ್ಕಿಂಜೊರೆ ಪುಲ್ ಮಯಣಂ ಗುಜಗುಂಜಿ ಜೇನತು
ಪ್ಪದ ಕೊಡನೆಯ್ಯಮುಳ್ ಪುಣುಸೆ ಪಣ್ಣಿಲಿ ಹೂತಿಯಬಿಕ್ಕು ಸೀಳ್ದ ಮು
ತ್ತದ ಪೊಸನಾರ್ ಸೆಣಂಬು ಪಲವುಂ ಮೃಗವಕ್ಕಿಗಳಿಂದಮೊತ್ತಿ ಕ
ಟ್ಟಿದ ಮರಗಂಬಿ ಜೀರ್ಗರೆವಿನಂ ಗದುಕಿಂ ಮಗುಳ್ದರ್ ವನೇಚರರ್ ೩೬೦

(ಸೂಕ್ತಿಸುಧಾರ್ಣವಂ ೩–೧೬೯)

ಘನಮಾಂಸಾಪಣ ವಸ್ತ್ರ ಭೂಷಣ ಮುಸೃಕ್ಸಂ ಕೋಲ್ವಣಂ ಪ್ರೀತಿಗಂ
ಧನಿಬದ್ಧಾಂಗಣವದ್ರಿಭೂಷಣವರಂ ನ್ಮಾನ್ವೇಷಣಂ (?) ಪ್ರಾಣಿಪೀ
ಡನ ಸಂಶೋಷಣಮುಗ್ರಲುಬ್ಧಕಧನುಷ್ಟಂಕಾರಘೋರಸ್ಫುರ
ಧ್ವನಿವಿಸ್ರಂಸಸಮಸ್ತವನ್ಯಮೃಗನೇತ್ರಾರಂಭಃಕಣಂ ಪಕ್ಕಣಂ (?) ೩೬೧

ಬರೆಬರೆ ಕರ್ಣಿಕಾರ ನವಕೇಸರವಿಂಗಳ ಕಕ್ಕೆ ಬಿಕ್ಕೆ ಕ
ಮ್ಮರ ತದಿಕಾಮ್ರ ಬಿಲ್ವನೇಲನಾಲ ಬೀಟಿಲ್ ತಡಸಂಗಳಿಂದೆ ಸೌಂ
ದರವನವೊಪ್ಪುತಿರ್ದುದದರಾಪದದಲ್ಲಿಯದೊಂದು ಮುತ್ತಗಂ
ಪರತರ ಚಂದ್ರಶೇಖರನ ಕಣ್ಗೆ ವಿಲಾಸಮನೀಯೆ ನೋಡಿದಂ ೩೬೨

ಶ್ರೀವರನ ಶಿವನ ಪದ್ಮಜ
ನಾ ವರತನು ನೀಲ ಸಿತ ಸುವರ್ಣಚ್ಛಾಯಂ
ಕಾವಿನ ಕೇಸರದೆಸಳ್ಗಳ
ಲಾವೊಳೆ ತೋರ್ಪಲರನುಳ್ಳ ಮುತ್ತುಗನೆಸೆಗುಂ ೩೬೩

---

೧ ಬೆ(ಸ)

ಒಂದು ಗುಣಮುಳ್ಳೊಡಂ ಮ
ತ್ತೊಂದು ಗುಣಕ್ಕಿಲ್ಲವೆನಿಸದಾ ಪಾಲಾಶಂ
ಕುಂದದ ಪೂವಿಂ ತ್ರಿಗುಣಮ
ದೆಂದೆನಿಪುದು ಕರ್ಪು ಬೆಳ್ಪು ಕೆಂಪಿಂ ತೋರ್ಕುಂ ೩೬೪

ಮದನನ ರತ್ನದುಪ್ಪರಿಗೆಯಾ ರತಿದೇವಿಯ ರಂಗಶಾಲೆ ಮ
ತ್ತದು ಮಲಯಾನಿಲಪ್ರಭುವಿಗೆತ್ತಿದ ಕೆಂಪಿನ ಕೇತನಂ ಕರಂ
ಉದಯದ ಚಂದ್ರಮಂಗೆಸೆವ ವೈಸಿರಿ ನೋಡೆ ವಸಂತರಾಜನ
ಭ್ಯುದಯದ ಶತ್ರು ದಾವಶಿಖಿಯೆಂಬವೊಲೊಪ್ಪಿತು ಪೂತಮುತ್ತುಗಂ ೩೬೫

ನಂದುವ ಕಿಚ್ಚುಮನಸ್ತಮ
ಯಂದೋಱುವ ಚಂದ್ರಸೂರ್ಯರೆಂಬರ ನಂಬದೆ
ಸುಂದರವಿಧಿ ಕೆಂಬೆಳಗಂ
ತಂದಿಟ್ಟವೊಲೆಯ್ದೆ ತೋಱಿತಾ ಪಾಲಾಶಂ ೩೬೬

ತರುಗಳೊಳಗ್ನಿಯಿರ್ಪುದ
ನುರುಪಾಲಾಶಪ್ರಸೂನವೇಂ ಸೂಚಿಪವೋ
ಲಿರುವುವು ಕಿಚ್ಚಿನ ತೆಱದಿಂ
ಧರೆಯೊಳ್ ನಿಜಗುಣವನಾವತರು [1]ತೊರೆಯುವುದೊ[1] ೩೬೭

ನೆಲಕೆಂಧೂಳಿರುಣಪ್ರವಾಹಿನಿಯು ಕೆನ್ನೀರೇಜದಾ ಲೋಹಿತಂ
ಸಲೆವೃಕ್ಷಂಗಳ ಕೆಂದಳಿರ್ ಗಿರಿಯಧಾತುವ್ರಾತಮಾಕಾಶದೊಳ್
ನೆಲೆಗೊಂಡೊಪ್ಪುವ ಕೆಮ್ಮುಗಿಲ್ ಪಡುವ ಮೂಡಣ್ಕೆಂಪು ಬಾಲಾರ್ಕನು
ಜ್ವಳ ಶೋಣಂ ನಿಜಪುಷ್ಪರಕ್ತಮುದಿಸಿತ್ತೆಂದಾ ನಗಂ ರಂಜಿಕುಂ ೩೬೮

ಆಕಾಶಕೇಶನೆಯ್ದು
ತ್ತಾ ಕುಜಕುಸುಮಕ್ಕೆ ಮೋಹಿಸೊಂದಂ ಮುಡಿಯೊಳ್
ಜೋಕೆಯೊಳಿಡೆ ಪೂಗೆಂಪಿಂ
ದಾ ಕೆಂಜೆಡೆಯಾಯ್ತು ಕೇಶಕಕ್ಕೆಂಪೊಳವೇ (?) ೩೬೯

ಮುತ್ತಗದ ಪೂಗೆ ಪರಿಮಳ
ವೆತ್ತಣದೆನಬೇಡ ಬಲ್ಲವರ್ ಭಾವಿಸುಗುಂ
ಸುತ್ತುವ ಗಾಳಿಗೆ ತುಂಬಿಗೆ
ತೆತ್ತು ಬಡಂ ಗಂಧಮಾದುದಿತ್ತುದು ಬಡವೆ (?) ೩೭೦

---

[1] ತೋರುವುದೋ (ಸ)

ತನ್ನ ಮೊದಲ್ಗೆಯ್ದಿ ಪಾಡುವ
ಕಿನ್ನರಗಾನಕ್ಕೆ ಪಲವು ಕವಿಗಳ್ ತಾಳ್ದಂ
ತುನ್ನತ ಕುಸುಮಾವಳಿಗಳ್
ರನ್ನದವೊಲೆಸೆಯೆ ಮುತ್ತುಗಂ ಶೋಭಿಸುಗುಂ ೩೭೧

ಮುತ್ತುಗದ ಪೂವಿನಿಂದಮೆ
ಚಿತ್ತಭವಂ ಜಗವನೆಯ್ದೆ ಗೆಲ್ದುದು ಸತ್ಯಂ
ಹೊತ್ತಿದೆಯು ತಾಗಿ ಬಾಗಿಯೆ
ರಕ್ತಂ ಕಾಣಿಪುದು ಮುತ್ತುಗದ ಪೂವಿನೊಳಂ ೩೭೨

ಪರಮಾಸ್ವಾಹೆಯ ಕಂಡೊಡಾಗಳೆ ನಿಜಪ್ರಾಣೇಶನೆಂದಪ್ಪಳೇ
ಗರುಡಂ ಕಂಡೊಡೆ ಮಾಂಸರಾಶಿಯಿದುವೆಂದಾಕಾಶದಿಂ ಬೀೞನೇ
ಮರುತಂ ಕಂಡೊಡಪೂರ್ವಮಪ್ಪ ಸಖನೆಂದಾರ್ದೆಯ್ದನೇಯೆಂಬುದೊಂ
ದುರು ಶಂಕಾಸ್ಪದಮಾಗಿ ಪೂತಿವಿಡಿದಾ ಪಾಲಾಶ ತಾಂ ತೋಱುಗಂ ೩೭೩

ವಿರಹದ ದೇವಸ್ತ್ರೀಯರ್
ವರಪುಷ್ಪಕದಲ್ಲಿ ಬರುತಲಾ ಮರದಲರಂ
ಸುರರ ಬಾಯ್ಗೆತ್ತು ಚುಂಬಿಸಿ
ಪರಿಮಳಮುಂ ಕೊಂಡು ಬಾಯ ಕೆಂಪಿತ್ತರಹೋ ೩೭೪

ಕರಿ ಪಾಲಾಶದ ಪೂವಂ
ಕರೇಣುವಂ ಕೂರ್ತು ಕೊಯ್ದು ಮುಂದಿರಿಸಿದ ಬಗೆ
ಯರವಲ್ಲ ನಿನ್ನೊಳೆನುತಂ
ಕರದೊಳ್ ಕೆಂಡಂಗಳಾಂತು ಸುರಿವಂತಿರ್ಕುಂ (?) ೩೭೫

ಮುತ್ತುಗದೆಲೆಯೊಳ್ ಮೆಯ್ಯಂ
ತತ್ತರುವಿನ ಪೂವಿನೊಳಗೆ ಮೊಗಮಿರಿಸುತೆ ಗಿಳಿ
ಮೊತ್ತದ ತಾಯ್ ಪಿಡಿಗದ ತಂ
ದಿತ್ತಂದಿಂ ಮೈಪಸುರ್ ಮಸಕು ಮುಖರಾಗಂ (?) ೩೭೬

ಇಳೆಗುದಿರಿರ್ದ ಪೂವಿನಡಿ ಕೀೞ್ಪಸೆಯಾಗಿರಲಾ ತರುವ್ರಜಂ
ತೊಳಗುವ ತನ್ನ ಬಂಧುಕುಳವಾಗಿರೆ ಪಿಂತಣ ಕುಂಜರಾಸನಂ
ಯೆಳೆವರಮಾಗೆ ಸಾರ್ದಲತೆ ಕನ್ನಿಕೆಯಾಗಿರೆ ಚಂದ್ರಗಾವಿಯಂ
ತಳೆದ ವಿವಾಹನಾಯಕನವೋಲ್ ಮೆಱೆದಿರ್ದುದು ಮುತ್ತಗಂ ನಗಂ (?) ೩೭೭

ವನಸಿರಿ ಮುತ್ತಗಶಿಶುಗಂ
ದನುನಯದಿಂ ಪುಲ್ಲೆಗೋಡು ಪುಲಿಯುಗುರ್ಗಳನೊ
ಲ್ದನುರಾಗದಿಂದೆ ಕಟ್ಟಿದ
ಳೆನೆ ನನೆ ಕೆಲವೆಸೆಯುತಿರ್ಪುವಾ ಮುತ್ತುಗದೊಳ್ ೩೭೮

ಎಳೆವೆಱೆಯನೊಂದ ಪೊತ್ತನ
ನಿಱೆಕೈಪಿಡುಂ ಪಲವು ಪೆಱೆಯನಾಂತೀಶನವೋಲ್
ತಿಳಿಗೆ ಪಾಲಾಶಮೆಸೆದುದು
ಚೆಲುವಿಂ ಚೆನ್ನಲರ್ದ ಪೂವಿನೆಸಳ್ಗಳ ಭರದಿಂ ೩೭೯

ಆಕಾಶವೆಂಬ ಗಜಮಂ
ಭೀಕರ ಪಾಲಾಶ ಹರೀಶಸಿಂಹಂ ಪೊಯ್ಯಲ್
ತಾಕಿದ ನಖಹತಿಯಂತಂ
ತಾ ಕುಜಕುಸುಮಾವಳಿ ಮೆಱೆದುವಾರಕ್ತತೆಯಂ ೩೮೦

ವಿರಹಿಗಳ ಮೇಲೆ ಚೈತ್ರಂ
ತೆರಳ್ವುದನಱೆದೊಲ್ದು ಮೊದಲೆ ಶಿಶಿರಂ ಕೆಂಪಿನ
ತಿರದುಮ್ಮಾನಂ ಪೂಸಿದ
ಪರಿಯಾದುವು ಕುಸುಮಮಿಳಿತ ತತ್ಪಾಲಾಶಂ ೩೮೧

ಪೂಗಳ ಚೆಲ್ವಂ ನೋಡಲ್
ಕೋಗಿಲೆ ತುದಿಗೈದಿ ಚಲಿಸದಿರೆ ದುರ್ದೋಷಂ
ತಾಗದಂತೆಯ್ದೆ ಬನಸಿರಿ
ಯಾ ಘನತರುಗಿಟ್ಟ ತಿಲಕದಂತೆಸೆದಿರ್ಕುಂ ೩೮೨

ಎಲೆಯುಲೆಯುತ್ತೆ ಚೆಲ್ವಿನ ಮಹಾಕುಸುಮಂಗಳನಿತ್ತು ಕಣ್ಗೆ ನಿ
ರ್ಮಲವನೆ ತೋಱೆ ರಾಜಶುಕನಾ ಮಱೆಯಂ ನೆಱೆ ಪಾಲಿಸಲ್ಕೆ ತಾಂ
ನೆಲೆವನೆಯಾಗಿ ತತ್ಸುಖವ ಪಕ್ಷಿಗೆ ಕೂಡಿಯೆಕೊಟ್ಟು ತಾಪಸೋ
ಜ್ವಲರ್ಗೆಡೆಯಿತ್ತು ಬಾಳ್ವಿ ಮುತ್ತುಗದೇೞ್ಗೆಯನೇನ ಬಣ್ಣಿಪೆಂ

ಉದಿರ್ದೆಸಳ್ಗಳ್ಲಿ ತೋರ್ಪ ಪನಿನೀರ್ದೊರೆಯಲ್ಲಿ ಕಲಂಕೆ ಬೀೞ್ದು ಕ
ಮ್ಮಿದಗಳನಾಂತು ಪೋದೆಡೆಯೊಳಾರ ಕರಂಗಳೊಳೆಯ್ದಿಸಿಲ್ಲಿ ಮ
ತ್ತೊದವಿದ ದಿವ್ಯಗಂಧಮನೆ ಸೂಸುತೆ ತೂಗಿಯೆ ಮಾಜಲಾರದೆಂ
ಬುದು ನಿಜವಾದ ಮುತ್ತಗಮುದಾಗ್ರುಪಕಾರಮನೀಯುದಾವಗಂ ೩೮೪

ಇಂತುದ್ಯನ್ಮೃಗಸಂಘದಿಂ ವನಚರಸ್ತೋಮಂಗಳಿಂ ಭೂಮಿಜಾ
ನಂತಶ್ರೇಣಿಗಳಿಂದರಣ್ಯಕುಳದಿಂದಂ ತಾಪಸವ್ರಾತದಿಂ
ಸಂತಂ ಸುತ್ತಿದ ಸೂಕ್ಷ್ಮಗೋತ್ರಚಯದಿಂ ಗಂಧರ್ವಸಿದ್ಧಾಮರೌ
ಘಂ ತೀವಿರ್ದ ಮಹಾಗುಹಾವಳಿಗಳಿಂದೊಪ್ಪಿರ್ದುದುದ್ಯನ್ನಗಂ ೩೮೫ *

(ಗಿರಿಜಾಕಲ್ಯಾಣಂ ೧-೧೨)

ಓರಂತೆ ಮೆಚ್ಚಿದಂ ಕೃತಿ
ಸಾರಂ ಗಿರಿವರ್ಣನಕ್ಕೆ ಹೊಯಿಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೩೮೬

ಇದು ಸರಸ್ವತೀ ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವಮಲ್ಲನಿರ್ಮಿತ ಕಾವ್ಯಸಾರ ಮಹಾಪ್ರಬಂಧದೊಳ್
ಗಿರಿವರ್ಣನಂ ತೃತೀಯಾಶ್ವಾಸಂ

———

* ಪ್ರತಿಯಲ್ಲಿ ಇಲ್ಲಿಂದ ಮುಂದೆ ಸುಮಾರು ಇಪ್ಪತ್ತು ಪದ್ಯಗಳಷ್ಟು ಗ್ರಂಥಪಾತವಿದೆ.

# ಪುರವರ್ಣನಂ

ಸೊಗಯಿಪ ದೇಶಮುಜ್ಜ್ವರಿಯ ದೇಶಮನುತ್ತಮದೇಶಮಾರ್ಗೆಯುಂ
ಬಗೆದುದನೀವದೇಶಮತಿಮಂಗಳದೇಶಮನೂನದೇಶಮು
ರ್ವಿಗೆ ಸುಖಮಪ್ಪದೇಶಮುದಿತೋದಿತದೇಶಮಪಾರಪುಣ್ಯಕಾ
ರಿಗಳನುಕೂಲದೇಶಮಮೃತೋದಯದೇಶಮದೆಂತು ಬಣ್ಣಿಪೆಂ ೧

(ಗಿರಿಜಾಕಲ್ಯಾಣಂ ೨-೩)

ಪಲವುಂ ನಾಲಗೆಯುಳ್ಳವಂ ಬಗೆವೊಡೆಂತುಂ ಬಣ್ಣಿಸಲ್ಕಾಜಿನಾ
ನೆಲನಂ ಮಿಕ್ಕಿನ ಮಾನವಂ ಪೊಗಟಿಲೇನಂಬಲ್ಲನೆಂದೆಂಬುದೊಂ
ದುಲಿಯಂ ನೆಟ್ಟನೆ ತಾಳ್ದ ಕನ್ನಡವೆನಿಪ್ಪಾ ನಾಡು ಚೆಲ್ವಾದುದು
ಳ್ಳಲರಿಂ ಪೂತಕೊಳಂಗಳಿಂ ಕೆಱೆಗಳಿಂ ಕಾಲೂರ್ಗಳಿಂ ಕೆಯ್ಗಳಿಂ ೨

(ಕಬ್ಬಿಗರಕಾವ, ಪದ್ಯ ೧೯- ಪುಟ ೫)

ಪಳು ನಾನಾಫಲಭೂಜದಿಂ ನಗಕುಲಂ ನಾನಾಮಣಿಶ್ರೇಣಿಯಿಂ
ದಿಳೆ ನಾನಾವಿಧ ಸತ್ಯದಿಂದುಪವನಂ ನಾನಾರ್ಥಸಂಪತ್ತಿಯಿಂ
ಜೆಳೆ ನಾನಾವಿಧ ಹರ್ಷದಿಂ ಪರಿಜನಂ ನಾನಾವಿಧಶ್ರೀಯಿನ
ಗ್ಗಳಿಸಲ್ಕಗ್ಗಳಿಸಿರ್ಪುದಾ ಜನಪದಂ ನಾನಾಶುಭೈಕಾಸ್ಪದಂ ೩

ಪೊಲನ ಪೊದಟಿಕ್ಕೆಪೆತ್ತ ಸಿರಿಯಂ ಸಲೆ ಬಣ್ಣಿಪನಾವನಾವಗಂ
ನೆಲನಜಿಱದಾಡೆ ಕತ್ತುರಿಯಮಿಗಂ ಕರಿದಾದೆರೆ ಕುಂಕುಮಂ ಪೊದ
ಟ್ದಲೆದುರುಕೇಸರಂಜೊರೆದ ಕೆನ್ನೆಲವನಲ್ಲದೆ ಬೇಱೆ ಮತ್ತೆ ಕೆ
ಸ್ನೆಲನೆರೆಯೆಂಬುದಿಲ್ಲ ಪರಿಭಾವಿಪೊಡಾ ವಿಷಯಾಂತರಾಳದೊಳ್ ೪

ಎನಿಸಿಯಶೋಕಭಾವವನಮುಂ ವನಮುಂ ಜನಮುಂ ಶಿಳೀಮುಖಾ
ಸನಮದನಾನುಭಂಗಿವನಮುಂ ಜನಮುಂ ಸುಮನೋವಿಳಾಸ ನೂ
ತನತಿಲಕೋಪಶೋಭಿವನಮುಂ ಜನಮುಂ ಕಮಲಾಕರಾವಲಂ
ಬನಜನಿತಾರ್ಥಭಾವಮಹಿತಂ ವನಮುಂ ಜನಮುಂ ತದುರ್ವಿಯೊಳ್ ೫

ದಳಿತಾಬ್ಜಪ್ರಸರಂ ಸರಂ ಕುಸುಮನೂಲಾರಾಮನಾರಾಮಮು
ಜ್ವಳರತ್ನಾರ್ಚಿತಲಂಕೃತಂ ಕೃತಕಶೈಲಂ ರಾಜಕೀರಚ್ಛದಾ
ನಿಳ[1]ಲೋಲತ್ಕಣಿಶಾಳಿ ಶಾಳಿ[1] ಜನಚೇತೋನಂದನಂ ನಂದನಂ
ಲಲಿತಶ್ರೀಪರಿರಂಜನಂ ಜನಮೆನಲ್ ಚೆಲ್ವಾದುದುರ್ವೀತಳಂ ೬

(ಜಗನ್ನಾಥವಿಜಯಂ ೨-೨)

ಸುರುಚಿರಶಾಲಿ ಶಾಲಿಯ ವನಂ ವನಮಾ ಶುಕವಾಚಿ ವಾಚಿತೋ
ದ್ಧುರಪಶುಭೂಮಿ ಭೂಮಿಪಜನಾಹಕ ವಾಹಕರಾಜರಾಜಬಂ
ಧುರ ಫಲಭೂಜ ಭೂಜನಿತ ನೀರಜ ನೀರಜವಬ್ಜವಬ್ಜಜಾ
ಕರಕರಣಾಪುರಂ ಸಲೆಬಹಿರ್ವಳೆಯಿಂ ವಳೆಯಿಂ ಧರಿತ್ರಿಯೊಳ್ ೭

ಮಿಸುಪ ಕೊಳಂ ಕೊಳಂಗಳೆಡೆಯೊಳ್ ಬಿರಿವಂಬುಜವಂಬುಜಂಗಳೊಳ್
ಮುಸುಱಿದ ತುಂಬಿ ತುಂಬಿಗಳನೋವದೆ ಸೋವೆಲರುಳ್ಳೆಲರ್ಗೆ ಕಂ
ಪಿಸುವ ಲತಾಗೃಹಂ ನವಲತಾಗೃಹದೊಳ್ ಸುಖಮಿರ್ಪ ಭೋಗಿವಾ
ನಿಸರೆಸದಿರ್ಪರಾವನದೊಳೇವೊಗಟಿಪ್ಪಂ ತದಿಳಾವಿಳಾಸವಂ ೮

(ಧರ್ಮನಾಥಪುರಾಣಂ ೨-೩೯)

ರತಿಲೀಲಾಭವನಂ ವನಂ ಸಕಲಸೌಖ್ಯೋಜ್ಜೀವನಂ ಜೀವನಂ
ಶ್ರುತಿಚಿಂತಾಮತಿಭೋಜ್ಯಭೋಜನಮನಂಗಸ್ತ್ರಾಕುಲಂ ಸಂಕುಲಂ
ನುತಸಸ್ಯಾದಿ ಸಮುದ್ಗತಂ ಧರಣಿ ಲಕ್ಷ್ಮೀಬಂಧುರಂ ಬಂಧುರಂ
ಜಿತ ರಾಜನ್ಯಕಮೆಂದೊಡಾವಿಷಯದೊಳ್ಪಂ ಬಣ್ಣಿಸಲ್ ಬಕ್ಕುಮೇ (?) ೯

ಸತತಂ ಮಾಂಗಲ್ಯದಿಂದಚ್ಯುತ ಸುಖಭರದಿಂ ಸಂತತಂ ಪದ್ಮಪೀಠಾ
ನ್ವಿತದಿಂ ಸೌಂದರ್ಯದಿಂ ಕೋಮಲಮೃದುತರದಿಂ ವಾರ್ಧಿಸಂಭೂತಸೀಮಾ
ಯುತದಿಂ ಸದ್ರಾಕ್ಷದಿವ್ಯಾಮೃತ ಶಶಿಸಹಜಾತತ್ವದಿಂ ಕಾಮಜನ್ಮ
ಸ್ಥಿತಿಯಿಂ ಚೆಲ್ವಾದ ದೇಶಂ ಪರಿಕಿಪೊಡೆ ಮಹಾಲಕ್ಷ್ಮಿಯುಂತೊಪ್ಪಿ ತೋರ್ಕುಂ ೧೦

ಇಲ್ಲ ಮರಾಳಮಿಲ್ಲದ ಕೊಳಂ ಕೊಳಮಿಲ್ಲದ ಪಾಣಿಪಾಡು ಪಾ
ಡಿಲ್ಲದ ತುಂಬಿ ತುಂಬಿಗಳ ಗೊಂದಣಮಿಲ್ಲದ ಪೂವರಲ್ದ ಪೂ
ವಿಲ್ಲದ ಮಲ್ಲಿಕಾಲತೆ ಮಲ್ಲಿಗೆಯಿಲ್ಲದ ಮಾವು ಬಂದ ಮಾ
ವಿಲ್ಲದ ನಂದನಂ ಕುಳಿರ್ವ ನಂದನಮಿಲ್ಲದ ಜಾತಿಜಾಂಗಣಂ ೧೧

(ಅನಂತನಾಥಪುರಾಣಂ ೩-೯)

---

[1] ನೀಲಾಕಳಿತಾಳಿ ಪಾಠ(ಸ)

ಬನಮುಂ ಕೆಯ್ವೊಲಗಾವ ಪಾಮರಿಯರುಂ ಮಾರ್ಗಪ್ರಪಾಪಾಲಿಕಾ
ಜನಮುಂ ಗೋಕುಲನುಂ ಜಲಾಶಯಮುಮಾರೂಢಾಸ್ತ್ರಶಸ್ತ್ರಶ್ರಮಾ
ವನಿಯುಂ ಕೋಂಟೆಯುಮೆತ್ತಿದಂಗಡಿಗಳುಂ ವಾರಾಂಗನಾವಾಟ ದೇ
ವನೃಪೇಂದ್ರಾಲಯವರ್ಗಮುಂ ಪುರವರವ್ಯಾವರ್ಣನಕ್ಕಾಸ್ಪದಂ ೧೨

(ಸೂಕ್ತಿಸುಧಾರ್ಣವಂ ೪-೧)

ಬಳಸಿರ್ದದ್ರಿಯ ಕಲ್ಗಳೆಲ್ಲಮವು ಪೊನ್ನುಂ ರನ್ನಮುಂ ಪೂಗೊಳಂ
ಗಳ ನೀರೆಲ್ಲಮನೇಕಸಿದ್ಧರಸಮುಂ ಪೀಯೂಷಮುಂ ಕೆಯ್ವೊಲಂ
ಗಳ ಸಸ್ಯಾವಳಿಯೆಲ್ಲಮೊಳ್ಗಬಿನೆಯುಂ ಪುಂಡ್ರೇಕ್ಷುವಂ ನಂದನಂ
ಗಳ ಧಾತ್ರೀರುಹಜಾತಮೆಲ್ಲಮಮರೋರ್ವೀಜಾತಮುಂ ಚೂತಮುಂ ೧೩

(ಜಗನ್ನಾಥವಿಜಯಂ ೯–೮೬, ಸೂಕ್ತಿಸುಧಾರ್ಣವಂ ೪-೧೬)

ಬಲ್ಗೊಲೆಯೂಱಿ ನಿಂದು ತಲೆದೂಗೆ ನೆಗೞ್ತೆವೆಯೆತ್ತನೋಡೆ ನೈ
ದಿಲ್ಗೊಳನಚ್ಚತಾವರೆಗೊಳಂ ತಿಳನೀರ್ಗೊಳನಂ ಪುದಿರ್ದುವಾ
ವಲ್ಗೊಳನಲ್ಲಿ ತನ್ನ ಬೆಳಸಂ ಪಸಮಾಡುವಿನಂ ಧರಿತ್ರಿ ನೋ
ಡಲ್ಲಡಿಯಿಟ್ಟು ಕಣ್ ತೆಱೆದುದೆಂದೆನೆ ಸಂತತಮೊಪ್ಪಿತೋಱುಗುಂ ೧೪

ತಣಿವಂ ತಳ್ವರಿಗೀವುದಚ್ಚರಿತ ಗಂಗಾಸಿಂಧು ಸೌಗಂಧಿಕೋ
ತ್ಪಣಗಂಧಂ ವಿಜಯಾರ್ಧರತ್ನಕಟಕಂ ಷಟ್ಖಂಡಭೂಮಂಡಲ
ಪ್ರಣುತೋದಾರ ಚರಿತ್ರಮಾ[೧][ಯ್ತು][೧] ಭರತಕ್ಷೇತ್ರಂ ಮನಂಗೊಂಡು ದ
ಕ್ಷಿಣದೊಳ್ ದಕ್ಷಿಣಬಾಹುದಂಡಮೆನೆ ಜಂಬೂದ್ವೀಪಭೂಪಾಲನಾ ೧೫

ಮುದಮೂರೂರಬಲಾಜನಕ್ಕೆ ಪರಿನೀರೂರೂರ ತೋಂಟಕ್ಕೆ ಸಂ
ಪ್ಮದಮೂರೂರ ಗೃಹಕ್ಕೆ ಪಂಕಜದ ಚೆಲ್ವೂರೂರ ಗುಯ್ಯಲ್ಗೆ ಸ
ಮ್ಮದಮೂರೂರ ಮದಾಳಿಗಂಚೆಗಳ ಪೆಂಪೂರೂರ ಷಂಡಕ್ಕೆ ಪಾ
ಲೊದವೂರೂರ ದನಕ್ಕತರ್ಕ್ಯಮದಱಿಂ ರಯ್ಯಂ ತದುರ್ವೀತಳಂ ೧೬

(ಕಾವ್ಯಾವಲೋಕನಂ ೨೮೯, ಸೂಕ್ತಿಸುಧಾರ್ಣವಂ ೪-೨೭)

ಒದವಿದ ದೇಶಮುನ್ನತಿಯನೇ[೨]ವೊಗೞ್ವೆಂ ಮದ[೨]ಮತ್ತಹಸ್ತಿ ಪು
ಟ್ಟಿದ ಮಲೆ ಮುತ್ತಪುಟ್ಟಿದ ಬಿದಿರ್ ಮಣಿಪುಟ್ಟಿದ ಬೆಟ್ಟು ಕೌಂಗುಪು
ಟ್ಟಿದ ಪೊಲಸಂಚಿ ಪುಟ್ಟಿದ ಕೊಳಂ ನದಿ ಪುಟ್ಟಿದೊಸಱ್ ನಮೇರು ಪು
ಟ್ಟಿದ ಪುರನಂದನಂ ಜಸಗುಪುಟ್ಟಿದ ಭೂತಳಮಿಲ್ಲ ದೇಶದೊಳ್ ೧೭

(ಸೂಕ್ತಿಸುಧಾರ್ಣವಂ ೪–೭)

---

[೧] ದ (ಸ) [೨] ಪೆಸರ್ಗೊಂಡಪೆಂ(ಸ)

ಮಾಮರನಲ್ಲದಿಲ್ಲ ತಸಿಗಂಪಿನ ಮಲ್ಲಿಗೆಯಲ್ಲದಿಲ್ಲ ಪೊಂ
ದಾಮರೆಯಲ್ಲದಿಲ್ಲ ಪೊಣರ್ವಕ್ಕಿಗಳಿಂಚರಮಲ್ಲದಿಲ್ಲ ಗೀ
ತಾಮೃತಮಲ್ಲದಿಲ್ಲ ಕಡುಮುದ್ದಿನ[1] ಚೆಲ್ವಿನ[2] ಪೆಂಡಿರಲ್ಲದಿ
ಲ್ಲಾ ಮಹಿ ಭೋಗಭೂಮಿಯೊ ಮನೋಭವರಾಜನ ಜನ್ಮಭೂಮಿಯೋ ೧೮

(ಸೂಕ್ತಿಸುಧಾರ್ಣವಂ ೪-೯)

ಪಿಕಕೋಳಾಹಳಮಿಲ್ಲದಿಲ್ಲ ಪೆಱವುಂ ಕೋಳಾಹಳಂ ನಾಗಚಂ
ಪಕ ಗಂಧೋದ್ಗಮಮಲ್ಲದಿಲ್ಲ ಪೆಱವುಂ ಗಂಧೋದ್ಗಮಂ ಭೃಂಗಗಾ
ಯಕ ಗೀತಸ್ವನಮಲ್ಲದಿಲ್ಲ ಪೆಱವುಂ ಗೀತಸ್ವನಂ ರಾಜಕೀ
ರಕ ವಾಕ್ಪಾಟನಮಲ್ಲದಿಲ್ಲ ಪೆಱವುಂ ವಾಕ್ಪಾಟವಂ[2] ನಾಡಿನೊಳ್[2] ೧೯

(ಶಾಂತಿಪುರಾಣಂ ೩-೩; ಸೂಕ್ತಿಸುಧಾರ್ಣವಂ ೪-೩೧)

ಬನಮೇ ಕೀರಾಳಿ ಪುಂಸ್ಕೋಕಿಲಮಧುರರವೋದ್ದಾಮಕೋಳಾಹಳಂ ಕಾ
ನನಮೇ ಗಂಧೇಭದಾನಪ್ಲವಪರಿಮಳಚಂಚನ್ನದೀವಾಃಪ್ರವೃದ್ಧಂ
ಜನಮೇ ಭೋಗೋಪಭೋಗಾಸ್ಪದಸಮುಚಿತಲಕ್ಷ್ಮೀವಿಳಾಸಾಶ್ರಯಂ ತಾ
ನೆನೆ ಮತ್ತೇನೆಂಬುದಂಗೋದ್ಭವ ನರಪತಿಗಾ ಪೂರ್ಣಸಪ್ತಾಂಗಮಂಗಂ ೨೦

(ಸೂಕ್ತಿಸುಧಾರ್ಣವಂ ೪-೧೦)

ಒದವಿದ ಮುಟ್ಟು ತೀವಿದ ಕಳಂ ಬೆಳೆ ತೀವಿದ ಗದ್ದೆ ಕೌಂಗು ತೀ
ವಿದ ಬನವಂಜೆ ತೀವಿದ ಕೊಳಂ ವಿವಿಧಾಂಬುಜಷಂಡಮೆಯ್ದೆ ತೀ
ವಿದ ಕೆಱೆ ಹಟ್ಟಿ ತೀವಿದ ಹಯಂ ಮನೆ ತೀವಿದ ಮಕ್ಕಳೋಳಿ ಪಿಂ
ಗದ ಸಿರಿ ತೀವಿದಂಗಡಿಗಳೆಲ್ಲಿಯುಮಲ್ಲಿಯ ಪಳ್ಳಿಪಳ್ಳಿಯೊಳ್ ೨೧

(ಸೂಕ್ತಿಸುಧಾರ್ಣವಂ ೪-೧೭)

ಜನಪತಿಯಿರ್ಪ ಪೆರ್ಗುಱುಪಿನಿಂದಿವು ಬೀಡಿವು ನಾಡೆಯೂರ್ಗಳೆಂ
ದನುವಿಪರಲ್ಲದಂತಱಿಯಬಾರದು ಭೇದಿಸಿ ಬೇಱೆವೇಱೆ ಸೊಂ
ಪಿನ ಸಿರಿ ಬೇಱೆವೇಱೆ ಮಣಿಮಾಡದ ತಿಂತಿಣಿ ಬೇಱೆವೇಱೆ ನಂ
ದನತತಿ ಬೇಱೆವೇಱೆ ಪರಿಖಾವಳಿ ತೋರಣವಪ್ರಗೋಪುರಂ ೨೨

(ಅನಂತನಾಥಪುರಾಣಂ ೧೧-೧೦; ಸೂಕ್ತಿಸುಧಾರ್ಣವಂ ೪-೩೦)

---

[1] ಬಿದ್ದಿನ(ಸ) [2] ಸುತ್ತಲುಂ(ಸೂ)

ಸಿರಿ ನೆಲೆಗೊಂಡುದಲ್ಲಿ ಮದನಂ ಮನೆಗಟ್ಟಿದನಲ್ಲಿ ಸೌಖ್ಯಮಂ
ಕುರಿಸಿ ಮಡಲ್ತುದಲ್ಲಿ ಋತುಗಳ್ ನೆಲೆಗೊಂಡುವು ತನ್ಮೊಳಲ್ಲಿ ಜಾಣರ್
ಪರವಶಗೆಯ್ದುದಲ್ಲಿ ಬಹುವಿದ್ಯಗುಣಂ ಪಣಗೊಂಡುದಲ್ಲಿ ನಾ
ಡರಸನಪೆನ್ನದಾ ವಿಷಯಮಂ ಪೇಱ್ತೆಂದೊಡೆ ದೋಷಮಾಗದೇ ೨೩
(ಸೂಕ್ತಿಸುಧಾರ್ಣವಂ ೪–೨೬)

ಬಲಿರಾಜ್ಯಂ ಸತತಂ ಪ್ರಜಾಪ್ರತತಿಗೆಲ್ಲಂ ಯವ್ವನಶ್ರೀಭರಂ
ಸಲೆ ಕಾಂತಾತತಿಗೆಲ್ಲಮೂರ್ಜಿತವಸಂತಂ ಸಂತತಂ ನಂದನಾ
ವಲಿಗೆಲ್ಲಂ ರತಿಕೇಳಿರಾಗವನಿಶಂ ಸ್ತ್ರೀಪುಂಪ್ರಜಕ್ಕೆಲ್ಲಮು
ಜ್ವಲ ಚಂದ್ರಾತಪವೊರ್ಣಿಯುಂ ರಜನಿಜಾತಕ್ಕೆಲ್ಲಮಾ ದೇಶದೊಳ್ ೨೪
(ಜಗನ್ನಾಥವಿಜಯಂ ೨–೩)

ದ್ವಾರಿಯ ನಂಪನಂಬಿಡಿದು ಪೂತಕೊಳಂ ಕೊಳದೊಳ್ ಬೞಿಲ್ಕೆಯಂ
ಬಾರಿಸಲೆಂದು ನಿಂದ ಪಥಿಕರ್ ಪಥಿಕಾನಯ[1]ಪ್ರಭಾಮೃತಾ[2]
ಸಾರವೆ ತೀವಿ ಬರ್ಪ ಪರಿಕಾಲ್ ಪರಿಕಾಲ್ಗಳ ನೀರನುಣ್ಬ ಕೇ
ದಾರವನಂ ಮನಂಗೊಳಿಸುತಿರ್ಪುವು ಭೂವನಿತಾವಿಭೂತಿಯೊಲ್ ೨೫
(ಜಗನ್ನಾಥವಿಜಯಂ ೨–೪; ಸೂಕ್ತಿಸುಧಾರ್ಣವಂ ೪–೧೩)

ಇವು ಪಳ್ಳಿಗಳಿವು ಪಟ್ಟಣ
ಮಿವು ಕೆಱೆಗಳವೆಱಗಿ ನಿಂದ ಮುಗಿಲೋಳಿಗಳಿಂ
ತಿವು ಕಾಡಿವು ಪೆಸರ್ವಡೆದೊ
ಪ್ಪುವ ಬನವೆಂದಱಿದು ಪೇೞ್ವೊಡರಿದಾ ನಾಡೊಳ್ ೨೬
ಕಬ್ಬಿಗರ ಕಾವಂ–೨೦–)

ಮಲ್ಲಿಗೆಯಲ್ಲದೆ ಸಂಪಗೆಯ
ಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂಡೆಂಗ
ಲ್ಲದೆ ಮಾವಲ್ಲದೆ ಕೌಂಗ
ಲ್ಲದೆ ಗಿಡುಮರಗಳೆಂಬುದಿಲ್ಲಾ ನಾಡೊಳ್ ೨೭
(ಕಬ್ಬಿಗರಕಾವಂ–೨೧–)

ಅಡರ್ದೇಱಿ ಕೋಡಗಂಗಳ್
ಕಡುಪಿಂದೀಡಾಡೆ ಫಳಿಲನೊಡದೆಳೆಗಾಯಿಂ
ಪೆಡೆವಿಡದಿೞಿವೆಳನೀರಿಂ
ಮಡುಗೊಂಡೊಸಱುತ್ತಮಿರ್ಪವಲ್ಲಿಯ ಬನಮುಂ ೨೮
(ಕಬ್ಬಿಗರ ಕಾವಂ–೨೨)

---

[1]ಪೆಸಗೈವುದಾರ್ಗಮಿರ(ಸೂ) [2]ನಾಮೃತರಸಾ(ಸ)

ಮೇದರೊಳಲ್ಲದೆ ವಂಶ
ಚ್ಛೇದಂ ಗಾರುಡದೊಳಲ್ಲದಹಿತತ್ವಂ ಹೊಂ
ಗೇದಗೆಯ ಹೊದಱಿನೊಳಲ್ಲದೆ
ಯಾ ದುರ್ಧರ ಕಂಟಕತ್ವಮಿಲ್ಲಾ ನಾಡೊಳ್ ೨೯
(ಸೂಕ್ತಿಸುಧಾರ್ಣವಂ ೪-೧೯)

ಮೇಳಿಸಿ ಕಾಯ್ದಿಱಿವುದು ವನ
ಪಾಲರೊಳಾಱಡಿಯ ಮುಸಕದೆಸಕಂ ಸುಮನೋ
ಮಾಲೆಗಳೊಳ್ ಕದ್ದೋಡುವ
ಶೀಲಂ ಶೌಂಡಿಕರೊಳಲ್ಲದಿಲ್ಲಾ ನಾಡೊಳ್ ೩೦
(ಸೂಕ್ತಿಸುಧಾರ್ಣವಂ ೪-೧೮)

ತಿವಿದು ಸೆರೆವಿಡಿದು ಕಟ್ಟುವ
ತವೆ ಕೊಲ್ವ ಪರಾರ್ಥತತಿಗೆ ಬಯಸುವ ದುಷ್ಟ
ವ್ಯವಹೃತಿ ನೇತ್ರದೊಳಲ್ಲದೆ
ಸವನಿಸದಾ ವಿಷಯಜನ ಸಮಾಜದೊಳೇದುಂ ೩೧
(ಕಬ್ಬಿಗರಕಾವಂ-೩೧-)

ಸತತಂ ಮಾರ್ಗೋಲ್ಲಂಘನ
ಗತಿ ಹಯದೊಳವಗ್ರಹಂ ಮದೇಭಸಮೂಹಾ
ಕೃತಿಯೊಳ್ ಸಮರಾಗಮುನ
ಸ್ಥಿತಿ ನಲ್ಲರೊಳಲ್ಲದಿಲ್ಲ ಪೆಱತಾ ನಾಡೊಳ್ ೩೨
(ಚಂದ್ರಪ್ರಭಪುರಾಣಂ ೧-೮೬; ಸೂಕ್ತಿಸುಧಾರ್ಣವಂ ೪-೨೪)

ಬವರಂ ಜಡಸಂಗಂ ರಾ
ಜವಿರೋಧಂ ತಪನವಿಕೃತಿ ಗುಣಗೋಪನಮೆಂ
ಬಿವು ಮಾನಿಸರೊಳ್ ದೊರೆಕೊ
ಳ್ಳವು ಪದ್ಮದೊಳಪ್ಪೊಡಕ್ಕುಮಂತಾ ನಾಡೊಳ್ ೩೩
(ಸೂಕ್ತಿಸುಧಾರ್ಣವಂ ೪-೨೨)

ಅಳಿಯಾಸೆ ಪುಷ್ಪವಾಟೀ
ಸ್ಥಳದೊಳ್ ರಾಜಭಯಮುಬ್ಜಸಂಕುಳದೊಳ್ ಸಂ
ಚಳತೆ ಪವಮಾನನೊಳ್ ವಿ
ಹ್ವಳತೆ ರಥಾಂಗದೊಳಗಲ್ಲದಿಲ್ಲಾ ನಾಡೊಳ್ ೩೪
(ಗಿರಿಜಾಕಲ್ಯಾಣಂ ೨-೫)

ಸಕಳಂಕತೆ ಚಂದ್ರಮನೊಳ್
ವಿಕಳಧ್ವನಿ ಪಕ್ಷಿಯಲ್ಲಿ ಭಂಗಂ ನದಿಯೊಳ್
ಸಕುಟಿಲತೆ ಲತೆಗಳೊಳ್[1]ಭುವ
ನ[1]ಕಂಟಕಂ ಬಿಸದೊಳಲ್ಲದಿಲ್ಲಾ ನಾಡೊಳ್ ೩೫

(ಗಿರಿಜಾಕಲ್ಯಾಣಂ ೨-೬)

ಕರವಿಚ್ಛೇದಂ ಗ್ರಾಮನಿ
ಕರಂಗಳೊಳ್ ಬಂಧನಂ ಕುಸುಮಮಾಲಿಕೆಯೊಳ್
ಪರವಶಮೆಂಬುದು ಯೋಗೀಂ
ದ್ರರೊಳಲ್ಲದೆ ಭೂಮಿಪತಿಯ ದೇಶದೊಳುಂಟೇ ೩೬

(ಗಿರಿಜಾಕಲ್ಯಾಣಂ ೨-೭)

ಆಮಯಮಕ್ಷರಕುಲದೊಳ್
ಸಾಮಂ ವೇದಂಗಳಲ್ಲಿ ಭೀಮಂ ಚಿತ್ರ
ಸ್ತೋಮದೊಳಂ ಕ್ಷಾಮಂ ಲಲ
ನಾಮಧ್ಯದೊಳ[2]ಲ್ಲದಿಲ್ಲ ಮತ್ತಾ ನಾಡೊಳ್[2] ೩೭

(ಗಿರಿಜಾಕಲ್ಯಾಣಂ ೨-೮)

ಶ್ರುತದೊಳ್ ಚಿಂತೆ ಮದೇಭದೊಳ್ ಸೆಱೆ ನಿರೋಧಂ ಪಂಜರಾನೀಕದೊಳ್
ಯತಿಭಂಗಂ ಕೃತಿಯೊಳ್ ಭಯಂ ನಟನದೊಳ್ ನಿಷ್ಕಿಂಚಿನತ್ವಂ ಮಹಾ
ವ್ರತದೊಳ್ ಶೂನ್ಯ[3]ವಿಳಾಸಿನೀ ನಡುವಿನೊಳ್ ಬಲ್‌ನಿಗ್ರಹಸ್ಥಾನಮುಂ
ಗೀತ[3]ವಾದಂಗಳೊಳಲ್ಲದಿಲ್ಲ ಮಱೆದುಂ ಮತ್ತೆಲ್ಲಿಯುಂ ದೇಶದೊಳ್ ೩೮

(ಸೂಕ್ತಿಸುಧಾರ್ಣವಂ ೮-೨೧)

ಪಿಡಿ ಕಟ್ಟಾಱಡಿ ತೊಂಡು ಬಂಡು ಮೊಱೆ ಪೊಕ್ಕೇಱಾಯಿಲಂ ಚೌರ್ಯಮೆಂ
ಬೊಡವೆಂದುಂ ತಲೆದೋಱವೇಱವೆಳಗುಂ ಭೂಭೂಮಿಪರ್ ಧರ್ಮದಿಂ
ನಡೆವರ್ ನಚ್ಚಿನ ಜೈನಧರ್ಮಮೆ ವಲಂ ಧರ್ಮಂದಲೆಂದಾಗಳಿ
ನ್ನೆಡೆವಾತೇಂ ಕಡೆಗಾವನಾಡೊ ಪಡೆದತ್ತಾ ದೇಶದಾದೇಶಮುಂ ೩೯

(ಧರ್ಮನಾಥಪುರಾಣಂ ೨-೪೬)

---

[1]ಭಾವುಕ(ಸ) [2]ದಾಸುದೇಶದೊಳುಂಟೆ(ಅ) [3]ಗೃಹಂ ದುರೋದರೊಳಾದಂ ವಿಗ್ರಹ ಸ್ಥಾನಮನ್ವಿತವಾ(ಸೂ)

ನೆರೆದ ಬನಂಗಳೊಳ್ ಪಿಕದ ಬಗ್ಗಣೆ ಪರ್ವಿದ ಪೂಗೊಳಂಗಳೊಳ್
ತಿರುಗುವ ತೊಂಡುದುಂಬಿಗಳ ಪಲ್ಮೊಱಿಪಂ ಪೊಲಗೆಯ್ಗಳೊಳ್ ಪೊದ
ಱ್ದಿರಗಿಳಿಯಬ್ಬರಂ ತಗುಳೆ ಬಂದ ವಿಯೋಗಿಜನಕ್ಕೆ ನಾಡೆ ನಿಂ
ದಿರನೆಲೆಯಿಲ್ಲದಿರ್ದದಱ ಮೇಲೆ ಸುಖಕ್ಕೆಡೆಯಾದುದಾ ನೆಲಂ ೪೦

(ಧರ್ಮನಾಥಪುರಾಣಂ ೨-೪೭)

ಬಿತ್ತಿದೆಡೆ ಬೆಳೆವುದಗ್ಗದ
ಬಿತ್ತಮನದು ಪಿರಿದು ಪಿರಿದು ಮಾತೇನಾರುಂ
ಬಿತ್ತದೆ ಪೊನ್ನಂ ಬೆಳೆವುದು
ಮತ್ತಿನ ನೆಲನದಱ ಪೊಲದ ನೆಲದೊರೆಗೆಣೆಯೇ ೪೧

ನೆಲ್ಲುಂ ಕೌಂಗುಂ ಮಾವುಂ
ಮಲ್ಲಿಗೆಯುಂ ಬೆಳೆವುವಲ್ಲಿ ಕಬ್ಬಿನ ರಸದಿಂ
ದೆಲ್ಲಾ ಕಾಲಮುಮೆಂದೊಡ
ದಲ್ಲದೆ ಮತ್ತಾವುದಿಂಬು ಕಣ್ಗಂ ಮನಕಂ ೪೨

(ಸೂಕ್ತಿಸುಧಾರ್ಣವಂ ೪-೫೧)

ಕಲ್ಲೆಲ್ಲಂ ಪರುಷಂ ತರು
ವೆಲ್ಲಂ ಕಲ್ಪತರು ಗುಲ್ಮವೆಲ್ಲವೌಷಧಿ ಗೋ
ವೆಲ್ಲಂ ಸುರಭಿಕುಲಂ ಮಡು
ವೆಲ್ಲಂ ಸಿದ್ಧರಸಮೆನಿಕುಮಂತಾ ನಾಡೊಳ್ ೪೩

(ಗಿರಿಜಾಕಲ್ಯಾಣಂ ೩-೧೦)

ಪುಲ್ಲಿನ ಲಂಬಳಂ ಮರದ ಕೋಲ್ ನರೆಗಂಬಳಿ ಬಾರಟೊಪ್ಪಿ ಜಿಂ
ಗಿಲ್ಲಿಯ ಬುತ್ತಿಯುಂ ಬಿದಿರ ಕೋನಿ ಕಳಾವದ ತೋಳಬಂದಿ ಪೆ
ರ್ಬಿಲ್ಲುಶರಂಗಳುಂ ಪಿಕಿಲಿದುಪ್ಪಳಮಾಲಿಕೆ ಕಾಲಕೆರ್ಪು ನಿಂ
ದಲ್ಲಿಯುದಲ್ಲಿ ಗೊಲ್ಲವಡೆಗಳ್ ತುಱುಗಾಯ್ಪರರಣ್ಯಮಧ್ಯದೊಳ್ ೪೪

ಕೇತಕಿಪತ್ರದೋಲೆ ಗುಱುಗುಂಜಿಯ ದಂಡೆ ಕಳಾಪಗಂಕಣಂ
ಸಯ್ತೆಳವಲ್ಲಿ ಬಂದಿ ಪುಳುವಚ್ಚೆಯ ಬೊಟ್ಟು ವನಾಂತಪುಷ್ಪದಿಂ
ಜೋತ ತುಱುಂಬು ಗಾಜುಮಣಿಮಾಲಿಕೆಯಾ ಘೃತಗಂಧದಿಂದೆ ಕಂ
ಡಾತಗಳಾಣ್ಮನಂ ಬಿಡದೆ ಸೋಲಿಪ ಗೊಲ್ಲತಿಯರ್ಕಳೊಪ್ಪುಗುಂ ೪೫

ಎಡಪಿ ಪರಲ್ಗಳಂ ದೆಸೆಗೆ ಬೆರ್ಚುತೆ ಗೋವನಗಾಳಿಗೆಯ್ದೆ ಪಿಂ
ಡಡಸುತೆ ಕಂಠಮಂ ನೆಗಪಿ ನೋಡುತೆ ಪಕ್ಕಮನಗ್ರವಾಲದಿಂ
ತೊಡೆವುತೆ ಕರ್ಣಮಂ ತೆಱೆದು ತಿತ್ತಿರಿ[1]ಗಾಳೆಯ[1]ನಾಲಿಸುತ್ತೆ ಪಿಂ
ಡೊಡೆಯದೆ ಕೂಡಿ ಬರ್ಪ ಪಲವಾಕಳಿನೊಪ್ಪುವುವಲ್ಲಿ ಪಳ್ಳಿಗಳ್ ೪೬

(ಲೀಲಾವತಿ ೫-೧೦೩, ಸೂಕ್ತಿಸುಧಾರ್ಣವಂ ೪-೫೯)

ಕಿಱುಕಿಱಿದೆ ಮೆಟ್ಟೆ ಕೆಚ್ಚಲ
ನಿಱುಕುತೆ ಕುಡಿವಾಲಮೆತ್ತಿ ಕೊಣಕಿಟ್ಟೆಡೆಯೊಳ್
ಕಱುಗಳನೆ ನೆನೆದು ಮನೆಗಳೆ
ಗುಱಿಯಾಗಿರೆ ಬರ್ಪ ಪಲವು ಧೇನುಗಳೆಸೆಗುಂ ೪೭

(ಸೂಕ್ತಿಸುಧಾರ್ಣವಂ ೪-೬೩)

ತ್ವರಿತಂ ಗೋಪಂ ಸಕೋಪಂ ಪೆಱಗೆ ಪರಿಯೆ ಹೂಂಕಾರದಿಂದಳ್ಳೆ ಬೀಗು
ತ್ತಿರೆ ಬಾಯಿಂ ಬೀಟೆಯೊಳ್ ಸಾಲಿಡೆ ನೊರೆ ಮಿಗೆ ತಾಂ ನಾಂದ ಪುಲ್ ಮಿಳ್ಳಿಗೊಂಡು
ಬ್ಬರಿಸುತ್ತಂ [2]ತನ್ನ[2] ವತ್ಸಂ ಕರೆಯೆ[2] ನಿಕಟದೊಳ್ ಕೇಳ್ದು ಘೊಳ್‌ಘೊಳ್ಳೆನುತ್ತಂ
ಪರಿತಂದ[3]ತ್ಯೂರ್ಧ್ವ[3]ದಿಂದಂ ಬಿರಿವಿಡೆ ಮೊಲೆವಾಲಂದು ಧೇನುಪ್ರತಾನಂ ೪೮

(ಲೀಲಾವತಿ ೫-೧೦೧)

ಬರಲಾಱದೆ ಪೆರ್ಗೆಚ್ಚಲ
ಭರದಿಂದಂ ಪೆಱಗು ಕುಸಿಯೆ ಪೊಱತಿಯುಂ ಕಳೆವಂ
ತಿರೆ ತೊಱೆದ ಶೋರವೊಲೆಯಂ
ಬಿರಿವಿಡುತಂ ಬಂದವಲ್ಲಿ ಕೆಲವು ಪಯಂಗಳ್ ೪೯

(ಲೀಲಾವತಿ ೫-೧೦೪; ಸೂಕ್ತಿಸುಧಾರ್ಣವಂ ೪-೬೦)

ಅಡೆಯುಂ ಕೋಡೆತ್ತುತುಂ ಮಾರ್ದನಿಗೆ[4]ಮಸಗು[4]ತುಂ ದರ್ಪದಿಂ [5]ಛಾಯೆ[5]ಯೊಳ್ ಕೋ
ಡಿಡುತುಂ ಮುಂ ಕಾದಿ ಪುಣ್ಕೆತ್ತಿಣಲ್ಗೆಱಗೆ ನೊಣಂ ಶೀರ್ಣಶೃಂಗಾಗ್ರದಿಂ ಮಾ
ರ್ಪೊಡೆಯುತ್ತುಂ ಪೊಕ್ಕು ಪಿಂಡಂ ಕಲಕಿ ಕೆಲೆಯುತುಂ ಬೆರ್ಚಿ ಬಲ್ಗೂಳಿಗಳ್ ಜಿಂ
ಗೊಡೆ ಗಂ[6]ಡಂ[6] ಸೂಸುತಂ ಬಂದುದು ಮದವಿಳಸತ್ಪಿಂಗಳಾಕ್ಷಂ ಮಹೋಕ್ಷಂ ೫೦

(ನೇಮಿನಾಥಪುರಾಣಂ ೮-೧೮, ಲೀಲಾವತಿ ೫-೧೦೨; ಸೂಕ್ತಿಸುಧಾರ್ಣವಂ ೪-೫೬)

---

[1]ಗೋಪಿಯ(ಸ) [2]ತನ್ನ ಕಣ್ಗಳ್ ಕರೆಯೆ(ಅ) [3]ವು ಬೇಗ(ಸ) [4]ಮುಳಿವು(ಸ)
[5]ಜಾಡಿ(ಸ) [6]ಧಂ(ಸ)

ಪೊಸವಸೆಯ ಸೊವಡನಾಘ್ರಾ
ಣಿಸಿ ಮಣಿಕದ ಮಿಡುಕುಗಚ್ಚೆಯೊಳ್ ಮೊಗವೆತ್ತು
ತ್ತೆಸೆದುದು ವೃಷಮುಮರರನೇ
ಡಿಸುವವೋಲೇನುಂಟೆ ನಿಮಗಮೀ ಸುಖಮೆನುತಂ ೫೩

(ಲೀಲಾವತಿ ೫-೧೦೮, ಸೂಕ್ತಿಸುಧಾರ್ಣವಂ ೪-೫೮)

ಕಿಱುಗೊಂಬು ನಳಿದಬೆ[1]ನ್ ತ
ತ್ತಿ[1]ಱುಕಿದ [2]ತೋರ್ಗೆ[2]ಚ್ಚಲಲೆವ ಬಾಲಂ ತೆಳುವ್ವೈ
ಮೆಱೆಯೆ ಬಿಳಿದಾಗಿ ಮಾಣದೆ
ಕಱೆವೆಮ್ಮೆಯ ಪಿಂಡು ಪಳ್ಳಿಪಳ್ಳಿಯೊಳೆಸೆಗುಂ ೫೨

(ಸೂಕ್ತಿಸುಧಾರ್ಣವಂ ೪-೬೧)

ಇನಿಸಂ ಪೊಕ್ಕೊರು ಮಿಕ್ಕೋಸರಿಸಿದ ಚರಣಂ ಶೋಭೆಯಂ ಬೀಱೆ ಕುಂಭ
ಕ್ಕೆ ನಿತಂಬಂ[3]ಸುತ್ತಿ[3] ನೇಣಂ ಪುಗುವ ತೆಗೆವ ಕೈಗಳ್ ಬೆಡಂಗಾಗೆ ತುಂಗ
ಸ್ತನಯುಗ್ಮಂ ತೂಗೆ [4]ಸೀ[4]ತ್ಕಾರದಿನುಸಿರ್ವಿಡುತ್ತುಂ [5]ಲೋಳೆ[5]ವಾಯುರ್ಚೆಯೊರ್ವಳ್
ತೊನೆಯುತ್ತುಂ ಪಾಡಿ ಪಾಲಂ ಪೊಸೆದಳಸದಳಂ ಪೊಣ್ಮೆ ಘರ್ಮಾಂಬುಜಾಲಂ ೫೩

(ಲೀಲಾವತಿ ೫-೧೨೮; ಸೂಕ್ತಿಸುಧಾರ್ಣವಂ ೪-೬೬)

ಮಡದಿ ನಿತಂಬಮಂ ಮಡದಿನಾಂತು ಕೆಲಕ್ಕೊಱಗಿರ್ದ ಕೆಂದಲಂ
ತೊಡೆಯೊಳಿಱುಂಕಿ ಬಳ್ಳಿನಡು ಬೆನ್ನೊಳಪೊಕ್ಕಿರೆ ದುಗ್ಧಧಾರೆಯೊ
ಳ್ಗಡಣದಿನಾಡೆ ಕಣ್ಬೆಳಗು ಬಲ್ಬೆಡಗಂ ಬಿಗಿದೊತ್ತೆ ಕೈಗಳಿಂ
ಪಿಡಿದು ಕುಚಾಗ್ರದೊಳ್ ತಱುಗೆ ಪಾಲ್ವನಿಗಳ್ ಕಱೆ[6]ದಳ್ ಘಟೋಧ್ನಿಯಂ[6] ೫೪

(ಲೀಲಾವತಿ ೫-೬೫; ಸೂಕ್ತಿಸುಧಾರ್ಣವಂ ೪-೬೫)

ಅಲಘುಕುಚದ್ವಯಂ ಕಚಭರಂ ತೊಲೆಯುತ್ತಿರೆ ಹಸ್ತಕಂಕಣಂ
ಘಲಕೆನೆ ಮುತ್ತಿನೋಲೆ ಕದಪಂ ಪೊಡೆಯುತ್ತಿರೆ ಸುತ್ತಿನೇಣು ಕೋ
ಮಲಕರಪಲ್ಲವಂಗಳೊಳ್ ನಿಡುವಡಂಗಿರೆ ಬಟ್ಟಸೋಟದಿಂ
ಮಲಹರಿ ದೇಸಿ ತೋಡಿಯನೆ ಪಾಡಿ ಮೊಸರ್ ಕಡೆದರ್ ಲತಾಂಗಿಯರ್ ೫೫

---

[1]ನ್ನಂ ಕಿ(ಸೂ) [2]ತೊಡೆಗೆ(ಸೂ) [3]ಮಾಂತೂ(ಸ) ಸುತ್ತು(ಸೂ) [4]ವ್ವೊ(ಸೂ)
[5]ತೊಂಡೆ(ಸ) [6]ದರ್ ಪುರಂಧ್ರಿಯರ್(ಸ)

ಕಡೆವಾಕೆಯ ಮುತ್ತಿನ ಕ
ನ್ನಡಿಯಂತಿರೆ ತೊಳೆಪ ಘರ್ಮಜಳಬಿಂದುಗಳಿಂ
ಬಿಡುಮೊಗವೆಸೆದಿರ್ದುದು ಪಾ
ಲ್ಗಡಲೊಳ್ ತಾಂ ಪುಟ್ಟಿದಮೃತಕರಬಿಂಬದವೋಲ್ ೫೬

(ಲೀಲಾವತಿ ೫-೧೩೦)

ಇರಿದೊಂದೆರಡಿರಿಯಂ ತೀ
ವಿರೆ ಕಂದಲ್ ತನ್ನ ಬಿಳಿಯ ಕಣ್ಗಳ ಬೆಳಗಿಂ
ನೊರೆವಾಲಿಂ ತೀವಿತೆಗೆ
ತ್ತಿರದೆಟ್ಟಿವಳಾತ್ಮಪತಿಯನೇಂ ನಗಿಸಿದಳೋ ೫೭

(ಲೀಲಾವತಿ ೫-೧೨೪)

ಒಲೆದು ತಳಂಗಳಿಂ ಘಳಿಲೆನಲ್ ಮುಡುಪಿಂ ಪೊಡೆದೆತ್ತಿ ಮೇಲುದಂ
ನೊಲೆಮುಗುಳ್ಗಳ್ ತೆಱಂಬೊಳೆಯೆ ಬಾಯ್ದೆಱೆಯೊಳ್ ರಸನಾಗ್ರಪಲ್ಲವಂ
ಮಲೆದು ಮರಲ್ದು ಸುತ್ತಿ ಸುಱುಕಲ್ದನಿ ಪೆರ್ಚಿರೆ ಬೆಚ್ಚದಾಗಿ ಸೂ
ೞುಲಿಗೆಲೆಯುತ್ತಮಿರ್ಪ ತರುಣೀಜನಮಂ ನೃಪನೊಲ್ದು ನೋಡಿದಂ ೫೮

(ಲೀಲಾವತಿ ೫-೧೧೭)

ಅತಿಘನತಕ್ರಾಟಪರಾ
ಹತಿಗಂ ಮೊಸರೊಡೆಯದೆಂದು ಬೇಸತ್ತವೊಲು
ನ್ನತಕುಚೆ ಬೞಲ್ದು ಸುಯ್ಯು
ತ್ತತಿರಭಸದಿನೊರ್ವಳೊಲೆದು ಮೊಸರಂ ಪೊಸೆದಳ್ ೫೯

(ಲೀಲಾವತಿ ೫-೧೩೧)

ಕಱುವಂ ಬಿಡು ಮೊಲೆದೊಳೆ ನೀ
ರೆಱೆ ಕಂದಲನೊಱಸಿತೊಳೆ ತಗುಳ್ದೊದೆವಾವಂ
[1]ತುಱುಸು ತಳೆಯಿಕ್ಕು[1]ತಡೆಯದೆ
ಮಃಱುವಂ ಸುರಿಯೆಂಬರಲ್ಲಿ ಗೋಪಿಜನಂಗಳ್ ೬೦

(ಲೀಲಾವತಿ ೫-೧೨೧; ಸೂಕ್ತಿಸುಧಾರ್ಣವಂ ೪-೬೪)

---

[1] ಸುರಿಸಳ್ಳಿಗಿಕ್ಕು(ಸ)

ವನಲಕ್ಷ್ಮೀಶ್ವಸಿತಂಬೊಲಾಡುವೆಲರಿಂದಂ ಕಂಪಿಸುತ್ತಿರ್ಪ ಕ
ರ್ಬಿನ ಕೋಲ್ಗಳ್ ಬಿಡದೊಂದನೊಂದೊರಸೆ[1]ಪರ್ವಾಘಾತದಿಂ[1]ದುರ್ಬಿ ಭೋ
ರೆನೆ ಪಾಯ್ತುರ್ಪ ರಸಪ್ರವಾಹಚಯಮಾವಾಳಂಗಳಂ ತೀವುತಿ
ರ್ಪಿನಮಿರ್ದತ್ತಮೃತಾಕರಾವನಿಯವೋಲ್ ಪುಂಡ್ರೇಕ್ಷುವಾಟೀಕುಲಂ ೬೧

(ಜಗನ್ನಾಥವಿಜಯಂ ೨-೯)

ಕೊರಿತುವೆನಿಪೆಲೆಗಳಬಾ
ಯ್ಧಾರೆಗಳೆಲರಲೆಯೆ ತಾಗಿ ಪಱಿದುಗುವ [2]ಫಲಾ
ಸಾರವನೆ ಕೊಂಡು ಬೆಳೆದುಂ[2]
ನೀರೂಟಕ್ಕೆಳಸವಲ್ಲಿ ಕರ್ಬಿನ ತೋಂಟಂ ೬೨

(ಚಂದ್ರಪ್ರಭಪುರಾಣಂ ೧-೯೬, ಸೂಕ್ತಿಸುಧಾರ್ಣವಂ ೪-೪೯)

ಮಿಡಿಯಲೊಡನೊಸರ್ವುಪೆಂಬೀ
ನುಡಿಗಳನಂತಿರ್ಕೆ ಬೆರಲೆರಲ್ ತಾಗಿದೊಡಿಂ
ಗಡಲ ಮಡುವೆನಿಸಿ ರಸಮಂ
ಬಿಡುವುವು ಪುಂಡ್ರೇಕ್ಷು[3]ದಂಡ[3]ವಿತತಿಗಳೆತ್ತಂ ೬೩

(ಸೂಕ್ತಿಸುಧಾರ್ಣವಂ ೪-೫೦)

ಪಲ್ಲವಿಸಿ ಪರ್ವಪರ್ವದೊ
ಳೆಲ್ಲೊದವಿಸಿದಮೃತರಸಮನೆಱಿದಿಂದುವೆ ಪೂ
ಣ್ದಲ್ಲಿಯೆ ಮದನಗೆ ಪೊಸಪದ
ವಿಲ್ಲೆನೆ ಬೆಳೆದಂತೆ ಕರ್ವುದೋಂಟಗಳೆಸಗುಂ ೬೪

ಉತ್ತಮ ಮಧ್ಯ ಕನಿಷ್ಠಮ
ವೆತ್ತಿದ ಗುಣಗಳನೆ ತಾಳ್ದು ರಸದಿಂದಡಿನಡು
ವೆತ್ತ ತುದಿಯುಳ್ಳ ಕೋಲ್ಗಳ
ವೊತ್ತಗಳಿಂ ಕರ್ವುದೋಂಟಗಳ್ ಪೊಱದಿರ್ಕುಂ ೬೫

ಸ್ಫುರಿಯಿಸುವೆಮ್ಮಪುರ್ವ ನೆಱಗುಂ ಜನಮುಂ ಗೆಲಲಿನ್ನದೇಕೆ ನೀನ್
ಪರಿವೆಯಪೆಂದು ಮುತ್ತುಲದ ಕರ್ವಿನಬಿಲ್ಲನನಂಗನಿಂ ಗೆಲಲ್
ಬರಿಸಿದರೀ ಪುರಾಂಗನೆಯರೆಂಬ ಕನಲ್ಕೆಯಿನಿಕ್ಷುಕೋಟಿ ಪ
ಲ್ಮೊರೆವವೊಲಿಕ್ಷುಯಂತ್ರನಿನದಂ ಮೊಱೆವಬ್ಬರವಾದುದೆತ್ತಲುಂ ೬೬

---

[1] ಪೂರ್ವಾಪೂರ್ವದಿಂ(ಸ) [2] ರಸಾಸಾರಮೆ ಕೊಳಗೊಂಡೆಂದುಂ(ಅ) [3] ವಾಟ(ಸ)

ಭೂತಳವರ್ತಿಯಪ್ಪ ವಿಷಯಾಳಿ ವಿಚಾರಿಪೊಡಾವಗಂ ನದೀ
ಮಾತೃಕ ದೇವಮಾತೃಕಮೆ ತದ್ವಿಷಯಂ ನವನಾಳಿಕೇರವಾ
ರ್ಮಾತೃಕಮಿಂದುಕಾಂತಜಳಮಾತೃಕಮಿಕ್ಷುರಸಾರ್ದ್ರನಾಳಿಕಾ
ಮಾತೃಕಮಾಮ್ರಕಮ್ರಪರಿಪಕ್ವಫಲೋತ್ಕರಸಾರಮಾತೃಕಂ ೬೭

(ಚಂದ್ರಪ್ರಭಪುರಾಣಂ ೧-೯೦, ಸೂಕ್ತಿಸುಧಾರ್ಣವಂ ೪-೪೮)

ಎಳನೀರ ಚಂದ್ರಕಾಂತೋ
ಪಳದ ಪೊನಲ್ ಪೊರೆಯೆ ಸಂತತಂ ಪೆರ್ಚೆಳಸುಂ
ಮುಱಿತಯಂ ಪೊಳೆಯಂ ಪಾರದೆ
ಬೆಳೆವುವು ಪೊಲನಾವಮಾತೃಕಮೆಂದಱಿಯಿಂ ೬೮

ಘನರಸ ಜೀವನಾಮೃತಮೆನಿಸಿರ್ಪ ಪೆಸರ್ ಮಿಗಿಲೆನ್ನ ನೀರ್ಗೆ ವಿ
ಕ್ಕಿನ್ನಜಲಕಂ ವಿಷಾಹ್ವಯಮೆನುತ್ತೆ ತರಂಗಕರಂಗಳಿಂದಲಂ
ತನುನಯಕೂಲ ಡಂಗುರವ ಪೊಯ್ವುತ ಬಲ್ಸುಱಿ ಬಾಯೊಳಾಗ ಭೋ
ರೆನುತಿಹ ಫೇನಹಾಸನೊರೆಸೂಸುತಲೊಪ್ಪುವುವಾ ತಟಾಕಗಳ್ ೬೯

ಪರಿಣಯಮಾಸದಂತೆ ತೆರೆಯಿಂ ದ್ವಿಜಮಂತಣದಂತೆ ಘೋಷದಿಂ
ಸುರನದಿಯಂತೆ ಮುಕ್ಕುಳಿಕೆಯಿಂ ಗಗನಾಂಗಣದಂತೆ ಮೀನ್ಗಳಿಂ
ವರಕದಳಾಗ್ರದಂತೆ ಸುಱಿಯಿಂ ಬಿಲುಬತ್ತಳಿಯಂತೆಯಂಬುವಿಂ
ಹರಿಸಖನಂತೆ ಶೀಘ್ರಗತಿಯಿಂದಲಿ ಪೆರ್ದೊಱೆಗಳ್ ವಿರಾಜಿಕುಂ ೭೦

ನೀರವು ತೆಂಗಿನಾಗರದ ನೀರ್ ಕುಮುದಂಗಳನಂಗನೆಚ್ಚೊಡಾ
ಪೈರಿಯ ತಾಗಿ ಬಂದ ಕುಮುದಂ ಸಲೆ ಪಾಮರಿ ದೇವಪಾಮರೀ
ನಾರವಿನರ್ಮಕೀರನೀರದಾ ರತಿಪಂಜರಕಿಕ್ಕಿದೋವುವಾ (?)
ಕೀರನೆನಲ್ಕೆ ಶಾಳಿವನಮೆಲ್ಲಡೆ ಮೋಹಿಪುದೊಂದು ಚೋದ್ಯಮೋ ೭೧

ತಿಳಿನೀರಂ ತೆಂಗು ರಂಭಾಪ್ರತತಿಗೆಱೆತಯೆ ರಂಭಾಳಿಗಳ್ ತಮ್ಮ ಸಾರಾ
ವಳಿಯಂ ಪುಂಡ್ರೇಕ್ಷುವಾಟಾಳಿಗೆ ಸುರಿಯೆ ಪುಂಡ್ರೇಕ್ಷುಗಳ್ ತಮ್ಮ ತೋಯಾ
ವಳಿಯಂ ಕಳ್ಮಕ್ಕೆ ಪೂರಂ ಬಿರಿಯುಸೆ ಕಳಮ ಶ್ರೇಣಿಗಳ್ ತಮ್ಮ ಪಾಲಂ
ಗಿಳಿವಿಂಡಿಂಗೀಯೆ ಚೆಲ್ವಾದುದು ಪುರಬಹಿರುದ್ಯಾನಕೇದಾರಜಾಲಂ ೭೨

ಒದವಿದ ಶಾಳಿಗರ್ಭೆಗಳ ಪಾಳಿ ಕುಕಿಲ್ವ ಪಿಕಾಳಿ ತಂಪುವೀ
ಱಿದ ಸುಱಿಗಾಳಿ ಪಾಮರಿಯರೋಳಿ ವಿಟೇವಿಟಕೇಳಿ ಪೂಗಳಿಂ
ಕೆದಱಿದ ಧೂಳಿ ಪಾಡುವ ಮದಾಳಿ ಶುಕಂಗಳ ಜಾಳಿಯೆಂಬಿನಂ
ಮದನನ ಧಾಳಿಯಂತೆಸೆಯುತಿರ್ಪುದು ಪಾಂಥಜನಂ ನಿರಂತರಂ ೭೩

ಆ ವಿಷಯದೊಳೊಪ್ಪುವ ಕಳ
ಮಾವಳಿ ನಳನಳಿಸಿ ಬೆಳೆದು ಪಸುರೇಱಿ ಲಸತ್
ಭೂವನಿತೆಗೆ ಧಾತ್ರಂ ಪರಿ
ಭಾವಿಸಿ ಪೊದಿಯಿಸಿದ ಹರಿತಪಟದಂತಿರ್ಕುಂ ೭೪

(ಗಿರಿಜಾಕಲ್ಯಾಣಂ ೨-೧೨)

ಒಂದಂ ಕಾಲಿಂದೊದೆದೊಡ
ನೊಂದಂ ಕಾಲ್ವಿಡಿದು ಬರ್ದುಕುಗೆಂಬರನಿಱಿಸುತೆ
ಸಿಂಧುವಿನ ಕಾಲ್ಗಳೆರಡಂ
ಬಂದಂದಿಂ ಪಿಡಿದು ಬರ್ದುಕುವುವು ಶಾಲಿವನಂ ೭೫

ಕಾವಂ ಕಬ್ಬಿನ ಬಿಲ್ಲಂ
ಜೇವೊಡೆದುರುಲೀಲೆಯಿಂದೆ ಸೆಳೆಯಲ್ ಜುಮ್ಮೆನು
ತವೊಸರ್ದ ರಸದೆ ಕಳೆಮೆಗ
ಳಾವಗಮುರೆ ಬೆಳೆವುವಲ್ಲಿ ನಳನಳಿಸುತ್ತಂ ೭೬

ಕುಂದಣಮಂ ಕುಂಕುಮದೊಳ್
ಗೊಂದಿಸಿ ಪನಿನೀರ್ಗಳೊಳಗೆ ಮೊಳೆಯಾಗಿಸುತಂ
ತಂದು ವಸಂತಂ ಬಿತ್ತಿಸ
ಲಂದಿಂ ಕೆಂಪಾಗಿ ಗಂಧಶಾಲಿಗಳೆಸೆಗುಂ ೭೭

ಕುಂದದ ಚಂದ್ರಲೇಖೆ ನಸುಗುಂದದೆ ರಂಜಿಪ ಪುಷ್ಪಮಾಲೆ
ಕಂದೊಂದದ ಸೋಮಶಾಲೆ ತವಿಲಾಗದ ಕೆಂಗೊನೆವಾಟಿ ಸರ್ವನಾಂ
ದ್ಯಂದಮೆನಿಪ್ಪ ಕೇಸರಿ ನಿರಂತರಮೊಪ್ಪುವ ಧರ್ಮಗುತ್ತಿಯೆಂ
ಬಂದದನೇಕ ನಾಮವೆಸೆಗುಂ ಮೃದುಬಂಧುರ ಗಂಧಶಾಲಿಗಳ್ ೭೮

ದೆಸೆಗೆ ಕವಲ್ತು ದಂಟೊಡೆದು ನುಣ್ಬಸುರಿಂ ಪೊರೆಯೇಱಿ ಕೊರ್ಬಗು
ರ್ವಿಸೆ ಪೊಡೆದುಂಬಿ ಪಾಲ್ದೆನೆಗಳುರ್ಚೆ ಕರಂ ತಲೆವಾಗಿ ಬಿಣ್ಪಿನಿಂ
ದೆಸೆವುವು ನೀಳ್ದ ತಮ್ಮ ಮೊಗದೊಪ್ಪಮನೊಪ್ಪಿರೆ ನೀರ್ಗಳೊಳ್ ನಿರೀ
ಕ್ಷಿಸುವವೊಲಾವಗಂ ಕಳಿಶಸಂತತಿಗಳ್ ಕಳಮಪ್ರದೇಶದೊಳ್ ೭೯

(ಅಭಿನವದಶಕುಮಾರಚರಿತ್ರೆ ೧೨-೩)

ಕುಡಿಯಂ ಪೊನ್ನನೆ ಬಿತ್ತಿ ಪೊನ್ ಬೆಳೆದೊಡಾ ಪೊಂಗಾಯ್ತು ಕಂಪೆಂಬವೋಲ್
ಕಡುಗೆಂಪುಂ ಕಡುಗಂಪುಮುಗ್ಗಲಿಸೆ ನಾಡೂರೂರ ಸುತ್ತಲ್ ಬೆಡಂ
ಗಿಡಿದಿರ್ಕುಂ ಕೆಱೆಯೇರಿಯುದ್ದದೊಳೊಡಂಬಟ್ಟುದ್ದದಿಂದೆತ್ತಲುಂ
ಕುಡುಗೋಲುರ್ಚದ ಗಂಧಶಾಳಿವನಮುತ್ಕೀರಾಳಿ ಲೀಲಾಸ್ಪದಂ ೮೦

(ಸೂಕ್ತಿಸುಧಾರ್ಣವಂ ೪-೫೨)

ಅರಗಿಳಿವಿಂಡು ಪಚ್ಚೆಲೆಯ ಪಂದರದಂದದವೋಲೊಗೆದೊಪ್ಪೆ ತಟ್ಟೆಯಂ
ತಿರೆ ತನಿಗರ್ಬುಗಳ್ ರತಿಯ ಕಾಮನ ರಮ್ಯವಿವಾಹಗೇಹದೊಳ್
ವಿರಚಿಸಿ ಪಚ್ಚೆಯೊಳ್ ಜಗಲಿಯಂ ಮಧುಶೋಭೆಗೆ ಪೊನ್ನನೀರ್ಗಳಂ
ಪರಿಯಿಸಿದಂತೆ ಕೆಂಪುವಡೆದೇಂ ಪಸುರೋದವೊ ಗಂಧಶಾಲಿಗಳ್ ೮೧

(ಲೀಲಾವತಿ ೬-೧೫೫)

ಸಲೆ ಕಾಲಂ ಪಿಡಿದೆಬ್ಬಿರಲ್ ಭುವನಮೆನ್ನಿಂದಲ್ಲಿಗಾಂ ಮುನ್ನವಾ
ದೊಲವಿಂದಂ ತಲೆಕೊಯ್ಸಿಕೊಂಡೆನೆನುತುಂ ಲಜ್ಜಾಮಹಾಭಾರದಿಂ
ತಲೆವಾಗಿರ್ದನೆ ಪಕ್ವಶಾಳಿಕಣಿಶಾಳೀನಮ್ರಮೊಪ್ಪಿರ್ದದೇಂ
ಗೆಲೆವಂದತ್ತೊ ಸುವರ್ಣವರ್ಣದಿನಿಳಾಶ್ರೀಯುಟ್ಟ ಪೊಂಬಟ್ಟೆಯೋಲ್ ೮೨

(ಜಗನ್ನಾಥವಿಜಯಂ ೨-೫)

ಸೊಂಪಾಗುತ್ತಂಕುರಿಸು
ತ್ತುಂ ಪಸುರೇಱುತ್ತೆ ಕವಲಿಱಿದು ಪೊಡೆಯೊತ್ತು
ತ್ತುಂ ಪಾಲೇಱುತ್ತುಂ ನೆಱೆ
ಸೆಂಪಿಂ ನಳನಳಿಸಿ ಶಾಳಿವನಮೆಸೆದಿರ್ಕುಂ ೮೩

(ಗಿರಿಜಾಕಲ್ಯಾಣಂ ೨-೧೩)

ಉಗುವೆಳನೀರಿಂದಂ ಕದ
ಳಿಗಳಾ ಕದಳಿಗಳ ಪಣ್ಣರಸದಿಂ ಪುಂಡ್ರೇ
ಕ್ಷುಗಳಿಕ್ಷುರಸದಿನಾ ಕಟಿ
ವೆಗಳಾ ಕಟಿವೆಗಳ ಕಣಿಶದಿಂ ಗಿಳಿ ಬಳೆಗುಂ ೮೪

(ಗಿರಿಜಾಕಲ್ಯಾಣಂ ೨-೧೪)

ಕಳಮಕ್ಷೇತ್ರ ಸಮಗ್ರದ
ಬೆಳೆ ಕಾಲವಕಾಲವೆನ್ನದೆಲ್ಲಾ ದಿನದೊಳ್
ಬೆಳೆದು ಫಲಮೀವ ಸುಲಭತೆ
ಗಿಳಿಯೊಳ್ ಪ್ರತಿಯಿಲ್ಲವೇನನಭಿವರ್ಣಿಸುವೆಂ ೮೫

ಮಡುಗಳೊಳೆ ನೀಳ್ದ ನೀರ್ಗ
ನ್ನಡಿಯೊಳ್ ನಗೆಮೊಗದ ಚೆಲ್ವನವಲೋಕಿಪವೋ
ಲಿಡಿದಡರಿಗೊಂಡ ಫಲದಿಂ
ಕಡುವಾಗಿರುತಿರ್ದುವಲ್ಲಿ ಶಾಲಿವನಂಗಳ್ ೮೬

(ಲೀಲಾವತಿ ೫-೫೧)

ಸಂಪಗೆವಣ್ಣ ಮುಗುಟಿಡ್ಡಳೆ
ಗೆಂಪೊಂದಿದ ಪಸುರನಾಳ್ದ ತುದಿನಡುಮೊದಲಿಂ
ಬಿಂಪುಳ್ಳೆಸಟ್ಗಿಳ ಮೆಯ್ಯಿಂ
ಕಂಪಂ ಕೆದಱುರ್ದವಲ್ಲಿ ಕಳವೆಯ ತೆನೆಗಳ್ ೮೭

ತೆನೆಯನೆಱಂಕೆಯಿಂದೆ ಮಿಗೆ ಬಂಧಕೆ ತೆಕ್ಕಿಸಿ ಜೋಲ್ದು ನೋಡಿ ಭೋ
ರೆನಲೊಲೆದಾಡುವಾ ಧ್ವನಿಗೆ ಪೊಂಪುಱಯೋಗಿ ಸುಗಂಧಸೌಖ್ಯದಿಂ
ತನಿಸೊಗಸುರ್ಕೆ ಪಾಲಸವಿಯಾಸುಖಮಂ ಮಱಸಲ್ಕೆ ಭಾಪುರೆ
ಘನಶುಕಮೊಂದು ನೆಲ್ದೆನೆಯನಾಹೆನೆ ಮೆಲ್ದುದು ಮುದ್ದುಮುಟ್ಟಿರಲ್ ೮೮

ವಿಕಸಿತಮಾದ ಕಾಂಚನ ಸರೋರುಹಷಂಡದ ಪರ್ವುಮಂ ತದಂ
ತಿಕದ ಸುವರ್ಣವರ್ಣಕಳಿಶಾಳಿಯಶಾಳಿಯದೊಂದು ಪರ್ವುಮಂ
ಶುಕತತಿ ನೋಡಿ ನೋಡಿ ನೆಱೆ ನಿಟ್ಟಿಸಲಾಱದೆ ಮಂಜುಳಾರವಂ
ಪ್ರಕಟಿಸೆ ಪರ್ಬುಗೊಂಡು ಸುೞದಾಡುವುವಲ್ಲಿಯ ಕೆಯ್ವೊಲಂಗಳೊಳ್ ೮೯

(ಜಗನ್ನಾಥವಿಜಯಂ ೨-೮)

ಅರಗಿಳಿವಿಂಡು ಪಾಯೆ ನಸುಸೋಂಕಿದೆಱಂಕೆಯ ಗಾಳಿಗೊಂದನೊಂ
ದೊರಸಿ ನಿರಂತರಂ ಸುರಿವ ನೆಲ್ದೆನೆ ಪಾಲ್ಗಳ ಧಾರೆಗೊಡ್ಡಿ ಚಂ
ಚುರ ನಿಜಚಂಚುವಿಂ ಸವಿದು ಸಂತಸದಿಂದೆರಡಳ್ಕೆ ಹಿಗ್ಗಿ ಮಂ
ದರಗತಿಯಿಂ ಮರಲ್ದು ಸುೞದಾಡುಗುಮಲ್ಲಿ ಮರಾಳಮಂಡಲಂ ೯೦

(ಧರ್ಮನಾಥಪುರಾಣಂ ೨-೩೧)

ಗಿಳಿ ತರುವಿನ ಶಾಖೆಯೊಳಂ
ಕುಳಿತಿರ್ದುಂ ಮಱುಯನಟ್ಟೆ ನೆಲ್ದೆನೆ ತರಲದು
ಘಳಿಲನೆಱಗಲ್ಕೆ ನೆಲ್ಲುದಿ
ರೆಳೆಯೊಳ್ ಕೈಗೆಲಸವೆಂದು ನೆರೆವವೆ ಧರೆಯೊಳ್ ೯೧

ಇಂಗದಿರನನಾ ಪಗಲೊಳ್
ಕಂಗಳ ನೆಱತನುಚ್ಚಿ ನೆನೆವನೆಯ್ದಿಲ್ಲೂಗಿಡದೆ
ಪೊಂಗಿಯೆ ನೆಲ್ಲೊಲನಾಂತುವು
ಸಂಗದೆ ಗುಣದೋಷಮೊಂದದೇ ಧಾರಿಣಿಯೊಳ್ ೯೨

ಸಸಿಯೊಡಗೂಡದಲ್ಲುದಯನುಪ್ಪಿನಮುತ್ಪಲಬಾಲೆಯೆದ್ದು ಮೇಣ್
ಪಸಿದೆಲೆವಟ್ಟಲಿಟ್ಟುಕೊಳುತಂ ಘನಗರ್ದೆಯೆನಿಪ್ಪ ತಾಯುನಿ
ಕ್ಕು ಸುಕಳಮಾನ್ನಮೆಂದಱತವೋಲ್ ನಿಜಗರ್ಭಮಧುಪ್ರತಾನಮಂ
ಮಿಸುಗತಲಿರ್ದವಾ ಮಡುಗಳೊಳ್ ಮಿಗೆ ನೈದಿಲಹಂತಿ ಸಂತತಂ ೯೩

ತೆನೆಗೊನೆಯೊಪ್ಪೆ ಕಾವು ಕಡುಚಂದಮನೀಯೆ ತೊಡಂಕಿ ನಿಂದೆಸಳ್
ಮಿಸುಗೆ ಬುಡಂ ಬೆಡಂಗುಗುಡೆ ಕೀಲಿಸಿ ಬೇಱತಡೆ ನೀರ್ಗಳುಂಡ ತ
ಣ್ಪಿನೆ ಸೊಗಸಾಗಿ ತೋರ್ಪ ಕಳಮಾವಳಿಯುತ್ಪಲದೇಟಿಗ್ಗಯಿಂ
ಗಿಣಿಗಳ ಪಕ್ಕದಿಂ ಹರಿತಮಪ್ಪುವು ನೋಟಿಪ್ಪಡೆ ಕಾಯ್ಗೆ ಸಾರ್ದಹೆಂ ೯೪

[1]ಆವಲೆಲರಾಯ್ವ[1] ಕಟಿಮೆಯ
ಪೂವೊಡೆಯಂ ಮುಡಿಯೆ ಬಿಗಿದು ಬಿರಿಯಿಸಿ ನೆಯ್ದಿ
ಲ್ಲೂವುಡಿಯನೆತ್ತಿ ಜೈತಲೆ
ದೀವುವ ಪಾಮರಿ[2]ಯರೆಸೆದರಾ ಗರ್ದೆಯೊಳಂ[2] ೯೫
(ಲೀಲಾವತಿ ೫-೭೭)

ನಲವಿಂದಂ ಸೂಡಿ ಪೊಂಜಾದಿಯ ನಿಡುನನೆಯಂ ವೇಣಿಯೊಳ್ ಸೆಕ್ಕಿ ಕೊಯ್ದಾ
ವಲ ಪೂವಂ ಗಂಧವಿಟ್ಟುತ್ಪಲದಳದಸಿಯೆಸಳಂ ಕಂಜಕಿಂಜಲ್ಕಮಂ ಜೈ
ತಲೆಯೊಳ್ ಪೊಯ್ದೊಟ್ಟ ನಲ್ಬಂದುಗೆಯ ದಳಮುಮಂ ತೊಟ್ಟು ಕೈಗೆಯ್ದು ಕರ್ಣೋ
ತ್ಪಲಮಂ ಕೈಗೆಯ್ದಿಪ್ಪನಂ ಕಣ್ಮಲರ್ಗಳೆಸೆವಿನಂ ಪಾಮರೀನಾರಿಯಿರ್ದಳ್ ೯೬
(ಲೀಲಾವತಿ ೫-೭೯)

ಎಡಗಯ್ಯೊಳೊತ್ತಿ ಮುಡಿಯಂ
ಪಿಡಿ ತೆಕ್ಕನೆ ತೀವಿ ಕೊಯ್ದು ಜಾತಿಯ ನನೆಯಂ
ಮುಡಿಯುತ್ತೆ ನಿರೀಕ್ಷಿಸಿದಳ್
ಕಡೆಗಣ್ಣಿಂ ಕಳಮುಗೋವಿ ಭೂಪಾಲಕನಂ ೯೭
(ಲೀಲಾವತಿ ೫-೮೧)

---

[1]ಆವಲಲಕಾಳ(ಸ) [2]ರಿಯುರಂ ಮಹೀಪತಿ ಕಂಡಂ(ಅ)

ಬಳೆಗಳ್ ಫಲ್ಕೆನೆ ತೋಳ್ಗಳಂ ನೆಗಪಿ ಕಾಲಂ ಸ್ವಸ್ತಿಕಂಗೊಟ್ಟು ಕೆಂ
ದಳಮಂ ಮೆಲ್ಲನೆ ಪೊಯ್ದು ಪಾಯ್ವ ಗಿಳಿಯಂ ಸೋವಾಕೆ ತುಂಗಸ್ತನಂ
ಗಳುಮಾಲೋಕಿಪವೋಲ್ ಮರಲ್ದೊಗೆಯೆ ತಳ್ತೊಂದೊಂದಱಿೞೊಳ್ ಪಾಯ್ದು ಕ
ಣ್ಣೊಳಮಿಂಚಂ ಮುರಿದಂತಿರೊಪ್ಪೆ ಮುರಿದಾ ಭೂಪಾಲನಂ ನೋಡಿದಳ್ ೯೮

(ಲೀಲಾವತಿ ೫-೮೦)

ಎಯ್ದವೆ ಪಾಸಲುಂ ಪೊದೆಯೆಲುಂ ನಿಮಗೆನ್ಮ ಪೊದಟ್ದು ನೀಳ್ದ ಕ
ನ್ನೆಯ್ದಿಲ ಪೂಗಳೇಕೆಲವೊ ಕೊಯ್ದಪೆ ನೆಯ್ದಿಲನೆಂದು ಪೇೞ್ವವೋಲ್
ನೆಯ್ದಿಲಮಾಲೆಯಿಂ ಕಳನುಗೋಪೆಯರೀಕ್ಷಿಸೆ ಮಾಣ್ದನಂತೆ ಚೆ
ನ್ನಿಯ್ದಿಲನಾಯ್ವುದಂ ಮಱಿದವಂದಿರನೀಕ್ಷಿಸಿದಂ ಕುಮಾರಕಂ ೯೯

(ಲೀಲಾವತಿ, ೫-೮೩)

ಒಱಗಿದ ಕಟಿವೆಯ ಕಂಪಿಂ
ಗೆಱಗುವ ಮಱಿದುಂಬಿ ಸಮರತೋತ್ಕಟರಸದಿಂ
ಪೆಱಿನೊಸಲೊಳಲೆವ ಕುರುಳಂ
ಪಱಿವಱಿದೀಡಾಡುವಂದದಂ ನೀಡುವಿನಂ ೧೦೦

(ಲೀಲಾವತಿ ೫-೮೬)

ಪರತರ ಪಾಮರೀವಧು ತದುತ್ಪಲನುಂ ನೆಱಿ ಕಿಳ್ತು ಕೀರನಂ
ಬರಲಿಡಲಲ್ಲಿ ತೋರ್ಪ ಮಧುಪಂ ಮಿಗೆ ಝೇಂಕರಿಸಲ್ಕೆ ನೆಯ್ದಿಲಿಂ
ಚರದೊಳೆ ಪಾಡುವಾತನೆನುತಂದದನೊಲ್ದುರೆ ಕರ್ಚೆ ಚೋದ್ಯದಿಂ
ಸ್ಮರನೆಡೆಗೆಯ್ದು....ತದನೀಕ್ಷಿಸು ನೀನಿದ ಮುಗ್ಧಮೋಹನಾ(?) ೧೦೧

ತೆನೆಗೊಂಡೆಯ್ದುವ ರಾಜಕೀರನನಹೋ ನೀಲೋತ್ಪಲಂಗೆತ್ತು ಭೋಂ
ಕೆನಲಿಟ್ಟೆಬ್ಬಿಪ ಪಾಮರೀಕುಚಯುಗಂ ತಾಂ ಮೇಲುದಂ ನೂಂಕಲಾ
ಸ್ತನಯುಗ್ಮಕ್ಕೆ ಜಗತ್ತ್ರಗಳ್ ಬೆಲೆಯೆಯೆಂಬಂತೊಪ್ಪಲಾ ಪಾಂಥಲೋ
ಚನಮೇಂ ಪುಣ್ಯಮನಾಂತುದೋ ಸ್ಪರುಶನಸ್ತ್ರೀಸೌಖ್ಯಮೆಂತಿರ್ಪುದೋ ೧೦೨

ವದನಸುಗಂಧನುಂ ಬಯಸಿ ಪಾಯ್ವಳಿಮಾಲೆಯು ಮೇಳನಾದತಾ
ಳದೊಳನುರಾಗನುಂ ಪಡೆದು ಪಾಮರಿ ಪಾಡುವ ಸಯ್ಯನಪ್ಪ ಗೇ
ಯದ ಬಲೆಯೊಳ್ ತೊಡಂಕಿ ಬಿಡದಾಲಿಸ ಪುಲ್ಲೆಯನಲ್ಲಿ ಕಂಡು ಲೆ
ಪ್ಪದ ಮಿಗನೆಂದು ಬಂಪೆಳಪಿ ನೋಡುಗುನುಧ್ವಗಕಾಮಿನೀಜನಂ ೧೦೩

(ಧರ್ಮನಾಥಪುರಾಣಂ ೨-೨೮)

ಪಾಱಿಸಲೆಂದು ಬಂದು ಬಳೆಗಳ್ ಘಳಿಲೆಂಬಿನಮಿಂಪುವೀಱಿ ವ್ಯ
ಡೋಱುವ ತಮ್ಮ ಕೈಸಱಿಗೆ ಬೆಚ್ಚಿ ಶುಕಂ ತೆನೆಗರ್ಚಿ ಬೇಗದಿಂ
ಪಾಱಿ ಮಡಲ್ತು ಮಂಡಳಿಸೆ ಗರ್ದೆಗಳೆರ್ದು ನಭಕ್ಕೆ ಮೊಕ್ಕಳಂ
ಪಾಱಿದವೆಂದು ಪಾಮರಿಯರೀಕ್ಷಿಪರಾರ್ದು ನಭೋವಿಭಾಗಮಂ ೧೦೪

(ಧರ್ಮನಾಥಪುರಾಣಂ ೨–೨೮)

ಪವಣಂ ನೋಡದೆ ನಾಡೆಯುಂ ಸೆಣಸಿ ಮುನ್ನೆಕ್ಕೆಕ್ಕೆಯಿಂ ಪಕ್ಕಿಸೋ
ವ ವರಸ್ತ್ರೀಯರ ಸಯ್ಯನಪ್ಪ ನುಡಿಯಂ ಕೇಳ್ದಾಗಳಂತಾತ್ಮಗ
ರ್ವವನೀಡಾಡಿ ಬಿಗುರ್ತು ತಂಬುಲಕೆ ಬಾಯಾಂಪಂದದಿಂ ಬಂದು ಪಾ
ಯ್ವುವು ಕೀರಾಳಿಗಳಲ್ಲಿ ಪಾಮರವಧೂಬಿಂಬಾಧರಕ್ಕಾವಗಂ ೧೦೫

(ಧರ್ಮನಾಥಪುರಾಣಂ ೨–೨೯)

ಸಮದಗ್ರಾಟೋಪದಿಂ ಗೋಪಿಯರರೆಗಿಳಿಯಂ ಬೆಚ್ಚಿಸಲ್ಕೆಂದು ನಿಂದು
ದ್ಗಮಬಾಣಂ ಛಾಪುಛಾಪೆಂದೆನಲಿಡೆ ಮಿಡಿವಿಲ್ಲಿಂ ತಗುಳ್ದೊಡೆಚ್ಚೊಡುಚ್ಚ
ಕ್ರಮದಿಂ ಪಾಯ್ವಿಂದ್ರನೀಲೋಪಮ ಘಟಿಕೆಗಳೆಂಬಂತಿರಲ್ಕತ್ತಮತ್ತಂ
ಭ್ರಮರಂಗಳ್ ಪಾಱಿ ಕಂಮ್ಮಂಗಳವೆಯ ಮುಡಿಯೊಳ್ ಗಾಡಿವೆತ್ತಾಡುತಿರ್ಕುಂ ೧೦೬

ಪರೆದ ಕುರುಳ್ಗಳಂ ನಿಜ ಕರಾಂಗುಲಿಯಿಂ ತಡವುತ್ತ ಮೇಲುಮೋ
ಸರಿಸೆ ಕುಚಂಗಳಂ ಬಿಗಿದು ಬಿಂಬಫಳಾಧರೆಯರ್ಕಳೈದಿ ಬಂ
ದರಗಿಳಿವಿಂಡನೋವದಿಡುತಂ ಪಥದೊಳ್ ಬರುತಿರ್ಪ ಪಾಂ
ಥರಂ ಸ್ಮರಶರಪಂಜರಕ್ಕೊಳಗುಮಾಡುವರಾ ಕಳಮಪ್ರದೇಶದೊಳ್ ೧೦೭

ತ್ವರಿತಗತಿಪ್ರಚಾರತೆ ಮರಾಳಲಸದ್ಗತಿ ಸಾರುತೇಳುತ
ಬ್ಬರಿಸುವ ನಾದವನ್ಯಭೃತನಾದವಮುರ್ಚುತಿರಲ್ಕೆ ಮೆಚ್ಚಿ ಮ
ಚ್ಚರಿಸುವ ತೋಳ್ ಮರುದ್ಧತಲತಾಕುಲವೆಂದುರೆ ಪಕ್ಕಿಸೋವ ಪಾ
ಮರಿಯರ ಝಂಕೆಗಲ್ಲಿ ಗಿಳಿಯಂಜದೆ ಬೆಚ್ಚದೆ ನಿಲ್ಕುಮಾವಗಂ ೧೦೮

ಮುಡಿ ಮೊಲೆ ನಿತಂಬ ಭಾರದಿ
ನಡಿಯಿಡಲಾಱದೆ ಶುಕಾಳಿಯಂ ಪಾಮರಿಯರ್
ಬಿಡೆ ಸೋವುತ್ತಿರ್ಪರ್ ಸಂ
ಗಡಮಿರ್ದಲ್ಲಿರ್ದ ಬಿರಯಿಗಳ ಬಳದಿಂದಂ ೧೦೯

ಗಿಳಿಯುಂ ಸೋವೆಳೆಯಳ ನುಡಿ
ವಳಿಯಿಂದಂ ವಿಕಾಸಮಾದ ಬಾಯ್ದೆಱೆಗಂಡಂ
ದೆಳಸುತ್ತಿರ್ಪುವು ದಾಡಿಮ
ಫಳಬೀಜಂಗೆತ್ತು ದಂತಕುಳಮಂ ಗಿಳಿಗಳ್ ೧೧೦

ವನಪಾಲಕಿಯರ್ ಶಾಳೀ
ವನದೊಳಗಿಹ ಕೀರಜಾಳಮಂ ಸೋವುತ್ತಿರಲಾ
ವನದೊಳ್ ದಾಡಿಮಭಿನ್ನದ
ತನಿವಣ್ಗೆನುತವರ ಬಾಯ್ಗೆ ಕವಿದುವು ಗಿಳಿಗಳ್ ೧೧೧

ಸೆಳೆನಡು ಬಳ್ಕೆಯುಳ್ಕೊಡಲ ನುಣ್ಪೊಗರೊಪ್ಪಿ ಘನಸ್ತನಂಗಳ
ವ್ವಳಿಸೆ ನಿಮಿರ್ದ ವೇಣಿ ಕದಪಂ ಪುಗೆ ಮಂದರವಜ್ಜೆ ಮೀಱೆ ಕೈ
ಗಳ ಬಳೆ ಮೆಲ್ಪಿನಿಂದುಲಿಯೆ ಸಂಭ್ರಮದಿಂ ನಸುಬಾಗಿ ಬಿಟ್ಟಿಪ
ಣ್ಗಳಿವಿಡುತಿರ್ಪ (?) ಪಾಮರಿಯರೊಪ್ಪುವರಾ ಕಳಮಪ್ರದೇಶದೊಳ್ ೧೧೨

ಕಡುಚೆಲ್ವಿಂ ಮೆಱೆದಿರ್ಪ ಶಾಳಿವನಮಂ ಪಾಯಲ್ಕೆ ಪಕ್ಷಿವ್ರಜಂ
ಗಡಣಂಗೊಂಡು ಬರಲ್ಕೆ ಸೋವ ಬಗೆಯಂ ಮಾಣ್ದಿರ್ಪರೇಕೆಂದೆನಲ್
ನುಡಿಯಂ ನೋಟಮನೆಮ್ಮೊಳೆಯ್ದೆ ಪದಪಿಂದಂ ಕಲ್ತು ನೀರಿಂಗೆ ಬಂ
ದೊಡೆ (ಬಿರ್ದೋವುವಮೆಂ)ದು ನೇಹದೊದವಿಂ ತತ್ಪಾಮರೀಸಂಕುಳಂ ೧೧೩

ಕಳಮಕ್ಷೇತ್ರದುಪಾಂತನಂದನದೊಳಿರ್ದಾನಂದದಿಂ ಪಕ್ಕಿ ಸೋ
ವ ಲತಾಂಗೀ ಜನದೊಂದು ಮೆಲ್ಲುಲಿಪಮಂ ಕೇಳ್ದಂತದಂ ತದ್ವನಾಂ
ತಲತಾನೀಕದಿನುಣ್ಮುತಿರ್ಪ ಕಳಕಂಠಧ್ವಾನಸಂತಾನಮಂ
ಬಳಿಕ್ಕೈಯಿಂದಮಗಲ್ದು ಪೋಗವು ಚರತ್ಕೀರಾಳಿ ಕೇಕಾರವಂ ೧೧೪

ಭೋಂಕನೆ ಬಂದುನಂದು ತೆನೆ[1]ಯಕ್ಕಿಯ ಮುಕ್ಕಿ[1] ಕಲಂಕಿ ಸೂಸುವ
ನ್ನಂ ಕುಟುಕಿಂಗೆ ಪಾಯ್ದು ಲಿ[2]ಯುತುಂ ಕವಿಯಲ್ ಗಿಳಿಸೋವ[2] ಪಾಮರೀ
ಸಂಕುಳದೊಂದು ಮೆಲ್ಲುಲಿ[3]ಗಳಿಂಚರಮಂ ನಸುಗೇಳ್ದು[3] ಕೀರವ್ರಂ
ದಂ ಕಳಕೂಜಿತಾನುಮಿತಮಾದುದು ಶಾಡ್ವಲಗಂಧಶಾಳಿಯೊಳ್ ೧೧೫

(ಜಗನ್ನಾಥವಿಜಯಂ ೨- ೭, ಸೂಕ್ತಿಸುಧಾರ್ಣವಂ ೪–೫೩)

---

[1]ದೊರ್ಕೆಯನುರ್ಕೆ(ಸ) [2]ವ ರವಂ ಮುಲಿಪಿಂಗಿಳಿಸೋವ(ಸ) [3]ಪ್ರುಮಂ ನಸುಗೇಳವೆ ಸಿಂಪ(ಸ)

ಗಗನಪೊಳೆಯ್ದಿ ಮಂಡಳಿಸಿ ನಿಂದ ಶುಕಾಳಿಯನಂ[1]ದು[1] ಬೆರ್ಚಿಪು
ಜ್ಜುಗದೊಳೆ ನೋಟ್ಪ ಪಾಮರಿಯ ಚಾರುಕಟಾಕ್ಷಮರೀಚಿ ನೀಳ್ದು ಶೋ
ಭೆಗೆ ನೆಲೆಯಾಯ್ತು ತತ್ಕಳಮಭೂರಮೆಗೆತ್ತಿದ ಪಚ್ಚನಪ್ಪ ಸ
ತ್ತಿಗೆಗಳವಟ್ಟು ತೋರ್ಪ ಶಶಿಕಾಂತದ ಕಾಂತದ ಕಾವಿದೆಂಬಿನಂ ೧೧೬
(ಚಂದ್ರಪ್ರಭಪುರಾಣಂ ೧-೯೫; ಸೂಕ್ತಿಸುಧಾರ್ಣವಂ ೧-೭೭)

ಇದು ದಲ್ ಪಕ್ಕಿಗಳೆಲ್ಲಮಂ ನೆರಪುವಂದಂ ಪಕ್ಕಿಸೋವಂದಮ
ಲ್ತಿದೆನಲ್ ಸೋಗೆನವಿಲ್ ಒಟಿಲ್ಮುಡಿಗೆ ಭೃಂಗಂ ಕುಂತಳಕ್ಕಂಚೆಗಳ್
ಮೃದುಯಾನಕ್ಕೆ ಪಿಕಂ ರವಕ್ಕೆಳಸೆ ತಂತಮ್ಮ ಸ್ವಜಾತೀಯ ಸಂ
ಮ್ಮದದಿಂ ಪಾಮರಿಯರ್ ಜಿತಾಮರಿಯರಿರ್ಪರ್ ಕಾದು ಕೇದಾರಮಂ ೧೧೭
(ಮಲ್ಲಿನಾಥಪುರಾಣಂ ೨-೨೧; ಸೂಕ್ತಿಸುಧಾರ್ಣವಂ ೪-೬೮)

ತರಳಾಪಾಂಗಮರೀಚಿಗಳ್ ಕಳಮಕೇದಾರಕ್ಕೆ ಬೆಳ್ಪಾರದೋ
ಲಿರೆ ಸುತ್ತುಂ ಗಿಳಿಸೋವ ನುಣ್ದನಿಯದೆತ್ತುಂ ಗೋರಿಯಂ ಪಾಡುವಂ
ತಿರೆ ಪಾಂಥರ್ ಬಲವಂದು ಬೆಳ್ಮೃಗದವೋಲ್ ಸಾರ್ತಂದು ಬೆಳ್ಪಾಗೆ ಪಾ
ಮರಿಯರ್ ಪಾಂಥರ ಬೇಂಟೆಗಾರ್ತಿಯರೆನಿಪ್ಪಾಶಂಕೆಯಂ ಮಾಡುವರ್ ೧೧೮
(ಸೂಕ್ತಿಸುಧಾರ್ಣವಂ ೪-೬೬)

ಇಡಲನುಗೈವುತಂ ಒಟಿಲೆ ಕೈಪರಿದೆಯ್ದು ತೊಡರ್ಚಿ ಪೋಗೆ ಮೆ
ಲ್ಲಡಿದಡನಾಗೆ ನಿಂದು ಬಡಿವುಜ್ಜುಗದಿಂ ದನಿಯೆತ್ತಿ ಮುಂ ತೊದ
ಲ್ನುಡಿಗೊಳೆ ಲೀಲೆಯಿಂದೆಱಗಿ ಶಾಳಿವನಕ್ಕೆಡೆಯಾಗಿ ನೋಡಿ ನಿಂ
ದೆಡೆಯೊಳೆ ನಿಂದು ಚಿತ್ತದೊಳೆ ಸೋವರು ಪಾಮರಕಾಮಿನೀಜನಂ ೧೧೯
(ಸೂಕ್ತಿಸುಧಾರ್ಣವಂ ೪-೭೦)

ಅವಿರಳಮಾದ ತುಂಗಕುಚಭಾರದೆ ತೋಳ್ ಸೆಳೆದಿಟ್ಟ ತಕ್ಕಿನೊಳ್
ಕವಣೆಯ ಗುಂಡು ಪಾಯವು ಮೃಗಾವಳಿ ಪಾಯವು ಕೆಯ್ಗೆ ಪಾಮರೀ
ಯುವತಿಯರಾರ್ದು ಚಪ್ಪರಿಸೆ ಕೋಗಿಲೆಯಿಂಚರಮೆಂದು ಬೆರ್ಚಿ ಪಾ
ಱವು ಗಿಳಿವಿಂಡು ಪಾಂಥರೆರ್ದೆ ಪವ್ವನೆ ಪಾಱುವುದಾ ಪ್ರದೇಶದೊಳ್ ೧೨೦
(ಅನಂತಪುರಾಣಂ ೧-೮೨; ಸೂಕ್ತಿಸುಧಾರ್ಣವಂ ೪-೬೯)

ಕವಯರದಂತೆ ಒಟ್ಟೆತಳವಟ್ಟು ಕುಚಂ ಕಡುಕೊರ್ವೆ ಪುರ್ಬನಿ
ಕ್ಕುವ ಪೊಜವಾ[2]ಱಿ ಬಿಣ್ಪಿನ[2] ಶಿರೋಜಭರಂ ತಮಗೊಪ್ಪೆ ಕೈಗಳಿಂ
ಕವಿವ ಮೃಗಗಳಂ ತಗುಳ್ವ ಮಂಚಿಕೆಯೇಱುವ ಪಕ್ಕಿಸೋವ ಪಾ
ಡುವ ಪಟುಜೇಟಿಯರ್ ಚರಿಯಿಪಧ್ವಗರ್ಗೀಗುಮನಂಗರಾಗಮಂ ೧೨೧
(ಸೂಕ್ತಿಸುಧಾರ್ಣವಂ ೪-೭೨)

---

[1]ಜಿ(ಸ) [2]ಱು ಸುತ್ತಿದ(ಸೂ)

ನುಡಿಯೊಳ್ ಪಾಲ್ ಮೆೞೆದಿರ್ದ ಶಾಳಿವನದೊಳ್ ಕೀರಾಳಿಯಂ ಸೋವಲೊ
ಳ್ಮಡಿಯಿಂದಂ ಮಿಡಿವಿಲ್ಲೊಳೆಚ್ಚೊಡೆಡೆಯೊಳ್ ಪುಂಡ್ರೇಕ್ಷುವಂ ತಾಗೆ ಗಂ
ಟೊಡೆದೆತ್ತಂ ರಸಮೆಚ್ಚು ಪಾಯೆ ಪಥಿಕರ್ ಪೊಕ್ಕಿಂಟುತುಂ ಕಯ್ಯಬಾ
ಯೆಡೆಯೊಳ್ ಸಾರ್ಚುಗೆ ಕಂಡು ಜೆಂಡುಬೆಱಗಪ್ಪರ್ ಪಾಮರೀವಕ್ತ್ರಮಂ ೧೨೨

(ಅನಂತನಾಥಪುರಾಣಂ ೧–೮೧; ಸೂಕ್ತಿಸುಧಾರ್ಣವಂ ೪–೭೫)

## ಪ್ರಪಾಗೃಹವರ್ಣನಂ

ಬಾೞೆಯ ಚಪ್ಪರಂ ಕರಿಯ ಕಬ್ಬಿನ ಬಲ್ತೊಲೆ ಪಚ್ಚೆಜಂತೆ ಪೆ
ರ್ವಾೞೆಯ ನಾಳಕಂಭ ಕುಸುಮಂಗಳ ಗೊಂಚಲ ಮೇಲುಕಟ್ಟು ಪೊಂ
ಬಾೞೆಯ ಚುಂಚುಲೋವೆ ದವನಂಗಳ ತೋಳ್ದಿನೆ ಸುತ್ತುದಟ್ಟೆ ಶೈ
ತ್ಯಾಳಿಯ ಪಚ್ಚಗರ್ಪುರದ ವೇದಿಕೆಯಿಂದೆಸೆಗುಂ ಪ್ರಪಾಗೃಹಂ ೧೨೩

ಶಶಿಕಾಂತ ಘಟಗಳೆಡೆಯೊಳ್
ಕುಸುಮಾಂಬುವ ತುಂಬಿ ಹೇಮಕರಕಂಗಳ ಪಿಡಿ
ದೊಸೆದು ನವಯವ್ವನಾಂಗಿಯ
ರೆಸೆದಿರ್ದರು ಸಾಲುಸಾಲಿನರವಟ್ಟಿಗೆಯೊಳ್ ೧೨೪

ಕಳಕೇಕೀ ಕೇಶಪಾಶಂ ಶಶಿನಿಭವದನಂ ಭೃಂಗನೀಲಾಳಕಂ ಸಂ
ಚಳಿತತ್ರೋನ್ಮತ್ಸ್ಯನೇತ್ರಂ ಘಟಕುಚಯುಗಳಂ ಲೇಶಮಧ್ಯಂ ಗಭೀರೋ
ಜ್ವಳಶೋಭಾನಾಭಿ ಕುಂಭಸ್ಥಳಸದೃಶನಿತಂಬಂ ಸುರಂಭಾವಿಳಾಸಂ
ಬಳೆದೊಪ್ಪಿರ್ದೂರುದಂಡಂ ತನಗೆಸೆಯೆ ನಿತಾಂತಂ ಪ್ರಪಾಕಾಂತೆಯಿರ್ದಳ್ ೧೨೫

ಬತ್ತಿತು ಬಿಸಿಲುರೆ ಕಾಲಂ
ಮುತ್ತಿತು ನೋವುದಕದಿಚ್ಛೆಯಿಂದಂ ಬೆಳರ್ವಾಯ್
ಬತ್ತಿತ್ತಯ್ಯೋ ಶ್ರಮಮನಿ
ಮಿತ್ತ್ರಂ ಕಳೆವವರೆ ಜಾಣರೆನುತಂ ನುಡಿದಳ್ ೧೨೬

ನುಡಿಯೆ ಬೞಲ್ದ ಪಾಂಥನೆರ್ದೆ ತಂಪಿನಸೋನೆಯನಾಂತ ಮಾೞ್ಕೆಯಿಂ
ಪೊಡಕರಿಸುತ್ತೆ ಪತ್ತಿ ಮಿಗೆ ಸಾರ್ದು ನಿವಾತಸುಖಸ್ಥಳಕ್ಕೆ ಬಂ
ಡೆಡಗುಡದನ್ಯಚಿಂತೆಗೆ ಮನೋಜಸುಖಾರ್ಣವಮಧ್ಯದೊಳ್ ಮನಂ
ಗುಡತಲಮರ್ಚುತೀಸುತೆ ದುಡುಮ್ಮಿಱಿಯುತ್ತವೆ ಪಾಂಥನೊಪ್ಪಿದಂ ೧೨೭

ನೆಟಿಲಾದುದು ಧಮ್ಮಿಲ್ಲಂ
ಪುಳಿನಸ್ಥಳಮಾಯ್ತು ವೃತ್ತಜಘನಭರಂ ಶೀ
ತಳತರ ಜಲಮಾದುದು ಕೋ
ಮಳೆಯರಧರಮರೀಚಿ ಪಾಂಥನೇಂ ಬದುಕಿದನೋ ೧೨೮

ವರನಾಭಿ ಸುೞಿಗಳೆಂ ತೋಳ್
ತರಂಗಮಾಲೆಗಳನಂಬಕಂ ಮತ್ಸ್ಯಮನಂ
ಗರುಚಿ ರುಚಿರಾಂಬುಮಂ ಪೋ
ಲ್ತುರವಣೆ ನದಿಯಂದದಿಂ ಪ್ರಪಾಕಾಂತೆಯಿರಲ್ ೧೨೯

ಇರೆ ಬಂದ ಪಥಿಕನೊರ್ವಂ
ತರುಣಿಯ ಲಾವಣ್ಯರಸಮನಕ್ಷಿಗಳಿಂದಂ
ಬರೆಪೀರ್ದು ದಣಿದು ಬಟ್ಟೆಯ
ಪರಿಶ್ರಮದಾ ವ್ಯಥೆಯನಱಿಯದಿರ್ದಂ ಸುಖದೊಳ್ ೧೩೦

ತೀರ್ದುದು ನೀರ್ ತೀರ್ದುದು ತೃಷೆ
ತೀರ್ದುದು ಕಡುಸೇದೆ ತೀರ್ದೊಡಂ ಪಥಿಕಂ ತಾ
ನಿರ್ದಂತಿರ್ದಂ ಸ್ತ್ರೀಮುಖ
ವಿರ್ದಿರವಂ ನೋಡುವಾಸೆ ತೀರದೆ ಮನದೊಳ್ ೧೩೧

ನಡೆ ನುಡಿ ಬೞಿಲ್ಕೆ ಮುನ್ನಂ
ಕಡುಚೆಲುವೆಯ ರೂಪುಗಂಡ ಬೞಿಕಂ ನೀರಂ
ಕುಡಿಯರ್ ನಡೆಯರ್ ನುಡಿಯರ್
ನಡೆನೋಡುತ್ತಿರ್ಪರರತನುಶಿಥಿಲರ್ ಪಥಿಕರ್ ೧೩೨

ಅಂಬುವನೆಱೆವಾಗಲ್ ಪ್ರತಿ
ಬಿಂಬಿಸೆ ಕೈನೀರೊಳವಳ ವದನಂ ಪಥಿಕಂ
ನಂಬಿ ನಲಿದೀಂಟಿದಂ ಮಿಗೆ
ಬಿಂಬಾಧರಮಧುರಸುಧೆಯನೀಂಟುವ ತೆಱದಿಂ ೧೩೩

ಆಕೆಯ ಲಾವಣ್ಯಾಮೃತ
ಸೇಕದೆ ತೃಷೆ ಮುಗ್ಗಿತಕ್ಕುಮಲ್ಲದೊಡಂ ತ
ದ್ವ್ಯಾಕುಳಿತಚಿತ್ತನವನವ
ಲೋಕಿಸುವನೆ ಸೋಲ್ತನಂತೆ ಮಾನವಮುಡನಂ ೧೩೪

(ಲೀಲಾವತಿ ೬–೬೩)

ತಳೆದೆಳೆಗೆಂಪಿಂ ಪಳುಕಿನ
ಕಳಸಂ ಕಿಸುಗಲ್ಲ ಕಳಸದಂತಿರೆ ತಳೆದು
ತ್ರುಳಧವಳಲೋಲಲೋಚನೆ
ವಿಳಸನದಿಂ ಮತ್ತಮೊರ್ವಳಂಗನೆ ಬಂದಳ್ ೧೩೫
(ಲೀಲಾವತಿ ೬-೬೪)

ಒಳಗಳ್ಳಾಡುವ ಜಲದಿಂ
ಕಳಶಂ ಕಣ್ಗೆಸೆದುದಾಸ್ಯರುಚಿತಸ್ಕರನೀ
ಖಳನೆಂದು ಪಿಡಿದೊಡಾ ಕೋ
ಮಳೆ ಭಯದೆರ್ದೆವ್ರೊಯ್ವ ತುಹಿನಕರಬಿಂಬದವೊಲ್ ೧೩೬
(ಲೀಲಾವತಿ ೬-೬೫)

ಕುಳಿರ್ವ ಜಲಕಲಶಮುದು ಕರ
ತಳಮಂ ಸೋಂಕುವುದುಮಾಲಿಗೊಂಡುಶರೀರಂ
ಪುಳಕಿಸೆ ನಾಳದೊಳಾ ಕೋ
ಮಳೆ ತೀವಿದ ಕಮಳನಾಳಮಂ ತಳೆವಾಗಲ್ ೧೩೭
(ಲೀಲಾವತಿ ೬-೬೭)

ಸ್ನಾನಕಲಶಕ್ಕೆ ಪೊಂಗಳಶಮಂ ಪಡಿಯೆತ್ತುತೆ ತೋಳಧಾರೆ ಕಾ
ಮನ ಕರವಾಳಧಾರೆಯೆನೆ ಧಾರೆಗೆ ಕೈಗಳನೊಡ್ಡಿ ತಮ್ಮ ಜ
ವ್ವನಮನೆ ಕೂರ್ತು ಧಾರೆಯೆಱೆದಿಷ್ಟಫಲಂಗಳನಿತ್ತು ತನ್ಮಹಾ
ಜನಪದದೊಳ್ ಪ್ರಪಾವನಿತೆಯರ್ ಪಡೆವರ್ ಪಥಿಕಪ್ರಮೋದಮಂ ೧೩೮
(ಧರ್ಮನಾಥಪುರಾಣಂ ೨-೩೩)

ಸುಲಲಿತ ಚಂದ್ರಕಾಂತಕಲಶಂಗಳಿನಂಗನೆಯರ್ ವಿಲಾಸದಿಂ
ಕುಳಿರ್ವ ಜಲಂಗಳಂ ಮೊಗೆದು ಪಾಂಥಜನಕ್ಕೆಱೆಯುತ್ತಿರಲ್ಕೆ ಶೀ
ತಳ ಜಲಮೆಲ್ಲವುಂ ಸವೆಯೆ ತಮ್ಮ ಮುಖೇಂದುಮರೀಚಿಯಿಂದಮಾ
ಕಲಶಮನೆಯ್ದೆ ತೀವಿ ಪಥಿಕರ್ಗೆಱೆವರ್ ತೃಷೆ ತೀಱುವನ್ನೆಗಂ ೧೩೯

ಕಯ್ಗೆ ಪಯೋಧರದ್ವಯದ ಕಂಪನೆ ತೆತ್ತು ಬಟಿಲ್ದು ಬತ್ತಿದಾ
ಬಾಯ್ಗೆ ಮುಖೇಂದುವಿಂದಿನಿರಸಂಗಳನೇ ಕಱೆಯುತ್ತ ಜೋಂಪಿಪಾ
ಮೆಯ್ಗೊಱಪೆದ್ದ ತಮ್ಮ . ತವಿಶ್ಮೊಱಪಂ ನೆಱೆ ಪುಟ್ಟಿಸುತ್ತವಳ್
ಸುಯ್ಗೆಡೆಯಾಗದಾ ಪಥಿಕನಾ ತೃಷೆ[೧][ಗೇಡಱುಯುತ್ತಿ][೧]ರೊಪ್ಪಿದಳ್ ೧೪೦

---

[೧] ಗೆಡಱವಟ್ಟ(ಸ)

ಪಱುಪಡೆ ಸೇದೆ ಪಿಂಗೆ ತೃಷೆ ಪೊಂಗಲಶಂಗಳನೆತ್ತಿಕೊಂಡು ನೀ
ರೆಱೆವ ಚಳಲ್ಲತಾಂಗಿಯರ ಕೊಂಕಿದ ತೋಳಮೊದಲ್ಗೆ ತೀವಿ ಕಿ
ಕ್ಕಿಱಿದ ಕುಚಕ್ಕೆ ಕಣ್ಬರಿಯೆ ಧಾರೆಗಳೋರೆಗೆ ಸೂಸೆ [1]ಬೈತಕೈ
ಯಱತು[1] ಬಯಲ್ಗೆ ಬಾಯ್ವಿಡುವರಧ್ವಗರಧ್ವತಟಪ್ರಪಾಳಿಯೊಳ್ ೧೪೧
(ಅನಂತನಾಥಪುರಾಣಂ ೧-೮೩; ಸೂಕ್ತಿಸುಧಾರ್ಣವಂ ೪-೮೦)

ಕೊನೆವನಿ ಸೂಸೆ ಕಣ್ಣಪನಿ ಕೆಂದಳದೊಳ್ ಪನಿಗೂಡೆ ದಿಟ್ಟಿ ಮೂ
ಗಿನ ಕೊನೆಯಲ್ಲಿ ಸೈತುನಿಲೆ ಕೊಂಕಿ ಕೊರಳ್ ಮಿಡುಕಾಡೆ ಸಾರ್ಚಿಕೊ
ಳ್ಳೆನೆ ಕುಳಿರ್ಕೋಡುತಿರ್ಪ ಕಳಶಾಂಬುಗಳಂ ತೃಷೆ ತೀಱೆ ಸುಭ್ರುಸು
ಭ್ರನೆ ಪಥಿಕಾಳಿ ಬೀಗಿ ಪಡೆಗುಂ ಪರಿತೃಷ್ಣೆಗಳಂ ನಿರಂತರಂ ೧೪೨

ಅಱವಟ್ಟಿಗೆಯೊಳ್ ಕುಡಿನೀ
ರೆಱೆವ ಬೆಡಂಗೆಯ ಭಾವಮಂ ಭೋಂಕನೆ ಕಂ
ಡೆಱೆದಡಱೆ ನೋಡಿ ಪಾಂಥರ್
ಗುಱುಯೋಗುತೆ ತಾಳ್ದು ತಂಪುಮಂ ತೃಷೆಯುಮುಮಂ ೧೪೩

ರಾಗಮುಖೇಂದುಬಿಂಬದ ಲತಾಂಗದ ಕಂಗಳ ಕಾಂತಿ ವಾರಿಧಾ
ರಾಗಣದೊಳ್ ಪೊನಲ್ಕವಿದು ಪಾಂಥರ ಕಣ್ಣು ಮನಕ್ಕೆ ರೂಪುಗೊಂ
ಡಾಗಳೆ ತೃಪ್ತಿಯಂ ಕುಡೆ ಮನಂಗೊಳಿಸಿರ್ಪರನಂಗರಾಜಧಾ
ರಾಗೃಹಸಾಲಭಂಜಿಕೆಯಂತಱವಟ್ಟಿಗೆಯೊಳ್ ಲತಾಂಗಿಯರ್ ೧೪೪

ಕಳಶಮನೆತ್ತಿ ನೀರೆಱೆವ ಕಾಂತೆಯ ತೋಳ ತೆರಳ್ಕೆ ಮೇಲುದಂ
ತೊಲಗಿಸೆ ನೋಡಿನುಣ್ಬೊಗರನೀಂಬ ಕುಚದ್ವಯಮೂಲಮಂ ಸಮು
ಜ್ವಲಭುಜಮೂಲಮಂ ನೆಱೆಯೆ ಕಂಡೆರ್ದೆಯಾಱೊಡಂ ನಿರೀಕ್ಷಣಾ
ಕುಲತೆಯಿನೀಂಟುವರ್ ಪಥಿಕರಾ ಕಲಶಾಂಬುವೆ ಸೀಮೆಯೆಂಬಿನಂ ೧೪೫
(ಚಂದ್ರಪ್ರಭಪುರಾಣಂ ೧-೯೮; ಸೂಕ್ತಿಸುಧಾರ್ಣವಂ ೪-೮೩)

ಕುಸಿದಂಗವಾಂತ ಕೈ ಬಿ
ಟ್ಟಿಸೆವಕ್ಷಿಯ ಪಾಂಥನಲ್ಲಿ ಮಿಸುಕಂ ಮಸಕಂ
ಪೊಸಕಂ ಜೀವನವೆಱೆವವ
ಳೆಸಕದ ಜೀವನವನಿತ್ತ ಮಾಟಿಕ್ಕಿಯೊಲಿರ್ದಂ ೧೪೬

---

[1]ಮುಟ್ಟ ಕೈಮುಱಿದು(ಸೂ)

ಸರಸದಿನೆತ್ತಿ ನೀರೆಱೆಯೆ ನೀರೆಯರಧ್ವಗರಧ್ವಖೇದಮೋ
ಸರಿಸಲೊಡಂ ಪ್ರಪಾಪ್ರಕರದೊಳ್ ಕುಡಿವರ್ ಬಿನದಕ್ಕೆ ಬಿಚ್ಚತಂ
ಪರಿಮುರಿಯಾಡೆ ಕಣ್ ಬೞಿಯ ರೇಖೆಗಳೊಳ್ ಸುೞಿಗೊಂಡು ನಾಭಿಯೊಳ್
ಗುರುಕುಚಕೂಟದೊಳ್ ತೊಳಪ ತೋಳವೊದಲ್ಗಳೊಳಾನನಾಬ್ಜದೊಳ್ ೧೪೭

ಜಡಪಾನೋತ್ಸವದಿಂ ಪ್ರಪಾಪ್ರಣಯದಿಂ ಸತ್ರಂಗಳೊಳ್ ಸಂಮುದಂ
ಬಡುವೇಕಾಕಿನಿಯರ್ ಮನೋಜಸುಖದಾನಾರಾಗದೊಳ್ ಚಿತ್ತಮಂ
ಬಡೆವೊಳ್ಪಿಂಡಿರ ಮುಚ್ಚಿಮುಚ್ಚಿಯೊಲವಿಂದಂ ಗಾವುದಕ್ಕೊಮ್ಮೆಯೊಂ
ದೆಡೆಗೆಯ್ದಿರ್ಪೊಡೆ ಕಾರ್ಯಹಾನಿ ಪಥಿಕರ್ಗೂರೂರ ನಾಲ್ವಟ್ಟಿಯೊಳ್ ೧೪೮

## ಕೊಳದ ವರ್ಣನಂ

ವಾಸವಗೇಹದಂತನಿಮಿಷೋಲ್ಲಸಿತಂ ರಘುನಾಥಸೈನ್ಯದ
ಗ್ರೇಸರದಂತೆ ನೀಲ ಕುಮುದಂ ನಳ ಕೇಸರಸೇವ್ಯಮಾನ ಕಂ
ಸಾಸುರವೈರಿಯಂತೆ ಕಮಲಾಲಯಚಕ್ರಸುಪರ್ಣಶೋಭಿತಂ
ಭಾಸುರರಾಜಹಂಸೆಗಳಿನಂಬರದಂತೊಲಿದೊಪ್ಪಿತಾ ಕೊಳಂ ೧೪೯

ಸುರರ ನಿವಾಸದಂತನಿಮಿಷಪ್ರಕರಂ ನಭದಂತಿರಬ್ಜಬಂ
ಧುರ ಮಧುಮಾಸದಂತೆ ಸಿತಪಕ್ಷಯುತಂ ರಥದಂತೆ ಚಕ್ರವಿ
ಸ್ತರಮುರುಪದ್ಮಜಾಂಡದವೊಲಾತ್ತ ಲಸದ್ಭುವನಾಶ್ರಯಂ ಧನು
ರ್ಧರರ ಕಳಾಪದಂತೆ ರಮಣೀಯ ಶಿಳೀಮುಖಸಂಕುಳಂ ಕೊಳಂ ೧೫೦

ವಿದಳಿತ ಪದ್ಮಸೌರಭದಿ ಸಂದಣಿಗೊಳ್ವ ಮಧುವ್ರತಪ್ರತಾ
ನದಿನೆಸೆವುತ್ಪಲಪ್ರಕರದೊಳ್ ನೆಱೆ ಸಿಲ್ಕಿ ಜಿನುಂಗುತಿರ್ಪ ಷ
ಟ್ಪದ ಶಿಶುವೃಂದದಿಂ ಕಮಲತಂಡುಲಮಂ ಕೊಳುತಿರ್ಪ ಹಂಸೆಯಿಂ
ಮದನಸುಖಾಬ್ಧಿಯೊಳ್ ನೆರೆವ ಚಕ್ರದಿನೊಪ್ಪಿತದೊಂದು ಪೂಗೊಳಂ ೧೫೧

ಒಸೆದೇಂ ನೋಡಿದನೋ ಮುರಾರಿ ಲಹರೀಸಂಘಾತಸಂಘಾತದಿಂ
ದೆಸೆಯೊಳ್ ಸೀರ್ಪನಿ ಸೂಸುತಿರ್ಪ ವಿಚಲತ್ಪತ್ರಾಳಿಪತ್ರಾಳಿಯಿಂ
ಬಿಸಜಂಗಳ್ ಮಲರ್ದೊಪ್ಪುತಿರ್ಪ ಜಗತೀಪಾನೀಯಪಾನೀಯದಿಂ
ಜಸಮಂ ತಾಳ್ದಿದ ಮಾನಸಾಬ್ಜವನಶಂಕಾಸಾರಕಾಸಾರಮಂ ೧೫೨
(ಜಗನ್ನಾಥವಿಜಯಂ ೧೦–೬೧)

ಲಲಿತಗತಿಕ್ರಿಯೋತ್ಸವದಿನೊಪ್ಪುವ ಪಾಂಡುರಪಕ್ಷಪಕ್ಷದಿಂ
ಕಲರುತಿ ಬೀರುತಿರ್ಪ ಕುರರೀ ಬಕ ಕುಕ್ಕುಟ ಚಕ್ರಚಕ್ರದಿಂ
ಚಲದಳಿವಿಂಡು ಮಂಡಳಿಸುತಿರ್ಪ ಚಲತ್ ಜಲಜಾತಜಾತದಿಂ
ವಿಲಸಿತಮಾದುದಂ ನಲಿದು ನೋಡಿದನಂಬುಜಷಂಡಷಂಡಮಂ ೧೫೩

ಪಾವಕದಿಕ್ಕಿನಂತೆ ವನದಂತೆ ವಿಜೃಂಭಿತ ಪುಂಡರೀಕಮಿಂ
ದೀವರನಾಭರಮ್ಯಸಭೆಯಂತೆ ರಸಾತಳದಂತನಂತಪ
ದ್ಮಾವಹಮೂರ್ತಿಯಂತೆ ನಭದಂತೆ ವಿರಾಜಿತ ರಾಜಹಂಸಮಾ
ನ್ಯಾವಳಿಯಂತೆ ಕಾಮಿಜನದಂತೆ ಸಮುತ್ಕಳಿಕಾಕುಳಂ ಕೊಳಂ ೧೫೪

ಲಸಿತ ವನೇಚರಾಲಯದವೊಲ್ ಕಮಲೋತ್ಪಲಸಂಸ್ಥಿತಂ ದಿವೌ
ಕಸ ವರರಾಜಧಾನಿಯೆನೆ ಸಂಚರಿಪಾನಿಮಿಷಾಳಿ ಪುಣ್ಯತಾ
ಪಸೆವಿತತಾಶ್ರಮಾಂತವೆನೆ ಸದ್ಗತಿಸಂಗತ ಹಂಸಚಕ್ರಮೇ
ನೆಸೆದುದೊ ತೀರಜಾತಕುಸುಮೀಕೃತ ಶೀಕರಮಂಬುಜಾಕರಂ ೧೫೫

ವಿಳಸದನಂತಪದ್ಮವಸುರಾಂತಕನಂ ಫಣಿವಂಶಮಂ ಸದಾ
ನಳಕುಮುದಾವಭಾಸಿ ದೆಸೆಯಂ ರಘುನಂದನಸೈನ್ಯಮಂ ನಿರಾ
ಕುಳಕವಿರಾಜಹಂಸಸುಭಗಂ ನಭಮಂ ನೃಪಗೇಹಮಂ ಸಮಂ
ತಿಳಿಪುವುದಿಲ್ಲಿ ಮಂದಪವನೋತ್ಸಳಶೀಕರಮಂಬುಜಾಕರಂ ೧೫೬

ವನಲಕ್ಷ್ಮೀದೇವಿಯಂ ಪೆತ್ತಮೃತನಿಧಿಯೊ ವಿಂಧ್ಯಾದ್ರಿಚಂದ್ರೋಪಳಂ ಚಂ
ದ್ರನ ಪೆರ್ಚಿಂದುರ್ಕಿದಂಭೋವಿಸರವೊ ವಿಪಿನಧ್ವಾಂತಮಾಕ್ಷೇಪದಿಂ ಕಾ
ಪಿನೊಳಿಟ್ಟಿಂದುಪ್ರಭಾಪೂರವೊ ಹರಿ ಗರುಡೋದ್ಭೀತಿಯಿಂ ಬಯ್ತ ಪೀಯೂ
ಷನಿಧಾನಶ್ರೀಯೊ ಪೇಳಿಂಬಿನಮಮಳತರಂ ರಯ್ಯಮಾಯ್ತಬ್ಜಷಂಡಂ ೧೫೭
(ಲೀಲಾವತಿ ೬-೬೭)

ತಿಂತಿಣಿಯಾಗಿ ತಾವರೆಯುಮುತ್ಪಲಮುಂ ಪೆಣಡೊಂದನೊಂದು [1]ನಾ
ಳಂ ತಡವಪ್ಪಿನಂ ತುಱುಗಿ ಪುಟ್ಟಿದುವೀ ಕೊಳದೊಳ್ ಪೊದಟ್ಟಿವ
ರ್ಕೆಂತಲರ್ವಂದವೆಂದು ಪಗಲರ್ಕನಿರುಳ್ವಿಧುಬಿಂಬಮಿಂಬುಮಾ
ಟ್ಪಿಂತೆ ಮುಗುಳ್ಚುಗುಂ ಕುಮುದಕಾನನಮುಂ ಕಮಳಪ್ರತಾನಮುಂ ೧೫೮
(ಲೀಲಾವತಿ ೬-೮೧)

———

[1]ತಾ (ಸ)

ಸ್ಮಿತನೀಲೋತ್ಪಲಪುಂಜದಿಂ ವಿಮಲತಾಸೌರಭ್ಯದಿಂ ದರ್ಪಣಾ
ಕೃತಿಯಿಂದೊಪ್ಪುವ ತತ್ಸರೋಜವನದೊಳ್ ತಾಂ ಪುಟ್ಟಿದಂ ರೋಹಿಣೀ
ಪತಿಯಂತಲ್ಲಪೊಡಾ ಮದಾಳಿ ಕಳಭ ಶ್ಯಾಮಾಂಕಮಾ ಸ್ವಚ್ಛದೀ
ಧಿತಿ ಯಾವೃತ್ತತೆ ಚಂದ್ರಮಂಗೆ ಪಿರಿದುಂ ಪೇೞಿತ್ತಣಿಂದಾದುದೋ ೧೫೯

(ಲೀಲಾವತಿ ೬-೮೩)

ಬನದ ನೆೞಲ್ ಕರಮೆಸೆದುದು
ವನಲಕ್ಷ್ಮಿಯೆ ಮಜ್ಜನಕ್ಕೆ ಪೊಕ್ಕಂತಿರೆ ಪೂ
ವಿನ ತುಱುಗಲುದಿರ್ದವಾಕೆಯ
ಕೊನೆಮುಡಿಯಿಂದುದಿರ್ದ ಪೂಗಳೆನೆ ಪೂಗೊಳನೊಳ್ ೧೬೦

(ಲೀಲಾವತಿ ೬-೯೦)

ಪ್ರಿಯತರಮಾಯ್ತು ಕಣ್ಗೆ ವನಲಕ್ಷ್ಮಿಯ ಕನ್ನಡಿ ಕಂಜದೇೞಿಗ್ಗ ಗಾ
ಳಿಯ ಗುಣದಾಗರಂ ನೆಗಟ್ದ ತುಂಬಿಯ ಜೇವಣಸಾಲೆ ಜಕ್ಕವ
ಕ್ಕಿಯ ಸುರತಾಲಯಂ ಸಿರಿಯ ಸೆಜ್ಜೆ ದಿನೇಶನ ಪೆಂಡವಾಸವಂ
ಚೆಯ ಬೆಳಗೆಯ್ ಸುಧಾಕರನ ಸೋದರವಾ ವಿಳಸತ್ಸರೋವರಂ ೧೬೧

(ಲೀಲಾವತಿ ೬-೯೩)

ಜಲರುಹ ಕುಮುದ ಸಮೂಹದ
ಬೆಳವಿಗೆಯಿಂ ಚಕ್ರವಾಕಹಂಸೆಗಳಿಂದಂ
ಎಳೆದುಂಬಿಗಳ ಸುಗೇಯದ
ನಲವಿಂದಂ ಸರಸಿ ಮೆಱೆವುತಿಹುದನವರತಂ ೧೬೨

ಚಾರುತರಂ ನಿರ್ಮಲ ಜಲ
ಪೂರಂ ಸೌರಭ್ಯಮುದಿತ ಮದಮಧುಕರ ಝೇಂ
ಕಾರಂ ಹಂಸಕುಲಕ್ರೇಂ
ಕಾರಂ ರಾಜೀವಭರಿತ ನವಕಾಸಾರಂ ೧೬೩

ಮದನನ ಬತ್ತಳಂತೆ ರಥದಂತೆ ಕುಲಾಲನ ಚಕ್ರದಂತೆ ಕುಂ
ದೊಪವದ ಚಂದ್ರನಂತೆ ವನದಂತೆ ವಿಹಾಯಸದಂತೆ ಶೌರಿಯಂ
ತದುಭುತರಾಹುವಂತೆ ಮುನಿಯಂತೆ ಸುರಾಸಿಯುಗಂಗಳಂತೆ ಭಂ
ಗದಿಬರಹಂತೆ ಮಂತ್ರಿಕುಲದಂತೆ ವಿರಾಜಿಸುಗಾ ಕೊಳಾಂತರದೊಳ್ (?) ೧೬೪

ಪೊಸೆ ಜೆಡೆಯಿರ್ದು ಜಾಡ್ಯಗುಣಮಿಲ್ಲ ವಿಚಾರಿಸೆ ಪತ್ರಮಿರ್ದು ಪ
ತ್ರಸಮಿತಿಯಿಲ್ಲಮಾಱಡಿಯದಿರ್ದುರೆ ಮಾಱಡಿಯಿಲ್ಲವೆಲ್ಲಿಯುಂ
ಮಿಸುಪ ರಥಾಂಗಮಿರ್ದು ರಥದಂಗಗಳಲಿವುಮಬ್ಜಸಂಕುಳಂ
ಪಸರಿಸುತಿರ್ದುಮಬ್ಜಕುಳಮಿಲ್ಲ ಕೊಳಾಂತದೊಳೇಂ ವಿಚಿತ್ರಮೋ ೧೬೪

ಅನಿಮಿಷದೃಷ್ಟಿಯೂರ್ಧ್ವಮುಖಕುಂಡಲಿ ತುಂಬಿಯ ಘೋಷದಿಂದೆ ಜೀ
ವನಗುಣ ಪೊರ್ದದೂರ್ಧ್ವದಳಮಾಗಿಹ ಕಂಜದೊಳಿರ್ಪ ಹಂಸನಿಂ
ಘನಪರಿಪೂರ್ಣದಿಂ ಸ್ಥಿರವಹಾಸನದಿಂ ವನಪಾಶ್ರಮುತ್ವದಿಂ
ದನುನಯಶಾಂತಿಯಿಂದೆತಿಯೊಲಿರ್ದುದುಮಾವಗವೊಂದು ಪೂಗೊಳಂ ೧೬೫

ಕಳಹಂಸಯಾನದಿಂ ಶೀ
ತಳಜಲದಿಂ ಸರಸಿಜಾತಸಂತಿತಿಯಿಂದಂ
ತಳಿತಿರ್ದ ತೀರಸಹಕಾ
ರಲತಾವಳಿಯಿನಲ್ಲಿ ರಂಜಿಸಿತು ಕಾಸಾರಂ ೧೬೬

ಇದೆ ಮೀನ್ಗಳ್ ಮೀನ್ಗಳುಷ್ಯದ್ಭ್ರಮರಮನೊಳಕೊಂಡಬ್ಜಮಬ್ಜಂ ಬಳಕ್ಷಾ
ಸ್ಪದಹಂಸಂ ಹಂಸನತ್ಯದ್ಭುತಲಲಿತಲಸತ್ ಪುಷ್ಕರಂ ಪುಷ್ಕರಂ ತ
ಪ್ಪದಿಳಾಭಾಗಕ್ಕೆ ನೈರ್ಮಲ್ಯಮನೆಸಗೆ ಶರತ್ಕಾಲದಾಕಾಶವೆತ್ತಂ
ದುಪೆನಲ್ ಚೆಲ್ವಾದ ಪದ್ಮಾಕರಮನೊಲವಿನಿಂ ಕಂಡು ಕೊಂಡಾಡುತಿರ್ದಂ ೧೬೭

ಜಳಪಕ್ಷೀಧ್ವಾನದಿಂ ಲಕ್ಷ್ಮಿಯ ವಿವಿಧ ಸುಖಾಸೇಕದಿಂ ಕೋಕಕೋಳಾ
ಹಳ ಶೋಭೋತ್ಥಾನದಿಂ ಸಂಕಜಕುವಲಯಸಂತಾನದಿಂ ನಾಡೆ ಪುಷ್ಪೋ
ದ್ಬಿಳಲೋಲಾಖ್ಯಾತಿಯಿಂ ನಿರ್ಮಳಮಣಿಮಯಸೋಪಾನದಿಂ ಖೇಚರೀಸಂ
ಕುಳಕೇಳೀಸ್ಥಾನದಿಂ ರಂಜಿಪುದು ಲಹರಿಕೋದ್ದಂಡಮಂಭೋಜಷಂಡಂ ೧೬೮

ಕುಮುದಾಬ್ಜಸ್ಥಿತ ರಾಜಹಂಸಗತಿಯಿಂ ಚೆಲ್ವಪ್ಪಿನಂ ತಣ್ಣನ
ಪ್ಪಮರ್ದಂ ಸಾರ್ದನಿಮೇಷಸಂತತಿಗೆ ಪೆಚ್ಚಲ್ ಮಾಟ್ಪಿನಂ ಕೊಲವಿ
ದ್ರುಮದೊಳ್ಪಿಂದನುರಾಗಮುಂ ಪಥಿಕರೊಳ್ ಕೂರ್ತೀವಿನಂ ಚಿತ್ರವಿ
ಭ್ರಮಮಂ ಪುಟ್ಟಿಸುತಿರ್ದುದದ್ರಿತಟದೊಳ್ ತಾನಗ್ಗಳಂ ಪೂಗೊಳಂ ೧೭೦

ಧೀರನರೇಂದ್ರನೀತಿನಯದಂತನಿಶಂ ಕರದಂಡರಂಜಿತಂ
ತಾರಕಿದಾಣದಂತೆ ಯುತಿಸಂತತಿಯುಂತಿರೆ ಹಂಸಸಂಗತಂ
ನಾರಿಯರಗ್ರಹಸ್ತಚಯದಂತೆ ನಿರಂತರ ಕಂಕಣಸ್ಥಿತಂ
ಸಾರಸದೇಟಿಕ್ಕಯಿಂ ಸರಸಿ ರಂಜಿಸುತಿರ್ದುದಿಳಾಧಿನಾಯಕಾ ೧೭೧

(ಅಭಿನವದಶಕುಮಾರ ಚರಿತಂ ೧೩–೩೧)

ಪಾವನವನದೊಳ್ ನಿರ್ಮಲ
ಜೀವನವನಜಾತಷಂಡಮಾರುತಲೀಲಾ
ದಾವನವನಮಧ್ಯಮದೇಂ
ಜೇವನ ವನಮಾಲೆಯಂತೆ ತೆರಂಪೊಳಯಿಸಿತೊ ೧೭೨

ವನವರಧವಳಾಂಗದ್ಯುತಿ
ಚರಚರಮೂರ್ಮಿಸ್ಫುರತ್ತಟೋಜ್ವಲಫೇನೋ
ತ್ಕರಕರದೊಳ್ ತಡವಾಗಿರೆ
ಪರಿಪರಿರಂಜಿಸುವದೊಂದು ಕೊಳನಂ ಕಂಡಂ ೧೭೩

ಕೇಸರಸರಸರಜಃಪರಿ
ದೂಸರಸರಮಂ ನಿರೀಕ್ಷಿಸಲ್ ನೃಪವಂಶಾ
ಗ್ರೇಸರ ಸರಭಸನಯನಂ
ವಾಸರಸರಸಿರುಹದಂತಿರೊಪ್ಪಿದುದಾಗಳ್ ೧೭೪

ಸಾರಸ ಸರಸಧ್ವನಿಯಿಂ
ನೀರಜರಜದಿಂ ಮದಾಳಿಗಳ ಗಳರುತಿಯಿಂ
ಸೌರಭರಭಸದಿನದು ಸಂ
ಚಾರಣರಣದೂರ್ಮಿಪದ್ಮವನವನಮಧ್ಯಂ ೧೭೫

ಕೌತುಕವೆನೆ ಪಾಱುವುವಳಿ
ನೀತತಿ ಹಂಸಂ ರಥಾಂಗಮೀ ತಾವರೆಯಿಂ
ದಾ ತಾವರೆಗೀ ತಡಿಯಿಂ
ದಾ ತಡಿಗೀ ಪುಳಿಲಿನಾ ಪುಳಿಲ್ಗಾ ಕೊಳನೊಳ್ ೧೭೬

ಹರಿಯಂತಾ ಹಿಮರೋಚಿಯಂತೆ ಕಮಲೋಪೇತಪ್ರಭಾವಂ ಮಹೇ
ಶ್ವರನಂತಾ ದನುಜಾರಿಯಂತೆ ಕುಮುದಪ್ರೋದ್ಭಾಸುರಂ ಪದ್ಮಮಂ
ದಿರೆಯಂತಾ ಗಿರಿಜಾತೆಯಂತೆ ವರಹಂಸೋದ್ವ್ಯಕ್ತದಿಂದಿಂತು ವಿ
ಸ್ತರಮಾಗಿರ್ದುದು ಚೆಲ್ವುವೆತ್ತುಮನಿಶಂ ಶ್ವೇತಾಂಬುಜಾತಾಕರಂ ೧೭೭

ಕರಿಯಂತಾ ಕಮಲಾಕ್ಷನಂತೆ ಲಲಿತೋದ್ಯದ್ಭದ್ರಸೌಂದರ್ಯಮಾ
ಕರಿಯಂತಾ ಕಮಲಾಕ್ಷನಂತೆ ವರಚಕ್ರಾಲಂಕೃತಾಖ್ಯಾತಮಾ
ಕರಿಯಂತಾ ಕಮಲಾಕ್ಷನಂತೆ ಪಿರಿದುಂ ಪದ್ಮೋಪಯುಕ್ತಪ್ರಭಾ
ಸುರಮಾಗಿಂತು ನೆಗಟ್ತ್ತವೆತ್ತವು ಕರಂ ಶ್ವೇತಾಂಬುಜಾತಾಕರಂ ೧೭೮

ಸುರಭಿತರುಪ್ರಮೋದಕಮಲಂ ಕಮಲಂ ಕಮಲಾಕರಾಂತ ಬಂ
ಧುರವಿಕಟಪ್ರಕೀರ್ಣಕುಮುದಂ ಕುಮುದಂ ಕುಮುದಪ್ರಹಾರಕಂ
ಪರಹಿತನಪ್ರಕೇತುಮಧುಕಂ ಮಧುಕಂ ಮಧುಕಾಂತಲೋಹಿತಂ
ಸರಸಿರುಹಾಕರಂ ಸುಜನಕಂ ಜನಕಂ ಜನಕಂ ಶುಭೋದಯಂ ೧೭೯

ತುಂಬಿಯ ಬಣ್ಣಮಂ ಕಱಿಯ ನೆಯ್ದಿಲಬಣ್ಣಮನಂಜೆವಿಂಡುತ
ಳ್ತಿಂ ಬೆಳುರ್ವಣ್ಣಮಂ ಬಿಳಿಯ ಕಂಜದ ಬಣ್ಣಮನೊಂದೆಮಾಱಿಯಿಂ
ತುಂಬಮುಮಾಗೆ ತುಂಬಿದುದು ಕೞ್ತಲೆಗಂ ಶಶಿಕಾಂತಿಗಳ್ಗಮೀ
ಯಂಬುಜಷಂಡಮೀ ಜಗದೊಳಿಲ್ಲದ ಕೂಟಮನುಂಟುಮಾಡಮೇ ೧೮೦
(ಲೀಲಾವತಿ ೫-೬೨)

ನೇಸರ್ ಮಿಗೆ ಬಿಸಿಗದಿರಂ
ಪೇಸದೆ ಸಲೆ ಪೇರ್ಗುಮೆಂಬ ಮರುಕದೊಳಂಭೋ
ಜಾಸನನಂಬುಜವನಮಂ
ಬಾಸಣಿಸಿದೊಲೆಸೆದವಿಡಿದ ತಾವರೆಯೆಲೆಗಳ್ ೧೮೧

ಬಾಲೆಯುರುರದೊಳ್ ಕಿಱು
ಮೊಲೆ ಮೇಲುದು ಜಾಱಿ ತೋರ್ಪ ತೆಱದಿಂ ಸರಸೀ
ಮಾಲೆಯೊಳೆಸೆದುವು ನವಪ
ತ್ರಾಳಿಯ ತೆಱಪಿಂದೆ ತೋರ್ಪ ಕಮಲದ ಮುಗುಳ್ಗಳ್ ೧೮೨

ನಳಿನದ-ಕರ್ಣಿಕೆಯೊತ್ತಿನ
ಲಳವಡೆ ಕಣ್ಮುಚ್ಚಿ ಮುಗ್ಗುಲಿಕ್ಕಿಯಜಸ್ರಂ
ತಳರದೆ ನಿದ್ರಾಸುಖದಿಂ
ಕಳಹಂಸೆಯ ಮಱಿಗಳಿರ್ಪವಂತಾ ಕೊಳದೊಳ್ ೧೮೩

ಕಡು ಬೆಳ್ದಾವರೆ ಮೊಗ್ಗನೋರನಡಿಗಿಟ್ಟಾ ಪರ್ಣಸಿಂಹಾಸನ
ಕ್ಕಡರ್ದಿಂದುಂ ಪೆಱಗಿರ್ಪ ಪದ್ಮದಲರಾ ಮಾಡಾವಿಯಂ ನೆಮ್ಮಿ ಮೇ
ಲೊಡಗೂಟಕ್ಕೆ ಕುಕಿಲ್ವ ಕೋಕರವಮೋದಂ ಕೇಳಿ ಪೆಣ್ದುಂಬಿಯಾ
ನಿಡು ಪಾಡಾಲಿಸೆ ರಾಜಹಂಸೆ ಮಿಗೆ ತಾನೊಪ್ಪಲ್ಕೆ ಕಂಡಂ ನೃಪಂ ೧೮೪

ಅಂಬುಜಸೂತ್ರಮೆಂಬ ಪೆಣೆದಾವಣೆಯಂ ಪಱಿದಾವಲೆಂಬ ಬ
ಲ್ಗಿಂಬಮನೊತ್ತಿ ಕಿೞ್ತು ಲತೆಯೆಂಬ ತುರಂಗಮುಮಂ ಪೊರಳ್ಚಿ ಶೈ
ತ್ಯಾಂಬುತರಂಗಮೆಂಬ ಪಱಿಕಾಱನನಟ್ಟಿ ಮದಾಳಿಯೆಂಬ ಗುಂ
ಡಂ ಬೞಿಯಟ್ಟೆ ಸೋವುದು ಸಮೀರಣವಾರಣಮಾ ಪ್ರದೇಶದೊಳ್(?) ೧೮೫

# ವಾಯುವಿನ ವರ್ಣನೆ

ತೀಡಿತ್ತೊಂ[1]ದೊಂದಱಿಂ ತಣ್ಗೆಱೆದುಱುಗಲ ತಾರ್ಮುಟ್ಟೆನೊಳ್ ಸಂದು[1] ಸಂದೋ
ಲಾಡುತ್ತುಂ ಕೂಡೆ ನೀರ್ವಕ್ಕಿಗಳುಲಿಪುಗಳಂ ಕರ್ಣದೊಳ್ ತಂದುತಂದೀ
ಡಾಡುತ್ತುಂ ತೀರದೊಳ್ ತಳ್ತೆಳಲತೆಗಳ ಪೂಗೊಂಚಲಂ ನಿಂದುನಿಂದ
ಲ್ಲಾಡುತ್ತುಂ ನೀಲನೀರೇರುಹಸುರಭಿರಸಂ ಸಾರಸಂ ಮಾತರಿಶ್ವಂ ೧೮೬
(ಲೀಲಾವತಿ ೬-೭೭)

ಸರಸಿಯ ನೀರಜಂಗಳ ರಜಂಗಳ ಪೊಂಪುೞಿವೆತ್ತ ತಂಪಿನೊಳ್
ಬೆರಸಿ ಕರಂ ತದಂಗದ ತರಂಗದ ನಿರ್ಮಲಬಿಂದುವೃಂದಮಂ
ಧರಿಯಿಸಿ ತೀರಸಾರವನ ಭೂರುಹದಗ್ರಮುಮಂ ಪೊರಳ್ಚಿ ಸಂ
ಚರಿಸಿದುದೊಪ್ಪುವೊಂದುಪವನಂ ಪವನಂ ನಿಜ ಮಂದಚಾರದಿಂ ೧೮೭

ತಿಳಿದ ಕೊಳಂಗಳೊಳ್ ಸುೞಿದು ಸೀರ್ಪನಿಯಂ ಬಿಡದೆತ್ತಿಕೊಂಡು ಪೂ
ಗಳ ಪೊಸಗಂಪಿನೊಳ್ ಪೊರೆದು ತುಂಬಿಗಳಿಂಚರದಿಂದರಳ್ದು ಕೆಂ
ದಳಿರ್ಗಳ ತೊಂಗಲೊಳ್ ತೊಡರ್ದು ಕೂಡುವ ನಲ್ಲರ ನೀಳ್ದ ಸೇದೆಯಂ
ಸೆಳೆದೆಲರಲ್ಲಿ ತೀಡಿದುದು ಮೆಲ್ಲನೆ ಮೆಲ್ಲನೆ ಬಂದು ಬಿರ್ದಿನಿಂ ೧೮೮

ಬಿಡದೊಗುವ ಸೋನೆ ಸೋನೆಯ
ಕಡುಗೆಸಱೊಳ್ ಜಾಱಿ ಬಿರ್ದು ಮಾವಿನ ಕಯ್ಯಂ
ಪಿಡಿದೆೞ್ದು ಮೆಲ್ಲಮೆಲ್ಲನೆ
ನಡೆದುದು ಕಂಗುರುಡನಂತೆ ನೃಪವನಪವನಂ ೧೮೯

ಕ್ರಮದಿಂದೆ ಶೈತ್ಯ ಸೌರ
ಭ್ಯ ಮಾಂದ್ಯವೆಂಬ ತನ್ನ ಗುಣದಿಂದೊಳ್ಪಿಂ ರತಿ
ರಮಣನನಲ್ಲಾಡಿಸೆ ಮಂ
ದಮಾರುತಂ ಮೋಹಿಸುತ್ತಲಂದೆಯ್ತಂದಂ ೧೯೦

ನೆಯ್ದಿಲ್ಗೊಳಂಗಳೆಡೆಯೊಳ್
ತೊಯ್ದೋವದೆ ಸುರಿವ ಪಲವು ನೀರ್ವಕ್ಕಿಗಳಿಂ
ದೆಯ್ದುಣ್ಮುವ ಸೀರ್ಪನಿಯಿಂ
ತೊಯ್ದೊಯ್ಯನೆ ಗಾಳಿ ಕೂಡೆ ತೀಡುತ್ತಿರ್ಕುಂ ೧೯೧

---

ಪಂದದಿಂ ತಣ್ಣೆರದುರುಗವಲಂ ಮುಟ್ಟನೋಳ್ಪಂದು (ಸ)

ಮುಗುಳ ತೊಡಂಬೆ ಗಂಟೊಡೆಯೆ ಮೊಲ್ಲೆಗೆ ಬೆಳ್ಪುಟಿ ಪುಟ್ಟೆ ಘಟ್ಟಿಕೇ
ದಗೆಗಳ ಸೊರ್ಕು ಚೇತರಿಸೆ ಚಾದಗೆಗಂ ಚಿರಮಾಗೆ ರಾಗಮುಂ
ಜೆಗೆ ಕಿಱುವೀಲಿ ಕಣ್ದೆಱೆಯೆ ಸೊಗೆಗೆ ತಣ್ಣಸು ಪುಟ್ಟೆ ಬೆಟ್ಟಬೇ
ಸಗೆಯ ಬಿಸಿಲ್ಗೆ ತೀಡಿದುದು ತಣ್ಣನೆ ಪಣ್ಣನೆ ಪಶ್ಚಿಮಾನಿಲಂ ೧೯೨
(ರಾಮಚಂದ್ರಚರಿತಪುರಾಣಂ ೭-೧೨೯, ಮಲ್ಲಿನಾಥಪುರಾಣಂ ೮-೭೬)

ನವನೀಲೋತ್ಪಲ ಲಕ್ಷ್ಮಿಯಂ ನಗಿಸಿ ಮಲ್ಲೀರಾಮೆಯೊಳ್ ಮೇಳವಾ
ಡಿ ವನೇಜಾತಿನಿಯಂ ವಿಡಂಬಿಸಿ ವಿನೋದಂಬೆತ್ತು ಬಂದತ್ತು ಸ
ಬ್ಬವಕಾಱಂಗೆಣೆಯಾಗಿ ವಾರವನಿತಾಸೌಭಾಗ್ಯಘಂಟಾರುತಂ
[೧]ಸುವಿಟಸ್ವೇದನ[೧]ವಾರುತಂ ಕುಸುಮಚಾಪಜ್ಯಾರುತಂ ಮಾರುತಂ ೧೯೩
(ಜಗನ್ನಾಥವಿಜಯಂ ೧೬-೧೧೦; ಸೂಕ್ತಿಸುಧಾರ್ಣವಂ ೮-೩೧೮)

ತೆರೆವೊಯ್ಲಿಂ[೨]ದೆಟ್ಟಿ[೨] ಕಾಸಾರದ ಪರಿಸರದೊಳ್ ನಿಪ್ರೆಗೆಯ್ವಂಜೆವಿಂಡಂ
ದರಹಾಸಶ್ರೀಯನಂಭೋಜನಿಗೆ ಪಡೆದು ನೆಯ್ದಿಲ್ಗಳಿಂದುಳ್ಳಲರ್ವಂ
ಬುರುಹಕ್ಕೆಟ್ಟಿರ್ಪ ಭೃಂಗಂಗಳ ಗಱಿಯೆಲರಿಂ ಕೊರ್ಬಿ ಚಂಡಾಲಗೇಯ
ಸ್ವರದೊಳ್ ತಳ್ಪೊಯ್ದತಿಸ್ವೈರದೆ ಸುಟಿದುದು ವೈಭಾತಿಕಂ ಮಾತರಿಶ್ವಂ ೧೯೪
(ಜಗನ್ನಾಥವಿಜಯಂ ೧೬-೧೩೬; ಸೂಕ್ತಿಸುಧಾರ್ಣವಂ ೮-೪೮೯)

ಯುವತೀಸಂತಾನನಾನಾ ಚಲದಳಕಲಸಲ್ಲಾಸ್ಯಲೀಲಾಪ್ರ[೩]ಬುದ್ಧಂ[೩]
ವಿವಿಧಾಗಾರಾಂಗಣಪ್ರಸ್ಫುರಿತ ಕೃತಕಕಾಸಾರಪಾನೀಯ ಭಂಗೋ
ದ್ಭವಬಿಂದುವ್ರಾತಶೀತಾವರಣನೊಲವಿನಿಂ ತೀಡಿದಂ ಸ್ತ್ರೀಕು[೪]ಚೋ[೪]ದ್ಯಂ
ನವಕಸ್ತೂರೀಹಿಮಪ್ರೋನ್ಮಲಯಜಘುಸೃಣಾಮೋದಭಾರಂ ಸಮೀರಂ ೧೮೫
(ಗಿರಿಜಾಕಲ್ಯಾಣಂ ೪-೧೨೦; ಸೂಕ್ತಿಸುಧಾರ್ಣವಂ ೪-೧೪೭; ೮-೩೧೮)

ಕಳಿಕಾವ್ರಾತಮನುಂಡು ನೋಡಿ ತಳಿರಂ ತೂಗಾಡಿ ಪೂಗೊಂಚಲೊಳ್
ಸುಟಿಗೊಂಡಾಡಿ ಕಟಿಲ್ಚಿ ಪಣ್ಣೆಲೆಗಳಂ ಬೀಸಾಡಿ ನಾನಾಜನಂ
ಗಳ ವಕ್ತ್ರಕ್ಕೊಡಗೂಡಿ ಪೂತಕೊಳನೊಳ್ ತೇಂಕಾಡಿ ಕಾಂತಾಜನಂ
ಗಳೊಳೋಲಾಡಿ ಬಟಲ್ದು ಬಾಡಿ ಸುಟಿದತ್ತಂದೊಂದು ಮಂದಾನಿಲಂ ೧೯೬

ವನಿತಾಕೇಶಕಲಾಪ[೫]ಬಂಧ[೫] ಕುಸುಮಾಮೋದಂಗಳಿಂ ಕಮ್ಮಕಂ
ಮನೆ ನಾರೀಸುರತಪ್ರಮೋದ ಬಹಳಸ್ವೇದಾಂಬುವಿಂ ;ತಣ್ಣತಂ
ಣನೆ [೬]ಕಾಂತಾಕುಟಿಲಾಳಕಸ್ತನತಟಪ್ರೋ[೬]ದ್ಘಟ್ಟದೊಳ್ ಮೆಲ್ಲನೆ
ಲ್ಲನೆ ತೀಡಿತ್ತು ವಿಳಾಸಿನೀಸದನದೊಳ್ ಬಂದೊಂದು ಮಂದಾನಿಲಂ ೧೯೭
(ಸೂಕ್ತಿಸುಧಾರ್ಣವಂ ೪-೧೪೪; ೮-೩೧೭)

---

[೧]ಸವಿಸಸ್ಫಾಟಿಕ(ಸ) [೨]ದುರ್ವಿ(ಸ) [೩]ಬಂಧಂ(ಅ) [೪]ಲೋ(ಅ) [೫]ನವ್ಯ(ಸೂ)
[೬]ನಾರೀನಿಬಿಡೋನ್ನತಸ್ತನಘಟಪ್ರೋ (ಸೂ)

ತೊಲಗಿಸಿ ಮೇಲುದಂ ಬೆಮರಬಿಂದುಗಳಂ ತವೆ ಪೀರ್ದು ನೀಳ್ದ ಕುಂ
ತಳವುಮನುಯ್ಯಲಾಡಿಸಿ ಮುಖಾಂಬುಜಷಂಡಮನೀಳ್ದುಕೊಂಡುರೋ
ಕುಲಕುಳನಾಡಿ ಮನ್ಮಥಜಯಾದಿಮನಃಪ್ರಿಯನಂತೆ ಸಾರ್ದದೇಂ
ತಳೆದುದೋ ಕಾಂತೆಗುಣ್ಮಿದ ರತಿಕ್ರಮಮಂ ನವಮಂದಮಾರುತಂ ೧೯೮

ಬಾಲಮೃಣಾಳದೀಸು ಪೊಸಮಾವಿನ ಕೋರಕದಚ್ಚು ನೀಳ್ದ ಪೂ
ಮಾಲೆಯ ಹಗ್ಗಮುತ್ಪಲದ ಕಾವಿನ ಬಲ್ಮೊಗಮಬ್ಜಪತ್ರದಾ
ಘಾಲಿಗಳೊಪ್ಪೆ ಪೂಡಿ ಪೊಳೆವಂಚೆಗಳಿಂ ನಡೆತಂದುದೊಂದು ತಂ
ಗಾಳಿ ಬೆಡಂಗುವೆತ್ತು ವಿರಹೀಪ್ರಕರದ್ವಿರದಂ ಮಹಾರಥಂ ೧೯೯

ಸಂದಣಿಸಿರ್ದ ಕೇದಗೆಗಳೊಳ್ಗಱಿಯೊಳ್ ಗಱಿಸೋಂಕಿ ಕುಂದದೊಳ್
ಕುಂದದ ಲೀಲೆಯಿಂ ಸುೞಿದು ಕಂದಳದೊಳ್ ದಳಮಂ ಕಳಂಕಿ ಕೈ
ವಂದ ಕದಂಬಪುಷ್ಪದ ಪರಂಪರೆಯೊಳ್ ಪರಿದಾಡಿ ತಣ್ಪು ಕಂ
ಪೊಂದಿರೆ ಬಂದು ತೀಡಿದುದು ಮಾರುತನಾತ್ತಕಳಾಪಿನೀರುತಂ ೨೦೦

(ಜಗನ್ನಾಥವಿಜಯಂ ೪–೩೪)

ಕಳಿಯಲರಂ ಕಟಿಲ್ಚಿ ಮುಗುಳಂ ನಯದಿಂದಮುರಳ್ಚಿ ಪದ್ಮಿನೀ
ದಳತತಿಯಂ ನುರುಳ್ಚಿ ನಳಿನಾಕರವೀಚಿಗಳಂ ತೆರಳ್ಚಿ ಕೋ
ಮಳಲತೆಯಂ ಮರಳ್ಚಿ ಕೊನೆಯಂ ಮರದಿಂದಗಲ್ಚಿ ಬಿಟ್ದ ಪೂ
ಗಳನಿಳೆಯೊಳ್ ಪೊರಳ್ಚಿ ಸುೞಿದಂ ನಳಿನೀರತಮಂದಮಾರುತಂ ೨೦೧

ಸುೞಿಸುೞಿಗೊಂಡು ಸುತ್ತಿ ಸುೞಿದಾಡಿ ವನಂಗಳ ಪೂಗಳಂ
ಕಳಲಿಚಿ ಮೊಗ್ಗೆವೂಗಳನೆ ಹಿಗ್ಗಿಸಿ ಕಂಪುಮನೆತ್ತಿ ಬಳ್ಳಿಯಂ
ಕುಣಿಯಿಸಿ ಪಣ್ಣಪಣ್ಗೊನೆಗಳಂ ನಲಿದಾಡಿಸುತಾಡಿ ರಾಗದಿಂ
ತಿಳಿಗೊಳನತ್ತ ತೀಡಿದುದು ಗಂಧಸಮೀರನದೊಂದು ಲೀಲೆಯಿಂ ೨೦೨

ತಳಿರಂ ಮೆಲ್ಲನೆ ನೂಂಕಿ ಮಾಮಿಡಿಗಳಂ ಚೆಂಡಾಡುತಂ ಕೊಡೆ ಪೂ
ಗಳ ಧೂಳಿಂ ಪೊಱಿತಯೇಱುತಂ ಸೊನೆಗಳೊಳ್ ನೀರಾಟಮಂ ಮಾಡುತಂ
ಚಳಯಂ ಕೈಮಿಗೆ ಬಪ್ಪ ತುಂಬಿಯುಲಿಯಿಂದಂ ಡಂಗುರಂಬೊಯ್ಸುತಂ
ತಳರ್ದೇಂ ಬಂದುದೊ ಕಾನನಾನೆಯೊಲವಿಂ ತಂಗಾಳಿ ತನ್ನಿಚ್ಛೆಯಿಂ ೨೦೩

(ಕಬ್ಬಿಗರಕಾವಂ–೯೮)

ಉದಯಾಂಗನೆ ದಿವಸೇಂದ್ರನ
ವದನಮನಿಟ್ಟೆಸುತೆ ನಕ್ಕೊಡಂ ಸುಲಿಪಲ್ಗಳ್
ಗದಗದಿಸಿ ತೋಱುತಿರ್ಪಂ
ದದೊಳಿರವಂತಿಗಳ ವಲ್ಲಿಗಳ್ ಕಂಗೊಳಿಕುಂ ೪೭೯

ವರಶರದೃತುವಿನ ಜಸವೆಣ್
ಶೆರದದೊಳಂ ಮಿಕ್ಕಋತುಗಳಂ ನಗುತಿರಲಾ
ಕಿರಣಂ ದಶದಿಕ್ಕಿನೊಳೆವ
ತರಿಸಿದವೋಲ್ ಪೂಗಳಡಿದ ಮೊಲ್ಲೆಗಳೆಸೆಗುಂ ೪೮೦

ಚೈತ್ರನ ಮಂತಣ ಶಾಲೆಗೆ
ಸೂತ್ರಗಳಂ ಪಿಡಿದು ಕಟ್ಟಿಸಿದ ಮೇಲ್ಕಟ್ಟಿನ
ಚಿತ್ರಮಿದಪ್ಪುದೆನಿಪ್ಪ ಚ
ರಿತ್ರದೊಳಂ ನಾಗಕೇಸರಗಳೆಸೆದಿರ್ಕುಂ ೪೮೧

ಕಂದರ್ಪನ ಮುಡಿಗಟ್ಟಿಗೆ
ನಂದನವನಲಕ್ಷ್ಮಿ ಪೊರೆಯೆ ಬೆಳೆವುತ ಪರಿಮಳ
ದಿಂದೆಸೆವಲರ್ಗೊಂಚಲ ಸಾ
ಲೊಂದಿದ ಪಗಡೆಯ ಮರಂಗಳೇನೊಪ್ಪಿದುವೋ

ಮಾರಪ್ರತಾಪಕೀರ್ತಿಯ
ಚಾರು ವಿವರ್ಣಗಳ ಪೋಲ್ವ ಶೋಣಾರ್ಜುನರುಚಿ ೪೮೨
ಪೂರಿತ ಪುಷ್ಪಗಳಿಂದಂ
ರಾರಾಜಿಪುವೆರಡು ಬಗೆಯ ಪಟ್ಟೆಗೆಗಿಡುಗಳ್ ೪೮೩

ಅಲರ್ಗಳ ಗಂಧಕ್ಕಲ್ಲದೆ
ನೆಲಸಿರದು ಸುಗಂಧಮೆಂಬ ಪೆಸರಂತಲ್ಲಂ
ಸಲೆ ತನ್ನ ಗಿಡುಗೆ ಸಹೆ ನಿ
ರ್ಮಲಿನಸುಗಂಧಾಂಕಿತದ ಸುಗಂಧಿಗಳೆಸೆಗುಂ ೪೮೪

ಕಾವನ ಪಚ್ಚೆಯ ಮಾಡದ
ತೀವಿರೆ ಬೆಳ್ಗಂಪುವಟ್ಟೆಯಂ ಸಿಂಗರಿಸಿದ
ನೋವಿ ವಸಂತಕನೆನೆ ಶಾ
ಖಾವಳಿ ಕುಸುಮಿತದ ಕಂಚಿವಾಳಿಗಳೆಸೆಗುಂ ೪೮೫

ನಿಚ್ಚವುದವಳಿಗ ಬಿರುದಿನ
ಪಚ್ಚೆಯ ಬಿಲ್ಲವನ ನೆಯ್ಯ ಪಳದಿಯ ಪೊದಕೆಯ
ನಚ್ಚಿನ ಪೂಗಳ ತಾಳ್ದಿಸೆ
ದಚ್ಚರಿಯದೊಳಿರ್ಪವಲ್ಲಿ ವನಸಂಪಗೆಗಳ್ ೪೮೬

ಕೀರತುರಂಗವುವಡಱುತೆ
ಮಾರನೃಪಂ ವಿರಹಿಜನರನಿಱಿಯಲ್ಕೆತ್ತಲ್
ಸೇರಿದನ್ನೆ ಜಯದಲಗಿನ
ಪೂರಮೆನಲ್ ಮೆಱೆವುವಂತೆ ಚೆನ್ನಿಯ್ದಿಲೆಗಳ್ ೩೮೭

ಭರದೊಳನಂಗನನೆಸೆಯಲ್
ವಿರಹಿಗಳುರಿಮುಸಗಿ ಸುತ್ತಿ ಪತ್ತಲ್ ಕಂದಿದ
ಪರಿಯಿಂ ತಾನೆಸೆದಿರ್ಪುವು
ಪರಿಮಳಮಂ ಬೀರುತಿರ್ಪ ಕನ್ನೆಯ್ದಿಲೆಗಳ್ ೪೮೮

ಪೆಱಪಿಂಗಿದವರ ಭಾಗಕೆ
ತಱಗೆಂಡದೊಲೊಪ್ಪುತಿರ್ಪ ವರ್ಣಕದಿಂದಂ
ತೆಱಪಾದೆಸಳ್ಗಳೆ ಪೂಗಳ್
ತುಱುಗಿರಲೆಸೆದಿರ್ಪವಲ್ತೆ ಕೆಂದಾವರೆಗಳ್ ೪೮೯

ಸಿರಿವೆಣ್ ಮನಸಿಜನರ್ಥಿಯೊ
ಳಿರಲೆನುತಂ ಜೊಮ್ಮನೊಲ್ದು ಪಾಲ್ನೊದೆಗೆಲಸದ
ಕರುಮಾಡಂಗಳ ಸೃಜಿಸಿದ
ಪರಿಯಂ ಪೋಲ್ತಿರ್ಪುವಲ್ತೆ ಬೆಳ್ದಾವರೆಗಳ್ ೪೯೦

ಲತೆಯೆನಿಸುವ ನಟಿಯಂ ಮಾ
ರುತನಾಡಿಸಿ ಪಿಡಿದ ಪೊನ್ನತಾಳಿಗನೆಂಬಂ
ತತಿಶಯಮಾಗಿಹ ಪುಷ್ಪ
ಪ್ರತತಿಗಳಿಂ ಜೆಟ್ಟದಾವರೆಗಳೆಸೆದಿರ್ಕುಂ ೪೯೧

ಪಾದರಿನವೆಸರ ನಿಂದೆಗೆ
ನ್ಪೈದೆಗೆದೆಲೆಗಳ ಬಿದಿರ್ಚಿ ನಿಚ್ಚಳದೊಳ್ ಪೂ
ವಾದಪುದೊ ಪೇೞ್ವನಲ್ಕಾ
ನೋದವ ಪಸರಿಸುತೆ ಪಾಟಲಿಗಳೆಸೆದಿರ್ಕುಂ ೪೯೨

ಮದನಂಗಿದಿರಾದರ ಪೇ
ರೆದೆಗಳನರಿವಂದಮಾದ ಗರಗಸಗಳವೋಲ್
ಪುದುಗಿದ ಕುತ್ತೆಸಳಿಂ ಷ
ಟ್ಪದಜೀವನವಾದ ಕೇದಗಗಳೆಸೆದಿರ್ಕುಂ ೪೯೩

ನಾಡೆ ಬನಸಿರಿಗೆ ಚೈತ್ರಂ
ಮಾಡಿಸೆ ಥಳಥಳಿಪ ಪಲವು ಪೊಮ್ಮಾಡಂಗಳ
ಗಾಡಿಯನಾಂತೆಸೆದಿರ್ಪುವು
ಮೂಡಿದ ಮುಗುಳಲರ್ಗಳಿಂದೆ ಪೊಂದಾವರೆಗಳ್ ೪೯೪

ಕಾಂಚನಪುಷ್ಪಕೆ ಕಂಪುಮ
ನಂಚೆಯನೆ ಧಾತ್ರನೊಲ್ದು ಮಾಡಿದ ಬಗೆಯಿಂ
ಪಂಚಮೆನಲೆಸೆಯುತಿರ್ಪುವು
ಮಿಂಚುತ್ತ ಕುಸುಮಗಳ ಚಿನ್ನದಾವರೆಗಿಡುಗಳ್ ೪೯೫

ನಡೆತರೆ ವಸಂತಕಂ ಮುಂ
ಗಡೆ ಮಧುಕರನಿಕರದಿಂದಲೊದಱುತ ಬಹ ಚೆ
ಲ್ವಡೆದ ಕಹಳೆಗಳ ಪಾಂಗಿಂ
ಜೆಡಗಿನ ಪುಷ್ಪಗಳ ಮುದ್ದುಕುಣಿಕೆಗಳೆಸೆಗುಂ ೪೯೬

ಹಾರ ಪಟೀರ ಮರಾಳ ನೀ
ಹಾರ ಸುಧಾಂಬೋಧಿ ಚಂದ್ರತಾರೆಯ ಕಾಂತಿಗ
ಳೋರಣಿಸುತೊಲ್ದು ಕುಸುಮಾ
ಕಾರಮನಾಂತಂದವಾದ ದ್ರೋಣಗಳೆಸೆಗುಂ ೪೯೭

ಮನಸಿಜದಳವೆಯ್ತರುತಿರೆ
ಕನಕಚ್ಛತ್ರಂಗಳಲ್ಲಿಗಲ್ಲಿಗೆ ನೆಗಟಿಪ್ಪೋಲ್
ಘನತರ ವಿಶಾಲಪುಷ್ಪಗ
ಳನುವಿಂದಿಹ ಸೂರ್ಯಕಾಂತಗುಲ್ಮಗಳೆಸೆಗುಂ ೪೯೮

ತರುಣಿಯರ ಬಾಯಿಗೆಂಪಂ
ಸರಿಮಾಟ್ಪರ್ ಕವಿಗಳಾಗೆ ಪುಣ್ಯರೆನುತ್ತಂ
ಪರಿಹಾಸ್ಯಮಾಟ್ಪಿ ವಿಕಸಿತ
ಸರಸಪ್ರಸವಂಗಳಿಂದೆ ಬಂದುಗೆಯೆಸೆಗುಂ ೪೯೯

ಕತ್ತಲೆಯೊಳಿಡಿದ ತಾರೆಯ
ಮೊತ್ತವಿವೆಂಬಂತೆ ಮೆಱೆವ ಪೂಗಳ ಗೊಂಚಲ
ನೆತ್ತಲ್ ನೋಡಲ್ ತಳ್ತಿಸೆ
ವೃತ್ತೆ ತಮಾಲದ ಕುಜಂಗಳೆಸೆದುವು ಚೆಲ್ವಿಂ ೫೦೦

ಪನ್ನೀರ ಮುಕ್ಕುಳಿಸುತಂ
ಕನ್ನೆಯರುಗಿಯಲ್ಕೆ ಪೊಂಗಿ ಪೊಱಮಡುತ್ತಂ
ಚೆನ್ನೆಸಳಪೂಗಳಾಗುತ
ಬಿನ್ನಣದಿಂದಿರ್ಪವಲ್ಲಿ ಬಕುಳದ ಕುಜಗಳ್ ೫೦೧

ವನದೇವಿ ನೊಸಲೊಳಿಕ್ಕಿದ
ಮಿನುಗುವ ತಿಲಕಂಬೊಲೆಸೆವ ಪುಷ್ಪಗಳಿಂದಂ
ಮನಕನುರಾಗಮನಾಗಿಸು
ವನುವಿನ ತಿಲಕದ್ರುಮಂಗಳೇನೊಪ್ಪಿದುವೋ ೫೦೨

ನಾರಿಯರ ಕುಚದ ಸೋಂಕಿನ
ಪೂರಿತಪುಳಕಾಂಕುರಂಗಳಾದ ವಿಟಂಗಂ
ದೋರಗೆಯದಾದ ಕುಸುಮಿತ
ಗೋರಂಟಿಯ ಗಿಡುಗಳಿರ್ದುವಾ ತೋಂಟಗಳೊಳ್ ೫೦೩

ಸತಿಯರ ಪಾದಪಯೋಜದ
ಹತಿಗೊಂಡ ವಿಟರ್ಗೆ ಚಿಂತೆಯಿನಿಸಿಲ್ಲೆಂಬುದ
ಕ್ಷಿತಿಯೊಳ್ ತೋರ್ಪೊಲು ಪೂದಳಿ
ರತಿಶಯದಿಂದಿರ್ಪಶೋಕತರುಗಳ್ ಮೆಱೆಗುಂ ೫೦೪

ಸಕ್ಕರೆವಿಲ್ಲಗೆ ಸೆಣಸಿದ
ರುಕ್ಕಂ ಮುಱಿದಿಕ್ಕಲುಗ್ರಗಂಧದೊಳೆತ್ತಂ
ಚೊಕ್ಕಟದ ಪತ್ರೆಯಿಂದಂ
ಕಕ್ಕೊರಲೆಯ ಗಿಡಗಳಿರ್ದುವಾ ತೋಂಟಗಳೊಳ್ ೫೦೫

ಬಿರಿಯಿಗಳೆದೆಯುಮನಂಗಮ
ನರಿವಂದದ ಕರ್ಣವುಳ್ಳದಳಗಳಿನಿಂಪಂ
ಪರಿಮಳವ ದೆಸೆಗೆ ಬೀರುತ
ಲಿರುತಿರ್ಪುವು ಮಂಚಿಪತ್ರೆ ಪೂದೋಂಟಗಳೊಳ್ ೫೦೬

ನಾಸನೆಯೊಳಗಗ್ಗಳಮಿದು
ಲೇಸೆಂದೆನುತೆಲ್ಲ ಭೋಗಿಗಳ್ ಕೊಂಡಾಡಲ್
ದೇಸಿವಡೆದೊಪ್ಪಿದವು ವೈ
ಲಾಸದೊಳಂ ಪಚ್ಚೆಯಂಟು ಪೂದೋಂಟದೊಳಂ ೫೦೭

ಸುಜನರ ಶಿಶುಗಳ್ ತಮ್ಮಯ
ನಿಜಗುಣಮಂ ಬಿಡದೆ ಪುಟ್ಟ ಬಪ್ಪೊಲ್ ಗಂಧ
ವ್ರಜಯುತದಂಕುರದಿಂದಂ
ಋಜುಭಾವದೊಳಿರ್ಪುವಲ್ತೆ ಮುರುಗದ ಗಿಡುಗಳ್ ೫೦೮

ಕಾಲನೆಡೆವನೆಯನಿಕ್ಕಿದ
ಶೂಲದ ಕೊನೆಯಂತೆ ಮೆಱೆವ ಪತ್ರೆಗಳಿಂದೆ
ಲೋಲತೆವೆತ್ತೆಸೆದಿರ್ಪುವು
ಭಾಲಾಕ್ಷಗೆ ಪತ್ರೆಯಪ್ಪ ಬಿಲ್ವದಕುಜಗಳ್ ೫೦೯

ಸರ್ವಪ್ರಸೂನಗಳಿನಳಿ
ಪೀರ್ವುದು ಬಿಡದೆನುತಲಿದನೆ ನಿಕ್ಷೇಪಿಸಿದನೊ
ಕರ್ವಿಲ್ಲನೆಂಬ ಬಗೆಯಿಂ
ಬೇರ್ವರಿದೆಸೆದಿರ್ಪುವಲ್ಲಿ ಮುಡಿವಾಳಂಗಳ್ ೫೧೦

ಭುವನದೊಳುಳ್ಳ ತೆನೆಗಳ್
ತವೆ ತಮ್ಮಯ ಷೋಡಶಾಂಶಕೆಯ್ದದೆನಿಪ್ಪೋಲ್
ವನಸೌರಭಮಂ ಬೀರುತ
ದವನದ ಬೆಳಸುಳ್ಳ ಮುಡಿಗಳೇನೊಪ್ಪಿದುವೋ ೫೧೧

ಸಾವಿರ ಪೊಱಪೂಗಳೊಳಂ
ದೇವನರ್ಚಿಸಿದೊಡೆನಿತು ಫಲಮುಂಟನಿತಂ
ತೀವಿರ್ದೊಂದೆಲೆಯರ್ಧದೊ
ಳೀವ ಗುಣಾಧಿಕದ ತುಲಸಿಪತ್ರೆಗಳೆಸೆಗುಂ ೫೧೨

ಮೊದಲೊಳ್ ಪಡೆವೊಡೆ ಬೊಮ್ಮಂ
ಮೃದು ಪರಿಮಳ ವರ್ಣ ಮೂಜನೊಂದಾಗಿರೆ ಮಾ
ಡಿದನಪ್ಪುದೆಂಬ ಪೂಗಳ್
ಪುದುಗಿದ ಕಸ್ತೂರಿಜಾತಿಗಳ್ ಕಂಗೊಳಿಕುಂ ೫೧೩

ಕರಣತ್ರಯಶುದ್ಧದಿ ದೇ
ವರನರ್ಚಿಸಿದರ್ಗೆ ಮುಂದೆ ಮೋಕ್ಷದ ಬಟ್ಟೆಗೆ
ಚರಣಂಗಳಂತೆ ನವ ಪಾಂ
ಡುರಪುಷ್ಪಗಳೊಪ್ಪುತಿರ್ಪುವಾ ದ್ರೋಣಗಳೊಳ್ ೫೧೪

ಬಿರಿಮುಗುಳೊಳ್ ಮುಸುಂಬನಲೆದೊಯ್ಯನೆ ಕರ್ಣಿಕೆಯಂ ಕರ್ದುಂಕಿ ಕೇ
ಸರಮನೆಱಂಕೆಯಿಂ ಬಿಗಿದು ಬಂಡನುಣ್ಬರಮುಂಡು ತಳ್ತಿಸಟಿರ್
ಪೊರೆಯೊಳಡಂಗಿ ನುಣ್ಚರದಿ ಪಾಡಿದುದುನ್ಮದದಿಂ ಮದಾಳಿ ತಾ
ವರೆಯೊಳಗಿರ್ಪ ಲಕ್ಷ್ಮಿಯ ಮನಂಬಡೆವೆಕ್ಕಲಗಾಣನೆಂಬಿನಂ ೫೧೫
(ಮಲ್ಲಿನಾಥಪುರಾಣಂ ೬–೯೯, ಸೂಕ್ತಿಸುಧಾರ್ಣವಂ, ೧೦–೭೭

ಕಂಪಿನ ಹಾರವಂ ಶಿಶುವಿಗಿಕ್ಕಿ ರಂಜಗಳ ಜೊಟ್ಟನಿಟ್ಟು ನೀ
ರ್ಗಂಪಿನ ಪುಷ್ಪಮಂಜರಿಯ ತೊಟ್ಟಿಲೊಳೊಯ್ಯನೆ ತೀವಿ ಶೋಭೆಯಿಂ
ದಂ ಪದಪಿಂದೆ ಪಟ್ಟೆರಿಸಿ ಮಾರುತನಿಂದವೆ ತೂಗಿ ಜೋಗುಳಂ
ಪೊಂಪುಳಿಯೋಗೆ ಪಾಡಿದುವು ಬಾಣತಿದುಂಬಿಗಳಾ ವನಂಗಳೊಳ್ ೫೧೬

ಶಿವನರಿವೆಣ್ತನಂ ಹರಿಯಹಾದರವಬ್ಜಜನೊಲ್ದ ಲಜ್ಜೆ ಪೇ
ಟಿವೆ ನನೆವಿಲ್ಲ ಬಲ್ಲಹನ ವೀರಮನೆಂದನುರಾಗದಿಂದಮೋ
ದುವುವಲರಾದ ಕೇದಗೆಯ ಸುತ್ತಿಸಳೋಳಿಯನೆತ್ತಿ ಕುತ್ತಿಸಳ್
ಕವಳಿಗೆಯಾಗೆ ಭೃಂಗವು ಮನೋಭವರಾಜನ ವೀರವೃತ್ತಿಯಂ ೫೧೭
(ಅನಂತನಾಥಪುರಾಣಂ) ೧–೯೧

ಪೂಗಣೆಗೆತ್ತಿದಂತೆ ಪೊಗರಂ ಪೊಸಗಾಡಿಗೆಗೂಡಿದಂತೆ ಚೆ
ಲ್ವಾಗಿ ವಿಲೋಚನಕ್ಕೆ ವಿರಹಾನಳನಿಂ ಮಸಿವಣ್ಣಮಾಗಿ ಬಂ
ದೇಗಿ ವಿಯೋಗಿಚಿತ್ತಕತಿಕಾಮಶರಾಗ್ನಿಯೊಳಗ್ಗಿದಂತೆ ಪಾ
ಯ್ದೋಗರಗಂಪನುಂಡವೆಳೆಮಾವಿನ ಪೂವಿನೊಳುನ್ಮದಾಳಿಗಳ್ ೫೧೮
(ಲೀಲಾವತಿ ೯–೭೨)

ತೋರಿದುವಾದ ಮಲ್ಲಿಗೆಯ ಮೊಗ್ಗೆಗಳೊಳ್ ಮೊಗಮೂಱಿ ಬಿಟ್ಟು ಭೋ
ರ್ಭೋರೆನೆ ಪಾಯ್ದು ಬಂಡಿನೊಳೆ ಬೆಂಡೊಗೆದೊಯ್ಯನೆ ತೆಂಬೆಲರ್ ತೆಱಂ
ದೀರಿದುವಾದೆಱಂಕೆಗಳನೆತ್ತಿ ಮುಗುಳ್ತಿರೆ ಬೀಸಿಕೊಂಡೆಲ
ರ್ಗೀರನೆರಲ್ದು ಕಾಱಿಕಡಲಿಟ್ಟವು ಮತ್ತಮಧುವ್ರತಾದಿಗಳ್ ೫೧೯
(ಲೀಲಾವತಿ ೯ ೧೧೬)

ಸುರಭಿಸಮೀರಣಂಬೆರಸು ಜೇಗದೆ ಬಂದಲರ್ಗಣ್ಣ ಸನ್ನೆಯಿಂ
ಕರೆಯೆ ವಸಂತದೂತಿ ಸಹಕಾರನ ಕೈವಿಡಿದಿರ್ದ ಮಲ್ಲಿಕಾ
ಪರವಧುವಂ ವಿನೀಳಪರಿಧಾನಮನಾಕೆ ಮಧುಪ್ರಸಂಗಕಾ
ತರೆ ಮುಸುಕಿಟ್ಟವೋಲ್ ಮುಸುಱಿ ಪೀರ್ದುವು ಸೌರಭಮಂ ಮದಾಳಿಗಳ್ ೫೨೦
(ಮಲ್ಲಿನಾಥಪುರಾಣಂ ೬-೪೧ ; ಸೂಕ್ತಿಸುಧಾರ್ಣವಂ ೧೦-೭೬)

ಮುಗುಳ್ವಿಡಂ ಮುಗುಳ್ವಿಡಂ ಪೊಸಮ
ಲ್ಲಿಗೆಯಲರಂ ಸಿರಿಯ ದೇಸೆಯಂ ಕಂದರ್ಪಂ
ಪೊಗಟ್ವಿಂ ರತಿಗಂ ತಂಗಾ
ಳಿಗಮಳಿಗಂ ಗಿಳಿಗಮಿಂದುಗಂ ಕೋಗಿಲೆಗಂ ೫೨೧
(ಸೂಕ್ತಿಸುಧಾರ್ಣವಂ ೧೦-೮೨)

ಎತ್ತುಂಗೋಲಂ ವಿರಹಿಗೆ
ಚಿತ್ತಭವಂ ತೊಟ್ಟನಿಕ್ಕಿದಂತಿರೆ ಬನದಿಂ
[1]ದಿತ್ತುಪವನ[1]ಕ್ಕೆ ಪಾಱುವು
ವೆತ್ತಂ ಮಧುಮತ್ತಚಿತ್ತ ಷಟ್ಚರಣಂಗಳ್ ೫೨೨
(ಸೂಕ್ತಿಸುಧಾರ್ಣವಂ ೧೦-೮೦)

ರಾಗಪೆ ಕೂಡಿ ಝೇಂಕರಿಸಿ ಪುಷ್ಪರಸಂಗಳನುಂಡು ಸೊರ್ಕಿ ಬೆಂ
ಡಾಗಿ ತಳಿರ್ಗಳೊಳ್ ಕೆಡೆದು ಮಾಮರನಂ ಮುಸುಕಿಟ್ಟು [2]ನಲ್ಮೆಯಿಂ
ಬಾಗಿದಲರ್ಗೆ[2] ಬಿಂದು ನೆನೆ[3]ದಂಬುಜದೊಳ್[3] ವನಲಕ್ಷ್ಮಿಗೆತ್ತಿಯಿಂ
ಪೋಗೆ ಮನೋಜನೆತ್ತಿಸಿದ ಪೀಲಿಯ ಸತ್ತಿಗೆಯೋಲ್ ಮದಾಳಿಗಳ್ ೫೨೩
(ಸೂಕ್ತಿಸುಧಾರ್ಣವಂ ೧೦-೭೯)

ಆ ವನಗಂಧಕ್ಕೆಳಸಿಯೆ
ನೂನಂ ಮಧುಕರನಿಕಾಯಮೊಲ್ದನವರತಂ
ನಾನಾಮಂಜುಳನಿನದದೊ
ಳಾನಂದಂ ಮಿಕ್ಕು ಕಂಪನೀಂಟುತ್ತಿರ್ಕುಂ ೫೨೪

ಬಿಗಿಯಪ್ಪಿ ಪುಷ್ಪರಸಮಂ
ತೆಗೆದೀಂಟಿ ತುಳುಂಕಿ ತೂಱಿ ತೇಂಕಾಡಿ ಮನಂ
ಮಿಗೆ ಸೊರ್ಕಿ ಜಿನುಗಿ ಜೀವಿಸಿ
ಮುಘಮುಘಿಸಿತ್ತೊಂದು ಮಧುಕರಂ ಮಲ್ಲಿಗೆಯೊಳ್ ೫೨೫

---

[1]ಚಿತ್ತಗಗನ(ಸೂ) [2]ಜೋಂಗುಳಂ ತೂಗಿಯುರಲ್ಗೆ(ಸೂ) [3]ವಂಬರದೊಳ್(ಸೂ)

ಭದ್ರಮೆನಿಸಿರ್ದ ಕುಸುಮರ
ಸದ್ರವಮಂ ಪೀರ್ವ ತುಂಬಿಯೊಪ್ಪಿತು ಮದನಂ
ಮುದ್ರಿಸಿದಂಬಿನ ಲಕ್ಷ್ಮ್ಯ
ಮುದ್ರೆಯಿದೆಂಬಂತೆ ಪುಷ್ಪವಾಟಿಯೊಳೆತ್ತಂ ೫೨೬

ಮಿಱುಗುವ ತನ್ನ ಪೂಗಣೆಗಳೆಚ್ಚೆಡೆಯೊಳ್ ಪರಿವಲ್ಲಿ ಸಂದೆಗಂ
ಪಱಿಪಡಿವಂತು ನುಣ್ಗಱಿಗಳಿಂ ಗಱಿಗಟ್ಟೆಸುವೆನ್ನನಂಗಜಂ
ನೆಱೆ ಪೊಱಗಿಕ್ಕಿದಂ ಬನದಿನೆಂದುಱೆ ಕಂದಿ ಕಱಂಗಿದಂತೆ ಕಿ
ಕ್ಕಿಱಿಗಿಱಿದಿಪ್ಪವಾ ಬನದ ಕೇದಗೆಗಳ್ ಸುಟಿಯೇಱಿ ಸುತ್ತಲುಂ ೫೨೭
(ಧರ್ಮನಾಥಪುರಾಣಂ ೨-೬೧)

ಹಿಮರೋಚಿಃಕಳಿಕಾಕದಂಬಕಮನಿಂಬಿಂ ತಿರ್ದಿ ಮೇಳೈಸಿ ಕುಂ
ಕುಮದಿಂ ಭಾವಿಸಿ ಚಂದನಾಂಬುಗಳ ನೀರಂ ಪೊಯ್ದು ಹಾರೀತರ
ತ್ನಮಯೀಶುಕ್ತಿಯೊಳೊತ್ತಿ ಬಯ್ತನಜನೆಂಬಂತಾಯ್ತು ಪೂತೇೞ್ಗೆಯಿಂ
ಸುಮನಸ್ಸಾಯಕಶಸ್ತ್ರ[1]ಸಾರಭರಮಾ[1] ಸಂಕೇತಕಂ ಕೇತಕಂ ೫೨೮
(ಅನಂತನಾಥಪುರಾಣಂ ೯-೧೪, ಸೂಕ್ತಿಸುಧಾರ್ಣವಂ ೧೦-೨೦೫)

ಕುಸುಮಾಸ್ತ್ರಪ್ರಥಿತಾಜ್ಞೆಯಂ ತಲೆಯೊಳಾಂಪಂ ತನ್ನ[2]ನೇಕೀಗಳುಂ[2]
ಬಿಸುಟಂ ಬೂದಿಯ ಜೋಗಿ ಭೂತಗಣನಾಥಂ ಚರ್ಮವಾಸಂ ಕಪ
ರ್ದಿ ಸಮಂತೆಂದು ಮಧುಪ್ರಮತ್ತತೆ ಕರಂ ತಳ್ಪೊಯ್ವಿನಂ ಬೈದು ಪಾ
ಡಿಸುವಂತಿರ್ದುದು ಬಂದ ಕೇದಗೆ ನದದ್ಭೃಂಗಾಳಿಯಿಂ ಶೂಲಿಯಂ ೫೨೯
(ಸೂಕ್ತಿಸುಧಾರ್ಣವಂ ೧೦-೨೦೬)

ಭುವನದೊಳೆನ್ನ ಮುಟ್ಟದಲರಾವುದೆಱಂಕೆಯ ಗಾಳಿ ಮುಟ್ಟೆ ಕಂ
ದುವುವೆಸೞೊರ್ಮೆ ಪೀರಲೊಡಮಾಗಳೆ ಸೋರ್ವುವು ಕಂಪು ಸೋಂಕೆ ಕಂ
ದವು ದಳಮೆಯ್ದೆ ಪೀರೆ ತವದುಣ್ಮುವ ಸೌರಭಮೆಂದು [3]ಪೀರಲೆಂ
ದವಱೊಳೆ ಗೊಂದಣಂಗೊಳುತ[3]ಪಾಯ್ದುವು ಕೇದಗೆಯೊಳ್ ಮದಾಳಿಗಳ್ ೫೩೦
(ಅದಿಪುರಾಣಂ ೧೧-೧೨೦; ಸೂಕ್ತಿಸುಧಾರ್ಣವಂ ೧೧-೧೧)

ಗಱಿ ಮೂಡದಿರ್ದೊಡಱಿಯೆಂ
ಗಱಿ ಮೂಡಿದಾಗಳೊಮ್ಮೆ ತಲೆಗೆದಱಿ ಕರಂ
ಮೆಱೆವೀ ಪೊಂಗೇದಗೆಯೊ
ಳ್ಗಱಿಗಳ್ ಗಱಿಗಟ್ಟೆ ಮಾಱವೇ ಮಿಕ್ಕಲರಂ ೫೩೧
(ಜಗನ್ನಾಥವಿಜಯಂ ೧೪-೮೩)

---

[1]ನಾಭರಣಮಾ(ಸ) [2]ನಾರಿಂತಿದಂ(ಸೂ) [3]ದುಪೀರ್ದವಚರದೇಂತೆಱಂದಿರಿವು (ಸೂ)

ನನೆಯಂ ಮುದ್ದಾಡುತೆ ಬ
ಲ್ಲನೆಯಂ ಬಲವಂದು ಮುಗುಳೆನಾಲಿಂಗಿಸಿ ಕಂ
ಪಿನ ಬಿರಿಮುಗುಳಂ ಚುಂಬಿಸಿ
ಯನುನಯದಿಂದಲರನಲೆ[೧]ದವಳಿಗಳ ಬಳಗಂ[೧] ೫೩೨

(ಗಿರಿಜಾಕಲ್ಯಾಣಂ ೨-೬೬)

ದ್ರುತಕಂಟಕಮಾದೊಡವು
ನ್ನತಕೇತಕಿಯಲ್ಲಿಗೈದಿದವು ಮಧುಕರ ನೀ
ನತಿ ರಕ್ಷೆಯಾದೊಡಂ ಸ್ನೇ
ಹಿತರಂ ಕಾಯಲ್ಕೆ ಬಪ್ಪುದೇ ಧಾರಿಣಿಯೊಳ್ ೫೩೩

ಆ ವನದ ಪುರದ ನಡುವೆ ಸು
ಖಾವಹಮತಿವಿಭ್ರಮಂ ವಿಶಾಲಂ ಸರ್ವೋ
ರ್ವೀವರಶಸ್ತ್ರಾಭ್ಯಾಸನಿ
ಜಾವಾಸಂ ಸುಭಟಪಟಲಪಟುರವಭರಿತಂ ೫೩೪

(ಗಿರಿಜಾಕಲ್ಯಾಣಂ ೨-೭೩)

ತಳೆಯೊಳ್ ಪೋರ್ವ ಮದಾಂಧಸಿಂಧುರಚಯಂ ವೈಹಾಳಿಗೆಯ್ದಪ್ಪ ಶೂ
ಕಳವಾಹಾವಳಿ ಕೈದುವೆಂದಣೆದು ಕೂರ್ಪಂ ತೋರ್ಪ ಬಲ್ಲಾಳ್ಗಳಿ
ಕ್ಕೆಳದಂತಿಕ್ಕೆಳದೊಳ್ ಕಡಂಗಿ ಪಿಡಿದೌಂಕಲ್ ಬಲ್ಲ ಮಲ್ಲರ್ ಮನಂ
ಗೊಳಿಕುಂ ತನ್ನಗರೀಬಹಿಃಪುರವನಪ್ರಾಂತಪ್ರದೇಶಂಗಳೊಳ್ ೫೩೫

ನೆರೆದಿಭಶಿಕ್ಷಕರ್ ಕಲಿಸಲೇರ್ವಸನಂ ಕಲುತಿರ್ಪ ಗಂಧಸಿಂ
ಧುರಚಯವೇಱದಾತನ ಮನಂ ಮನವಾಗೆ ಮನೋಜವಂಗಳಿಂ
ಪರಿವ ಹಯಾಳಿ ಶಸ್ತ್ರವಿದರಬ್ಬರದಿಂ ನಿಜಶಸ್ತ್ರವಿದ್ಯೆಯಂ
ಪರಿವಿಡಿಗೆಯ್ವ ರಾಜಸುತರೊಪ್ಪುಗುಮಾ ಪುರಬಾಹಿರಾಂತದೊಳ್ ೫೩೬

(ಜಗನ್ನಾಥವಿಜಯಂ ೨-೧೭)

ಅರೆ ಎಡೆ ಹಸ್ತಿ ಶಿಕ್ಷಣವಿಚಕ್ಷಣರಿಂದರೆ ಅಶ್ವಶಿಕ್ಷೆಯಿಂ
ದರೆ ಉಱ ಮಲ್ಲವೇಷಮಹಿಷೋದ್ಧುರಯುದ್ಧರಸಪ್ರಿಯರ್ಕಳಿಂ
ದರೆ ಎಡೆ ಕಾರ್ಮುಕವ್ಯಸನಕರ್ಮಠಧನ್ವಿಜನಪ್ರವೇಶರಿಂ
ದರೆ ಎಡೆಯೆರ್ಮೆಯೊಂದುಪರಿಯಿಂ ಪುರಬಾಹಿರಮೊಪ್ಪಿತೋಱುಗುಂ ೫೩೭

(ಕಾವ್ಯಾವಲೋಕನಂ -೫೧-)

---

[೧]ದು ತೀವಿದವಳಿಗಳ್(ಅ)

ಹಯಶಿಕ್ಷಕರಿಂ ಗಜಶಿ
ಕ್ಷೆಯ ಭೀಕರದಿಂ ಶ್ರಮಂಗುಡುವ ಜೋದರ ಸಂ
ಚಯದಿಂ ನಯದಿಂ ವೈಹಾ
ಳಿಯ ಬಯಲೊಪ್ಪಿತ್ತು ಪಟ್ಟಣದ ವನದೆಡೆಯೊಳ್ ೫೩೮
(ಗಿರಿಜಾಕಲ್ಯಾಣಂ, ೨-೭೪)

ಕರಿಗಳ್ ಬಾಳ್ಗಂಬದೊಳೊ
ಪ್ಪಿರುತಿರ್ದ್ದುವು ಸುೞಿವ ನೀಲಮೇಘಾವಳಿಯಂ
ತರದಿಂ ಸೆಱೆಯಿಟ್ಟಂತಾ
ಗಿರಿಪತಿ ಸುರಪತಿಯ ಹಗೆಯ ಹರಿಬದ ಚಲದೊಳ್ ೫೩೯
(ಗಿರಿಜಾಕಲ್ಯಾಣಂ ೨-೭೫)

ಸುರಿವ ಮದಂ ಮಱೆ ಗಂಭೀ
ರರವಂ ಮೊೞಗಂಗಮಂಬುದಂ ದಂತಂ ನಿ
ಷ್ಠುರದಿಂದೆಱಗುವ ಸಿಡಿಲಾ
ಗಿರೆ ಕಾರ್ಗಾಲದವೊಲಿರ್ದುವಲ್ಲಿಯ ಕರಿಗಳ್ ೫೪೦
(ಗಿರಿಜಾಕಲ್ಯಾಣಂ ೨-೭೬)

ಎನ್ನಂತೆ ರತ್ನವಿತತಿಗೆ
ತಾಂ ನೆಲೆಯಾಯ್ತೆಂಬ ಸಮಗುಣಪ್ರಣಯದಿನಾ
ಮುನ್ನೀರ್ ಬಂದಪ್ಪಿದುದೆನೆ
ತನ್ನಗರಮನವುಳ ಪರಿಖೆ ಬಳಸಿದುದೆತ್ತಂ ೫೪೧
(ಚಂದ್ರಪ್ರಭಪುರಾಣಂ ೧–೧೧೫; ಸೂಕ್ತಿಸುಧಾರ್ಣವಂ ೪–೯೫)

ಹರಿ ಮತ್ಸ್ಯಾಕಾರದೊ[೧]ಳಿ
ದುರ್ಧರು[೧] ತಮನಂ ಹ[೨]ರಿ[೨]ಸಲೆಂದು ಪಾತಾಳತಳ
ಕ್ಕಿರದಿೞಿದ ತಾಣಮೆಂದೆನೆ
ಪುರದಗೞ್ತೆಸೆದಿರ್ದುದತುಳವತಿಗಂಭೀರಂ ೫೪೨
(ಗಿರಿಜಾಕಲ್ಯಾಣಂ ೨–೭೮)

ಬಡಪಾರ್ವಂ ಜಾಮದಗ್ನ್ಯಂ ತುಡೆ ವಿಶಿಖಮನೀರೆಟ್ಟಿತೆಣ್ಣಾಗವುದಂ ಪೆಯರ್ ೧೩೪
ಸೆಡೆದೋಡಿತ್ತೌರ್ಬಗಸ್ತ್ಯಂ ತನುಮುನಿ ಮುನಿದಾಪೋಶನಂಗೊಂಡೊಡೆತ್ತಂ
ಪುಡಿವಿಟ್ಟತ್ತೊಂದೆ ಧೀಂಕಾಡುದು ಕಪಿಯಣುವಂಗೆಂದಗೞ್ ವಾರ್ಧಿಯಂ ಕೀ
ೞ್ಪಿಡಿಕುಂ ನಾನಾಮರಾಳೀಬಹುಳಕಳಕಳಧ್ವಾನಸಂತಾನದಿಂದಂ ೫೪೩
(ಜಗನ್ನಾಥವಿಜಯಂ ೨–೧೮)

———

[೧]ಳದ್ಧುರ(ಅ) [೨]ತಿ(ಅ)

ಕಡಲೆನ್ನನಂದಿನಂದದೆ
ಕಡೆಯದಿರಿನ್ನೆಂದು ಬಂದು ಮುಂದರವಂ ಕಾ
ಲ್ಪಿಡಿವಂತೆ ಪೊನ್ನಕೋಂಟೆಯು
ನೆಡವರಿಯದೆ ಬಳಸಿ ಪುರದಗೞ್ ಸೊಗಯಿಸುಗುಂ ೫೪೪
(ಧರ್ಮನಾಥಪುರಾಣಂ ೨-೬೩)

ನುಸುಳಲ್ ಬಾರದು ಸಪ್ತಸಪ್ತಿಯ ವರೂಥಕ್ಕೆಂದುವೆಂಬಂತೆ ಕಾ
ಳಸಗೊಂಡಾಗಸದೊಳ್ ನಿಜ ಸ್ಥಗಿತ ರತ್ನದ್ಯೋತವಿಸ್ತಾರದಿಂ
ದೆಸೆಯಂ ಚಿತ್ರಿಸುತುಂ ವಿಶಾಲತರ ಶಾಳಂ ವಿಸ್ತೃತಾಟ್ಟಾಳಮು
ದ್ಧಸಮೀಚೀನ ಪಟಧ್ವಜಂ ಕನಕಕೋಟಾಮಂಡಲಂ ರಂಜಿಕುಂ
(ಜಗನ್ನಾಥವಿಜಯಂ ೧-೯೪)

ಸುರನಗಮಂ ನಿಮಿರ್ಚಿ ತೆರೆಸುತ್ತಿದನಲ್ತೆ ಸರೋಜಸಂಭವಂ
ಪುರಕೆನೆ ಚೆಲ್ವನಪ್ಪ ನವಹಾಟಕನಿರ್ಮಿತಮಪ್ಪ ಕೋಂಟೆ ಮು
ಟ್ಟಿರೆ ಮುಗಿಲಂ ರಥಕ್ಕೆ ಪಥಮಿಲ್ಲದೆ ಬಿಟ್ಟಿರಡುಂ ಕೆಲಂಗಳೊಳ್
ಚರಿಯಿಪನಲ್ಲದಂದು ರವಿಗೆತ್ತಣದುತ್ತರದಕ್ಷಿಣಾಯನಂ ೫೪೬
(ಚಂದ್ರಪ್ರಭಪುರಾಣಂ ೧-೧೧೪; ಸೂಕ್ತಿಸುಧಾರ್ಣವಂ ೪-೯೭)

ಸುಜನರ್ಗಾಶ್ರಯಮಾದಾ
ನಿಜ ಧಾತ್ರೀನಾರಿ ನಿಷ್ಠುರಾತ್ಮಕನೆನಿಪಾ
ಕುಜನಿಗೆ ಬುದ್ಧಿಯನುಸುರಲ್
ಋಜುತೆಯೊಳೇಟ್ದಂತೆ ಕೋಂಟೆ ನಭವಳ್ಳಿಱುಗುಂ ೫೪೭

ಪಳುಕಿನ ಕೋಂಟೆ ಬಟ್ಟದೆನೆ ಜೇವಿನದಂಡೆ ನಭಕ್ಕೆ ಮೀಱುವ
ಟ್ಟಳೆ ನಿಮಿರ್ದೇಱು ಪಾಱುವ ಪತಾಕೆ ವಿರಾಜಿಪ ಗೋಂಟು ಗೋಂಟನೊಳ್
ಬಳಸಿದ ಕೊತ್ತಳಂ ಸೊಗಯಿಪಾಳ್ವರಿ ಡೆಂಕಣಿ ಸಾಧಮಾಗಿಯ
ಗ್ಗಳಿಸುವ ಗೋಪುರಂ ಪುಲಿಮೊಗಂ ಮೆಱೆಗುಂ ಪುರದೊಳ್ ನಿರಂತರಂ ೫೪೮

ಮುತ್ತಿದ ಹರಿಣಚಯಂಗಳ
ಮುತ್ತಿಗೆಗಳಿಗಂಜದಧಿಕಧೈರ್ಯದೊಳವರಂ
ತುತ್ತಿಡುವ ಸುಪ್ರತಾಂಪ
ಬೆತ್ತಿಹವಾ ಪುರಕೆ ಪುಲಿಮೊಗಂಗಳವೆತ್ತಂ ೫೪೯

ಅಕಳಂಕೋಜ್ಜ್ವಳವಜ್ರನಿರ್ಮಿತ ಕವಾಟಂ ನೀಲರತ್ನಪ್ರಭಾ
ವಿಕಟಾಟ್ಟಾಳಮುದಗ್ರಮೌಕ್ತಿಕಮಯೋದ್ಯದ್ಗೋಪುರಂ ಕಣ್ಗೆ ಮಾ
ಣಿಕದಂತೊಪ್ಪುಮನಪ್ಪುಕೆಯ್ದು ಮಣಿಕೋಟಾಚಕ್ರಮೋರಂದದಿಂ
ಪ್ರಕಟಂಗೆಯ್ವುದು ತನ್ನದೊಂದು ರನ್ನವೊಲಿಲೆಂಬನ್ಯೂನವಿನ್ಯಾಸಮಂ ೫೫೦
(ಧರ್ಮನಾಥಪುರಾಣಂ ೨-೬೫)

ಪುರಮುಂ ಬಳಸಿರ್ದಗೞಿಂ
ಬರದುದ್ದಮನೆಯ್ದಿರ್ದ ವಪ್ರದೊಳಂ ಗೋ
ಪುರದಿಂ ಪೆರ್ಬಾಗಿಲ್ಗಳ್
ಮೆಱೆದಿರ್ಪವನಂತವಿಭವದಿಂ ಕಲ್ಯಾಣಂ ೫೫೧

ಕೋಟೆಯ ಕೊನೆದೆನೆ ನೆಗೆದಿಱೆ
ದಾಟದೆ ಕುದುರೆಗಳನವಱ ಕಾಲ್ ನಡುಮುಗಿಲೊಳ್
ನಾಟುತಿರೆ ದಿನಕರಂ ಬರ
ಲಾಟಿಸು[1]ತಂ[1] ದಕ್ಷಿಣೋತ್ತರಾಯಣ[2]ನಾದಂ[2] ೫೫೨
(ಲೀಲಾವತಿ ೭-೩)

ಮುಗಿಲಂ ಮುಟ್ಟುವ ಪೊಂಗೋಂ
ಟೆಗೆ ತರದಿಂ ತೆನೆಯ ತುಱುಗಲೆಡೆದೆಱಪುಗಳಿಂ
ಸೊಗಯಿಸಿದುವು ನಡೆಗೆಟ್ಟಿರೆ
ಭಗಣಂ ಸಲೆ ಬಟ್ಟೆಗೊಡುವವೋಲ್ ಪುರರಾಜಂ ೫೬೩
(ಲೀಲಾವತಿ ೭-೪)

ತೂಗಿದಡಮರಾವತಿ ಲಘು
ವಾಗಿ ನಭಕ್ಕೊಗೆದುದಂಜಿ ಪೊಕ್ಕುದು ರಸೆಯಂ
ಭೋಗವತಿ ತೆಗೆದು ನಾಟ್ಕಿಡಿ
[3]ಯೋ[3]ಗಿರ್ದಪುದ[4]ಳ್ತೆ[4] ತನಗೆನಿಪ್ಪುದು ನಗರಂ ೫೫೪
(ಸೂಕ್ತಿಸುಧಾರ್ಣವಂ ೪-೯೯)

ಅದಱೊಳ್ ಪುಟ್ಟಿದ ಗಂಡರೆಲ್ಲಮತಿವೀರರ್ ಪೆಂಡಿರೆಲ್ಲಂ ವಿಳಾ
ಸದ ಸೌಭಾಗ್ಯದ ಸೀಮೆಗಳ್ ಕಿಱುಳರೆಲ್ಲಂ ಪಂಡಿತರ್ ಸೆಟ್ಟಿವ
ಟ್ಟೆದರೆಲ್ಲಂ ಚಾಗಿಗಳ್ ಬದಗರೆಲ್ಲಂ ಭೋಗಿಗಳ್ ಗಾಂಪರುಂ
ಚದುರರ್ ಲೆಂಕರುಮಾಯಕಾಱರಥಮವ್ಯಾಪಾರರುಂ ಧಾರ್ಮಿಕರ್ ೫೫೫
(ಅನಂತನಾಥಪುರಾಣಂ ೧೧-೧೨ ; ಸೂಕ್ತಿಸುಧಾರ್ಣವಂ೪-೧೦೨)

———

[1]ವಂ(ಅ) [2]ಯುಗದೊಳ್(ಅ) [3]ಯಾ(ಸೂ) [4]ಳತೆ(ಸೂ)

ಬಡತನಮೆಂಬುದು ನಡುವಿನೊ
ಳೆಡೆಗಿಱುವುದು ಬಿಗಿದ ಮೊಲೆಯೊಳತಿಕುಟಿಲತ್ವಂ
ಮಡದಿಯರ ಕರುಳೊಳಲ್ಲದೆ
ಪಡಿವಾತೇಂ ಜನರ ದೆಸೆಯೊಳಿಲ್ಲಾ ನಾಡೊಳ್ ೫೫೭

(ಸೂಕ್ತಿಸುಧಾರ್ಣವಂ ೪-೨೦)

ನಯಮುಳಿವಟ್ಟ ಜವ್ವನದ ರೂಢಿಯ ಗಾಡಿಯ ಪೆಂಡಿರೆಲ್ಲಮ
ಲ್ಲಿಯೆ ಸಿರಿಗೊಪ್ಪಮಂ ಪಡೆದ ಚಾಗದ ಭೋಗದ ಗಂಡರೆಲ್ಲಮ
ಲ್ಲಿಯೆ ಪೆಸರಾನೆಯುಂ ಕುದುರೆಯುಂ ಪೆಸರಾದ ಸಮಸ್ತವಸ್ತುವ
ಲ್ಲಿಯೆ ಪೆಱತೊಂದು ಪಟ್ಟಣದೊಳಿಲ್ಲೆನೆ ಪಟ್ಟಣಮೊಪ್ಪಿ ತೋಱುಗುಂ ೫೫೮

(ಸೂಕ್ತಿಸುಧಾರ್ಣವಂ ೪-೧೦೩)

ಘನತರಮಾದ ಕತ್ತುರಿಯ ನೀರ್ದಳಿಪಂ ಪುದಿದಿರ್ದ ತೋರಮು
ತ್ತಿನ ಕಡೆತಳ್ತ ಹೇಮಮಯಪುಷ್ಪದ ಪೂವಲಿ ನೀಳ್ದ ಚೀನ ಕೇ
ತನತತಿ ಮಾಲೆಗೊಂಡ ಮಣಿದೋರಣಮೆಂಬಿವು ಬೀದಿಬೀದಿಯೊಳ್
ಮನೆಮನೆಯೊಳ್ ವಿರಾಜಿಸೆ [೧]ವಿಚಾರಿಸುತಿ[೧]ರ್ಪುವು ತತ್ಪುರಾಂತರಂ ೫೫೯

(ಜಗನ್ನಾಥವಿಜಯಂ ೯-೯೭)

ಪೊಂಗಳಸಂಗಳನೆಸೆವು
ತ್ತುಂಗಧ್ವಜತೋರಣಂಗಳಿಂ ಸೊಗಯಿಪ ಕೂ
ಟಂಗಳವೆಲ್ಲಂ ನಾಡೆ ಮ
ನಂಗೊಳಿಪುವು ಪುರದ ರಮ್ಯ ಹರ್ಮ್ಯಚಯಂಗಳ್ ೫೬೦

(ಕಾವ್ಯಾವಲೋಕನಂ ೯೯ ; ಸೂಕ್ತಿಸುಧಾರ್ಣವಂ ೪-೧೦೮)

ಮದನವಿಕಾರಮಂ ಮೆಱೆವ ಪಾರಿವಮಿಲ್ಲದ ರಾಜಕೀರಮಿ
ಲ್ಲದ ನೆಲೆಮಾಡಮಿಲ್ಲದ ನೆಗಱ್ತಗೆ ನೇಱಿದ ಪೊನ್ನಘಂಟೆಯಿ
ಲ್ಲದ ತಳಿರುಯ್ಯಲಿಲ್ಲದ ಲತಾಗೃಹಮಿಲ್ಲದ ಗೊಟ್ಟಗಾಣರಿ
ಲ್ಲದ ಕಡೆಪಟ್ಟ ಸೂಳೆವನೆಯಿಲ್ಲೆನೆ ತತ್ಪುರಮೊಪ್ಪಿ ತೋಱುಗುಂ ೫೬೧

(ಮಲ್ಲಿನಾಥಪುರಾಣಂ ೨-೫೭ ಸೂಕ್ತಿಸುಧಾರ್ಣವಂ ೪-೧೩೫)

ನೆಲೆಮಾಡಂಗಳನೋಳಿವಟ್ಟ ನೃಪಗೇಹಂ ವಸ್ತುವಂ ಕೊಳ್ವ ಬ
ಲ್ಲುಲಿಯಿಂ ಘೂರ್ಣಿಸುವಾಪಣಂ ಕಳಶದಳ್ಕೈಱಿಂ ಮುಗಿಲ್ಮುತ್ತುಗ
ಳ್ಕಿಱಿಯುಂ ಸೂಸುವ ದೇಗುಲಂ ತಪಕೆ ತಪ್ಪಂ ಮಾಟ್ಪ ವಾರಾಂಗನಾ
ನಿಲಯಂ ನೋಟ್ಪರ ಕಣ್ಗೆ ರಯ್ಯಮೆನೆ ಪೆಂಪಂ ಪೆತ್ತುದಾ ಪಟ್ಟಣಂ ೫೬೨

---

೧ ವಿರಾಜಿಸು(ಅ)

ವಾರಿಧಿ ತನ್ನಗಟಿರ್ ತನಗೆ ರೈವತಶೈಲಮುಪಾಂತಶೈಲಮಂ
ಭೋರುಹಲೋಚನಂ ತ್ರಿಭುವನಪ್ರಭು ತನ್ನಧಿನಾಥನೆಂದೊಡಿ
ನ್ನಾರಭಿವರ್ಣಿಸಲ್ ನೆಱಿವರೆಂಬಿನಮಿರ್ದುದುದಗ್ರಗೋಪುರಂ
ದ್ವಾರವತೀಪುರಂ ಜಿತಸುರೇಂದ್ರಪುರಂ ವಸುಧಾಂಘ್ರಿನೂಪುರಂ ೫೬೩

(ಜಗನ್ನಾಥವಿಜಯಂ ೯-೮೫ ; ಸೂಕ್ತಿಸುಧಾರ್ಣವಂ ೪-೧೦೧)

ತಾ ಕಡುಪೆಂಪನಾಂತ ನಿಜನಂದನ ಬಂಧುರ ಗಂಧಪುಷ್ಪಮಾ
ಲಾಕುಲ ಷಟ್ಪದಾಳಿ ಕುರುಳೋಳಿಗಳಂತೆ ಬೆಡಂಗನೀಯೆ ಶೋ
ಭಾಕರಮಾದ ತದ್ವಿಷಯವಲ್ಲಭೆಗಂಗಜರಾಜನಿತ್ತ ಚೂ
ಡಾಕಮನೀಯ ರತ್ನಮೆನೆ ರತ್ನಪುರಂ ಕರಮೆತ್ತಿ ತೋಱುಗುಂ ೫೬೪

ಮಿಳಿರ್ವ್ರತ್ತುಂಗಧ್ವಜಂ ಮಾರ್ಪೊಳೆಯೆ ಜಲಚರವ್ರಾತಮೆಂಬಂತೆ ಪೇರ
ಟ್ಟಳೆಗಳ್ ತಳ್ತೆತ್ತಲುಂ ಬಿಂಬಿಸೆ ಬಹಳ ಬಹಿತ್ರಾಳಿಯೆಂಬಂತೆ ಕೋಟಾ
ವಳಯುಪ್ರೋತಪ್ರದೀಪೋಜ್ವಳಮಣಿಯ ನೆಟಿಲ್ ಪರ್ವತೌರ್ವಾಗ್ನಿಯಂತಾ
ಗಳುಮಂಭೋರಾಶಿಗೆತ್ತಾರ್ದೆಱಿಗಿದಪುದದಭ್ರಾಭ್ರಮುಭ್ರಾಂಧ್ವದಿಂದಂ ೫೬೫

(ಧರ್ಮನಾಥಪುರಾಣಂ ೨-೬೪)

ಮನೆಮನೆಗೆಯ್ದೆ ಚೆನ್ನೆಸೆವ ರನ್ನದ ಸೂಸಕಮಿಟ್ಟ ಚೆನ್ನಕೇ
ತನಮುಳವಟ್ಟ ಪೊಂಗಳಸದೋಳಿ ಮನಂಗೊಳೆ ಬೀದಿಬೀದಿಯೊಳ್
ಕನಕದ ತೋರಣಂ ತಳಿದ ಕತ್ತುರಿನೀರ್ ದೊರೆವೆತ್ತ ತೋರಮು
ತ್ತಿನ ಕಡೆ ಪೂರ್ಣಪುಷ್ಪಬಲಿ ಪಿಂಗದೆ ಕಣ್ಗೊಳಿಸಿರ್ಪುದಾ ಪುರಂ ೫೬೬

(ಧರ್ಮನಾಥಪುರಾಣಂ ೨-೭೦)

ಹಯರತ್ನಂ ಗಜರತ್ನಮುತ್ತಮಗುಣಸ್ತ್ರೀರತ್ನಮುರ್ವೀಪತಿ
ಪ್ರಿಯರತ್ನಂ ದೊರೆವೆತ್ತ ಸತ್ಪುರುಷರತ್ನಂ ತಾನಿದರ್ಕಾವಗಂ
ನಿಯತಸ್ಥಾನಮೆನಿಪ್ಪುದೆಂದು ಪದೆದಿತ್ತಂ ಚಿತ್ತದೊಳ್ ಮಾಡಿ ನಿ
ಶ್ಚಯಮಂ ರತ್ನಪುರಂಪಲೆಂದು ಚತುರಾಸ್ಯಂ ಪ್ರೇಮದಿಂ ನಾಮಮಂ ೫೬೭

(ಧರ್ಮನಾಥಪುರಾಣಂ ೨-೧೪೦)

ಕುಸುಮಾಕರದಾಗರಮೆನೆ
ಕುಸುಮಾಯುಧನೆಂದುಮಿರ್ಪ ನೆಲೆವನೆ ಜಗದೊಳ್
ಕುಸುಮಸುಕುಮಾರಿಯರ ಸೌ
ಖ್ಯಸದನಮೆನೆ ಮಿಸುಪುದಸದಳಂ ಕುಸುಮಪುರಂ ೫೬೮

(ಲೀಲಾವತಿ ೬-೧೩೦)

ಪ್ರಕಟಂಬೆತ್ತಿರ್ಪ ಪೊಂಗೋಂಟೆಯ ತೆನೆಗಳೆಸಟಿರ್ ಕೇಸರಂ ಸೌಧಶಾಲಾ
ನಿಕರಂ ರಾಜಾಲಯಂ ಕರ್ಣಿಕೆ ವಿವಿಧಪುರಂಧ್ರೀಲಸತ್ಸೌಕುಮಾರ್ಯಂ
ಮಕರಂದಂ ವಂದಿವೃಂದಂ ಮಧುಕರಪಟಲಂ ತಾನೆನಲ್ಕೊಪ್ಪುಗುಂ ಸಾ
ರ್ಥಕನಾಮಂ ರಂಜಿಸಿರ್ಕುಂ ಕುಸುಮಪುರಿ ಜನಖ್ಯಾತಿಯಿಂದಂ ನಿತಾಂತಂ ೫೬೯

ಅತನು ಪುರಾಧಿಪಂ ತಳವರಂ ಶಶಿ ಪೆರ್ಗಡೆ ಮಂದಮಾರುತಂ
ರತಿ ನಗರಾಧಿದೇವತೆ ವಸಂತನಶೇಷಗುಣಪ್ರಬೋಧಕಂ
ಕೃತಕ ನಗಾಳಿ ಕೋಂಟೆ ಮಕರಂದರಸಂ ನಿಧಿಯಾದ ತತ್ಪುರ
ಸ್ಥಿತಿಯ ವಿಳಾಸಮಂ ಪಡೆದು ಬಣ್ಣಿಸುವಂ ಶುಕರೂಪನಲ್ಲನೇ ೫೭೦

ಭೂವಳಯಕ್ಕೆ ನೂತ್ನ ಮಣಿದರ್ಪಣದಂತೆ ಲಸದ್ವಿಭೂತಿಸಂ
ಭಾವಿತ ನಿರ್ಮಲ ಪ್ರಚುರವೃತ್ತವೆನಿಪ್ಪ ಜನಪ್ರಸನ್ನಸೌ
ಖ್ಯಾವಿವರಂ ನಿಮಿರ್ಚಿ ನವರತ್ನಸುವರ್ಣವಿಕೀರ್ಣಮಪ್ಪ ಹ
ರ್ಮ್ಯಾವಳಿಯಿಂ ವಿಚಿತ್ರವೆನೆ ರಂಜಿಸುತಿರ್ಪುದವಂತಿಕಾಪುರಂ ೫೭೧

ಮನೆಮನೆಗಳ್ಗೆ ರಂಜಿಸುವ ಪೊಂಗಳಸಂ ಮಿಗೆ ಕೇರಿಕೇರಿಯೊಳ್
ಬಿನದದ ಶಸ್ತ್ರಶಾಸ್ತ್ರಪರಿಚಿಂತನೆಯುನ್ನತ ರಾಜವೇಶ್ಮದೊ
ಳ್ಪಿನ ನವರತ್ನದುಪ್ಪರಿಗೆಯೊಳ್ ನಿಜಲೀಲೆಯೊಳೊಪ್ಪುತಿಪ್ಪ ಪ
ದ್ಮಿನಿಯರ ಸಂಕುಳಂ ಮೆಱೆವಿನಂ ಪೆಸರ್ವೆತ್ತುದು ನೋಡೆ ತತ್ಪುರಂ ೫೭೨

ವಸುಧಾದೇವಿಯ ನೀಳ್ದ ತೋಳ್ಗಳೆನಿಸಲ್ ಸೋಮಾರ್ಕಸದ್ವೀಧಿ ರಂ
ಜಿಸೆ ನಾನಾವರರತ್ನಹೇಮಕಳಸಂ ಸ್ವರ್ಣಾದ್ರಿಯಂ ಸ್ಪೈತು ಸೋ
ಲಿಸುವಂತೊಪ್ಪೆ ನಿಮಿರ್ಕೆಯುಪ್ಪರಿಗೆಗಳ್ ತಾರಾದ್ರಿಯಂ ಪೋಲ್ತು ಪೆಂ
ಪೆಸೆಯಲ್ ನಿತ್ಯವಿಳಾಸದಿಂ ಮಿಥಿಳೆಯೆಂಬಾ ಪೌರಿ ತಾನೊಪ್ಪುಗುಂ ೫೭೩

ಏಪೊಗಟಿಂಗರಾಜವಿಷಯಾಂತದೊಳೊಪ್ಪುವ ಕಾವ್ಯಮಂಗಳ
ಶ್ರೀಪದದಿಂ ಲಸತ್ತ್ರಿದಿವಸೌಪಪೆ (?) ದೊಗ್ಗಿನನಂತಭೋಗಶಾ
ಖಾಪರಿಪೂರ್ಣದಿಂ ಭುಜಗಮಂದಿರಮಂ ಮಿಗೆ ಪೋಲ್ತು ಕೊಡೆ ಚಂ
ಪಾಪುರಮೊಪ್ಪುಗುಂ ಸಕಲಸಂಪದಸೌಖ್ಯವಿಳಾಸದೇೞ್ಗೆಯಿಂ(?) ೫೭೪

ದೇಶದ ಸೊಂಪಿನಿಂ ಜನದಸಂಪದದಿಂ ದನಧಾನ್ಯದೇೞ್ಗೆಯಿಂ
ಕೋಶಸಮಗ್ರದಿಂದಧಿಕದುರ್ಗಗಳಿಂ ಚತುರಂಗಸೇನೆಯಿಂ
ಮಾಸದ ಕೀರ್ತಿಯಿಂತವು ಸುಭಾವಗುಣಾನ್ವಿತಮಾಗಿಯಾವಗಂ
ವಾಸವನೂರಿನಂತೆಸೆಯುತಿರ್ಪುದು ನೋಡೆ ವಸಂತಿಕಾಪುರಂ ೫೭೫

ಪರಿಖೆ ಸರೋವರಂ ಪರಮಕೋಂಟೆಯ ಸುತ್ತಗೆಟುಳ್ಳೆಸಟ್ ಮಣಿ
ಸ್ಫುರಿತ ಗೃಹಾಳಿ ಕೇಸರಚಯಂ ಘನಕರ್ಣಿಕೆ ರಾಜಮಂದಿರಂ
ವರಕಲಶಂ ತದಗ್ರರುಚಿರೋನ್ನತ ಬೀಜಸಮೂಹವಾ ಪುರಂ
ಸರಸಿಜದಂತೆ ಸದ್ಗುಣಕೆ ಲಕ್ಷ್ಮಿಗೆ ತಾಣಮದಾಗಿ ರಂಜಿಕುಂ ೫೭೬

ವರಭೋಗಾವತಿ ಪಾದವೊತ್ತೆ ಕೇಳಗಾಯ್ತಾ ಹಾ ಸುವರ್ಣಾವತೀ
ಪುರವಾಪೋಯೊಡವಿಕ್ಕಲೆಂದು ಬಟಿಯಿಂ ಸಾಧೋಪಿತಾಚೆಲ್ವನಾಂ
ತುರು ಭಾಸ್ವತ್ಸ್ವಮನಃಪುರಂ ಮುಡಿಯನೆಂತುಂ ಸಿಂಗರಂಗೆಯ್ಯೆ ಬಂ
ಧುರದಿಂದಗ್ರಕೆ ಪೋಯ್ತೆನಲ್ಕೆ ಪುರಮೆಂಬಾ ಶ್ರೀಗದೇಂ ಭೋಗ್ಯಮೋ ೫೭೭

ಬಿದಿ ಮನದಟ್ತಿಯಿಂ ಭುಜಗಲೋಕದ ಮಾನವಲೋಕದಿಂದ್ರಲೋ
ಕದ ಬಹುಸಾರವಸ್ತುಗಳನೊಂದೆಡೆಗೆಯ್ದಿ ತೆರಳ್ಚಿ ತಂದು ಮಾ
ಡಿದನತಿರಮ್ಯಮಂ ಪುರವನೆಂಬಿನೆಗಂ ಯಮುನಾತಟಪ್ರದೇ
ಶದೊಳೆಸೆದಿರ್ಪುದಲ್ತೆ ಮಧುರಾಪುರಮರ್ಧಶಶಾಂಕಸನ್ನಿಭಂ ೫೭೮
(ಜಗನ್ನಾಥವಿಜಯಂ ೨–೧೨)

ಬಿಸಿಲಂ ಪೊಂಗಳಶಂಗಳಚ್ಚವೆಳಗಿಂ ತಳ್ಕೈಸುತುಂ ತಳ್ತು ಚುಂ
ಬಿಸುತುಂ ವ್ಯೋಮಮನುರ್ಚಿ ಕೇತುಚಯದಿಂ ನೀಲಾಭ್ರಮಂ ಮೇಲೆ ನಿ
ರ್ಮಿಸುತಂ ಧೂಪಜಧೂಮದಿಂದೆ ಪಟಹಪ್ರಧ್ವಾನದಿಂ ಕೂಡೆ ಘೂ
ರ್ಣಿಸುತುಂ ದೇವಕುಳಂ ಕುಳಾದ್ರಿಕುಳದಂತಲ್ಲಿರ್ಪುವವ್ಯಾಕುಳಂ ೫೭೯
(ಲೀಲಾವತಿ ೭–೬)

ಪೊಳೆವ ಬಿಸಿಲ್ಗೆ ಬೆಳ್ಪನೆಳದಿಂಗಳ ಕಾಂತಿಗೆ ಕೆಂಪನಿತ್ತು ಕ
ಣ್ಗೊಳಿಸುವ ಮೌಕ್ತಿಕಧ್ವಜಮರೀಚಿಗಳಿಂದೆ ಸಹಸ್ರಕಾಂಚನೋ
ಜ್ವಳ ಕಳಶಂಗಳಿಂದಮಿರುಳಂ ಪಗಲುಂ ತಡವಿಕ್ಕೆ ಕೈರವಂ
ಗಳ ಕಮಲಂಗಳುಳ್ಳಲರ್ಪುದಂ ತಡವಿಕ್ಕುವುದಾ ಜಿನಾಲಯಂ ೫೮೦
(ಲೀಲಾವತಿ ೮–೭೦)

ಸತತಂ ಸಂಗೀತ ಚಿತ್ರಂ ವಿವಿಧಸಕಲವಾದ್ಯೋತ್ಸವಂ ನೃತ್ಯವಿಭ್ರಾ
ಜಿತ ಪಾರ್ಶ್ವಂ ಧೂಪಧೂಮಕ್ಷುಭಿತವಖಿಳಪೌರಾಣಮಂತ್ರಂ ನವೋದಂ
ಚಿತ ತಮ್ಮ ಸ್ಥಾನನುಸ್ನಾ ನಸುಮಯಕಲಶಂ ಪೆಂಪುವೆತ್ತಿರ್ಪ ದೇವಾ
ಯತನಂ ಕಣ್ಗೊಪ್ಪುಗುಂ ತತ್ಪುರವರದೊಳನೂನ ಪ್ರಸಾದಂಗಳಿಂದಂ ೫೮೧

ಒದವಿದ ಮುತ್ತಿನ ಮಾಣಿ
ಕ್ಯದ ಗೋಮೇಧಿಕದ ಪುಷ್ಯರಾಗದ ವೈಡೂ
ರ್ಯದ ವಜ್ರದ ಪಚ್ಚೆಯ ಪವ
ಳದ ನೀಲದ ಕಲಶದಿಂ ಶಿವಾಲಯಮೆಸೆಗುಂ ೫೮೨

ತರುಣೀನೇತ್ರಪ್ರಭಾಕೌಮುದಿಯಿನುದಿರ್ವ ಚಂದ್ರೋಪಳಾಗಾರಬಿಂದೂ
ತ್ಕರದಿಂದಂ ನಾಂದು ನೀಡುಂ ಶುಕಹರಿತ ಹರಿದ್ವೇದಿಕಾಶಾಡ್ವಲಕ್ಕಾ
ತುರಿಸುತ್ತುಂ ನರ್ತಕೀಕೇಕರತರುಣತಟಿನ್ಮಂಜರೀಸ್ಮೇರನೀಳೋ
ಪರಿಮುಪ್ರಾಸಾದಸಂಗೀತಕಮುರಜರವಕ್ಕಾಡುಗುಂ ಕೇಕಿವೃಂದಂ ೫೮೩

(ಲೀಲಾವತಿ ೭-೨೫)

ನೀಲದ ಪಚ್ಚೆಯ ಪವಳದ
ಶಾಲೆಗಳ ಮರೀಚಿಯುಂ ಪುರಂದರ ಧನುಗೆ
ತ್ತಾಲೋಕಿಸಿ ನವನರ್ತನ
ಲೀಲೆಯನೊಡರಿಚುವವಲ್ಲಿ ಪುರದ ನವಿಲ್ಗಳ್ ೫೮೪

(ಗಿರಿಜಾಕಲ್ಯಾಣಂ ೨-೯೬)

ಬೆಳಬೆಳಪ ಸುಧಾಧವಳಿತ
ನಿಳಯಂಗಳ ಧವಳಕಾಂತಿಯುಂ ಕೌಮುದಿಗೆ
ತ್ತೆಳಸುತಲಿರ್ಪುವು ಪಗಲುಂ
ಬಳಸಿ ಚಕೋರಾಳಿ ಪುರದ ನಿಳಯದೊಳೆಲ್ಲಂ ೫೮೫

(ಗಿರಿಜಾಕಲ್ಯಾಣಂ ೨-೯೭)

ನೆಗೆದ ಪತಾಕಾಪಟಕೋ
ಟಿಗಳೊಪ್ಪಿದುವಾವಗಂ ತೊಟಲ್ದು ಬಟಲ್ದಾ
ಖಗನ ತುರಂಗಪ್ರತತಿಗೆ
ಗಗನಾಂಗನೆ ಬೀಸುತಿರ್ಪ ವೀಜನತತಿಯೋಲ್ ೫೮೬

(ಗಿರಿಜಾಕಲ್ಯಾಣಂ ೨-೮೦)

ಬಗೆವೊಡಮರಾವತಿಗೆ ಮಿಥಿ
ಳೆಗೆಯುದಯನಗಕ್ಕೆಯುಜ್ಜಯಂತಿಗೆ ಮಿಗಿಲಾ
ನಗರಿ ಗುಣೋನ್ನತಿಯಿಂದಂ
ದ್ವಿಗುಣಂ ತ್ರಿಗುಣಂ ಚತುರ್ಗುಣಂ ಪಂಚಗುಣಂ ೫೮೭

(ಗಿರಿಜಾಕಲ್ಯಾಣಂ ೨-೮೧)

ಶ್ರುತಿಘೋಷಂ ಮಂತ್ರಘೋಷಂ ನತಜನಜಯಘೋಷಂ ಪುರಾಣಪ್ರಘೋಷಂ
ಸ್ಮೃತಿಘೋಷಂ ಗೀತಘೋಷಂ ಪರಶಿವವಿಮಳಜ್ಞಾನಸಂವಾದಘೋಷಂ
ಕೃತಿಘೋಷಂ ಯಜ್ಞಘೋಷಂ ಪರಿಣಯನಮಹೋತ್ಸಾಹವಿಸ್ತಾರಘೋಷಂ
ಸತತಂ ತೀವಿರ್ದುದಂತಾ ಪುರದೊಳಭವಗೇಹಾವಳೀವಾದ ಘೋಷಂ ೫೮೮

(ಗಿರಿಜಾಕಲ್ಯಾಣಂ ೨-೯೯)

ಪೊಳೆದು ಪೊಡಟ್ಟು ಪರ್ಬಿದ ಸುಧಾಂಶುಗಳಾಗಸಗಂಗೆ ಪೋಗೆ ಬ
ಳ್ವೆಳಬಳೆದಂತೆ ಪಜ್ಜಳಿಸೆ ಬೆಳ್ಮುಗಿಲೇಂ ಬಳಸಿರ್ದುದೋ ಹಿಮಾ
ಚಳಮನೆನಲ್ಕೆ ಸುತ್ತಿಱಿದ ರಾಣಿಯವಾಸದ ಬಳ್ಳಿಮಾಡದಿಂ
ತೊಳಗುತಮಿರ್ಪುದಲ್ಲಿ ಕರುಮಾಡಮನೇಕತಳೋನ್ನತೋದಯಂ ೫೮೯

(ಲೀಲಾವತಿ ೭-೨೭)

ಅನಿತೆಸೆದುವು ಕರುಮಾಡದ
ಕೊನೆವೆಳಗುಗಳಂಗನೆಯರ ನಯನೋತ್ಪಲನಂ
ಜನದಸಿರಿ ತೊಲಗದಂತರ
ಮನೆಯುಂ ಬೆಳ್ದಿಂಗಳಿಂದೆ ಬಾಸಣಿಸಿದವೋಲ್ ೫೯೦

(ಲೀಲಾವತಿ, ೭-೨೮)

ಪಿರಿದುಂ ನಲಿವುದು ದೀಹದ
ಹರಣಂ ಶಶಿಬಿಂಬದೊಳಗೆ ಸಿಲ್ಕಿದ ಹರಿಣಂ
ಕರುಮಾಡದಿನಿಱಿದಂತಿರೆ
ಮರಕತ ಕುಟ್ಟಿಮ ವಿಶಾಲ ಶಾಡ್ವಲತಲದೊಳ್ ೫೯೧

(ಲೀಲಾವತಿ, ೭-೨೯)

ನಯಮಳವಟ್ಟ ಕುಟ್ಟಿಮಮೆ ನೀಲಮಯಂ ನಿಱುಪೊಂದಿ ನೀಳ್ದ ಭಿ
ತ್ತಿಯೆ ಡೊರೆವೆತ್ತ ಮೌಕ್ತಿಕಮಯಂ ತಳಗಂಭಮೆ ತಳ್ತ ವಜ್ರಸಂ
ಚಯಮಾಗೆ ರತ್ನಮಯಮಾದ ಬೆಡಂಗು ಮಯಂಗೆ ಚಿತ್ರವಿ
ಸ್ಮಯಮನೊಡರ್ಚೆ ಕಣ್ಗೆ ಕರುಮಾಡಮಿದೇಂ ಕಡುಗಾಡಿವೆತ್ತುದೋ ೫೯೨

ಆ ಪುರದ ದೇವಭವನಕ
ಳಾಪದ ಮಾಣಿಕದ ಕಳಶದೆಳವಿಸಿಲಿರುಳಂ
ವ್ಯಾಪಿಸೆ ಗೃಹದೀ[೧]ರ್ಘಿಗಳೊಳ್
ಗೇ[೧]ಪೊಟ್ಟಿಂ ಜಕ್ಕವಕ್ಕಿಗಳ್ ನೆರೆದಿರ್ಕುಂ ೫೯೩

(ಸೂಕ್ತಿಸುಧಾರ್ಣವಂ, ೪-೧೬೬)

---

[೧]ದೀಪಿಕೆಗಳೊಳೇ(ಅ)

ಬರೆಯಲ್ ಬಾರದು ಬಚ್ಚಿಸಲ್ಕರಿದು ಮಾಡಲ್ ಕೂಡದೊಡ್ಡೈಸಲ
ಚ್ಚರಿ ಭೂಮಂಡಲಮಧ್ಯದಿಂದೊಡೆದು ಮೂಡಿತ್ತೆಂಬಿನಂ ಚೆಲ್ವನಾ
ಕರುಮಾಡಂ ನವಭೂಮಿಕಾಪ್ರಕಟಿತಂ ವಿಷ್ಕಂಭವಿಸ್ತಾರಬಂ
ಧುರಸಂಧಿಪ್ರವಿಭಾಸಿ ನಾಟಕದ ಪಾಂಗಿಂ ಚೂಳಿಕಾಲೋಳಿತಂ ೫೪
(ಅನಂತನಾಥಪುರಾಣಂ ೧-೧೧೪ ; ಸೂಕ್ತಿಸುಧಾರ್ಣವಂ ೪-೧೪೮)

ಆಡುವ ಡಕ್ಕೆ ವಾಜಿಸುವ ನೋಡುವ ಸಂಗಡವೊಪ್ಪೆ ರಾಗಮಂ
ಪಾಡುವ ತಳ್ತು ಕುಂಬಿಸುವ ಬೀಣೆಯ ತಂತಿಯ ನಂಟುನೋಟ್ಟಿ ಮಾ
ತಾಡುವ[1]ಮಾಲೆವೂಮುಡಿವ[1] ಕನ್ನಡಿಯಂ ಪಿಡಿದಿರ್ಪ ಭಾವದಿಂ
ಗಾಡಿಯನಾಂತ ಪುತ್ತಳಿಗಳಾ ಕರುಮಾಡದೊಳೊಪ್ಪಿ ತೋಱುಗುಂ ೫೫
(ಸೂಕ್ತಿಸುಧಾರ್ಣವಂ ೪-೧೪೯)

ಬಳಿಸಿದ ನೀಲದ ಮುತ್ತಿನ
ತೊಳಗುವ ಮಾಣಿಕದ ರನ್ನವೆಳಗಿನ ಬೆಳಗಂ
ಥಳಥಳಿಸಿ ಬಿಸಿಲ ಬೆಳ್ದಿಂ
ಗಳ[2]ಕಾಳಿದ[2] ಕಣಿಯೆನಿಪ್ಪುದಾ ಕರುಮಾಡಂ ೫೬
(ಅನಂತನಾಥಪುರಾಣಂ ೧-೧೧೬ ; ಸೂಕ್ತಿಸುಧಾರ್ಣವಂ ೪-೧೫೦)

ಗರುಡಂಗಮೆಯ್ದಲರಿದೆನೆ
ಕರುಮಾಡಮಿದುದ್ದಮಾದುದೇಕಸ್ತಂಭೋ
ಪರಿನಿರ್ಮಿತಮಿದನೆಮ್ಮ
ನ್ನರ ದೃಷ್ಟಿಗಳೆಯ್ದುವೆಂತು ಬಣ್ಣಿಪೆವರಸಾ ೫೭
(ಜಗನ್ನಾಥವಿಜಯಂ ೬--೫೯)

ಎಳೆವೆಂಡಿರ್ ನೆಲೆವಾಡದೊ
ಳೆಳೆಸಿರೆ ನಡೆನೋಡಿ ಸೋಲ್ತುವೊಲು ಚಂದ್ರಂ ಮೊ
ಪ್ಪೊಳೆವ ನೆವದಿಂದೆ ಪೊರಳ್ವಂ
ಮಳಯಜರಜಶುಕ್ತಿರತ್ನಕುಟ್ಟಿಮತಳದೊಳ್ ೫೮

ನೆಲೆಮಾಡದೊಳೆಡೆಯಾಡುವ
ಕಳಹಂಸಾಲಸವಿಲಾಸವತಿಯರ ಮುಖಮಂ
ಡಳಕೆ ಸರಿಯಾಗಲಾರದೆ
ಸಲೆ ಮಾಳ್ಪಂ ಚಂದ್ರನಂದು ಚಾಂದ್ರಾಯಣಮಂ ೫೯
(ಯಶೋಧರಚರಿತ್ರೆ ೧-೩೧)

---

[1]ವಂತೆಪೂಮುಡಿವ(ಸೂ) [2]ರಾಗ(ಸ) [3]ಯೊಲಿ(ಸೂ)

ಮಲಯ ಪವನಂಗೆ ಮೆಯ್ಯಂ
ಸಲೆ ಮಾಱುತ ಚರಿಪ ನಲ್ಲರಂ ತಾಂ ತಮ್ಮಯ
ನೆಲನೆಂದು ಕಾಮರತಿಗಳ್
ಚಲದಿಂ ನೋಡುತ್ತೆ ತಿರುಗುವರ್ ಪೊಱವೊಟಲೊಳ್ ೬೦೦

ಸುದತಿಯರಟ್ಟಿಱಿಂದಿರುಳೊಳಿಕ್ಕಿದ ಚಂದನಪಂಕದಣ್ಪು ಸೂ
ಡಿದ ಪೊಸಜಾದಿ ತೊಟ್ಟ ನವಮೌಕ್ತಿಕಮಂಡನಮೊಪ್ಪೆ ನೇತ್ರಕೌ
ಮುದಿಯೊಳಮಾಸ್ಯಚಂದ್ರಮನೊಳಂ ಬೆಳಗುತ್ತಿರೆ ಶುಕ್ಲಪಕ್ಷಮ
ಲ್ಲದೆ ಸಲೆ ಕೃಷ್ಣಪಕ್ಷಪರಿವರ್ತನಮಿಲ್ಲೆನಿಕುಂ ಪುರಾಂತದೊಳ್ ೬೦೧
(ಜಗನ್ನಾಥವಿಜಯಂ ೯-೧೦೪)

ಪುರವನಿತಾಜನಂ[1]ಗಳಿನ ಹರ್ಮ್ಯತಳೋಪರಿಯಂ[1]ಗಳಲ್ಲಿ ಗಾ
ವರಿಸುವ ಪಂಚಮಂಬೊರೆದ ನುಣ್ಚರಮಂ ನಸುಗೇಳ್ದು ತನ್ನ ಕೆ
ಣ್ಣರೆಮುಗಿಯಲ್ಕೆ[2]ಕಂಡು ಕೊಣಕಿಟ್ಟಪುದಲ್ಲಿಗೆ[2] ಗೋರಿಗೊಂ[3]ಡೆನು
ತ್ತೆ[3]ರಳೆಯ[4]ಬಲ್ಪಿನಿಂ[4] ಶಶಿ ತೊಡರ್ಚುವನಾತ್ಮವಟಪ್ರರೋಹಮಂ ೬೦೨
(ಚಂದ್ರಪ್ರಭಪುರಾಣಂ ೧-೧೨೪)

ಮರಕತಕೂಟಕೋಟಿತಟದಿಂ ಪೊಗೆದೂರ್ವಶಿ ಪರ್ವೆ ಕಾಂತಿಮಂ
ಜರಿ ಹರಿದಶ್ವನಶ್ವಚಯಮಂಬರದೊಳ್ ಗಿಳಿಯಂತೆ ಪಾಯಲ
ಚ್ಚರಿವಡುವಂಬರೇಚರರ ಕಣ್ಗೆ ಮನಂಗೊಳೆ ಪಕ್ಕಿಸೋವ ಪಾ
ಮರಿಯರ ಲೀಲೆಯಂ ನೆರಪುಗುಂ ನೆಲೆವಾಡದೊಳಂಗನಾನಜನಂ (?) ೬೦೩

ಬಿರಿಮುಗುಳಚ್ಚಪೂವಲಿಗೆ ಸೌಸವ[5]ದೊಡ್ಡ[5]ಗೆ ಸೂಸುತಿರ್ಪ ಕ
ರ್ಪುರದ ಪರಲ್ಗೆ ನೀ[6]ರ್ದಳಿ[6]ದ ಕತ್ತುರಿಗೊತ್ತರಿಸುತ್ತೆ ಪೋಪ ಪೆಂ
ಡಿರ ಕುಚಕುಂಭದಿಂದುದಿರ್ವ ಕುಂಕುಮರೇಣುಗೆ ಪಾಯ್ವ ತುಂಬಿಯಿಂ
ಚರದೊಳೆ ತಳ್ತು ಮೂರ್ಛಿಸಿವುದಲ್ಲಿ ಪಳಂಚೆ ವಿಪಂಚಿಯಿಂಚರಂ ೬೦೪
(ಲೀಲಾವತಿ ೭-೨೬)

ಇದಱಿತೊಳ್ ಚಂಡಾಂಶುಬಿಂಬಂ ತೊಡರ್ದು ಮಿಡುಕದಿರ್ದಪ್ಪುದೆಂಬಂತೆ ರತ್ನಾ
ಗ್ರದೊಳೊಪ್ಪಂಬೆತ್ತು ಚೆಂಬೊಂಗಳಸದೆಳೆವಿಸಿಲ್ ಸಂತತಂ ವ್ಯೋಮಗಂಗಾ
ಬ್ಜದ ಪೆರ್ಚಂ ಮಾಡೆ ಕೂಟಧ್ವಜದ ದುಗುಲದಿಂ ಸಂಚರತ್ಖೇಚರೀಲೋ
ಲ ದುಗೂಲಭ್ರಾಂತಿಯಂ ಪುಟ್ಟಿಸುತಮೆಸೆದುವಭ್ರಂಕಷದ್ವಾರಹರ್ಮ್ಯಂ ೬೦೫

---

[1]ರುಚಿರಹರ್ಮ್ಯಗೃಹಾಗ್ರ(ಅ) [2]ಸೋಲ್ತು ಕಣ್ಮಲರೆ ಮುಚ್ಚೆ(ಅ) [3]ಜಪೊಂವೆ(ಅ)
[4]ನಲ್ಲಿರುಳ್(ಅ) [5]ದಡ್ಡಿ(ಅ) [6]ಬಿತ್ತಿ(ಅ)

ನಿಳಯಕ್ಕೊರ್ಗೊಂದು ಕೇಳೀವನಮುಮುವೃತ ಕಾಸಾರಪ್ರೊದೋಂಟಮುಂ ತ
ನ್ನಿಳಯಂಗಳ್ ಮಾಡಮುಂ ಮಂಟಪಮುಮುಪರಿಯುಂ ತನ್ನಿವಾಸಂಗಳೊಳ್ ಗೋ
ಕುಳಮುಂ ಧಾನ್ಯಂಗಳುಂ ತೀವಿದ ನವನಿಧಿಯುಂ ತದ್ಗೃಹಸ್ಥರ್ ಕಳಾಪೇ
ಶಳರುಂ ಗಂಭೀರರುಂ ಭೋಗಿಗಳುಮೆನೆ ಪುರಶ್ರೀಕರಂ ರಂಜಿಸಿರ್ಕುಂ ೬೦೬
(ಜಗನ್ನಾಥವಿಜಯಂ ೯-೯೬)

ಘನಕಾಳಾಗರುಧೂಪಧೂಮಮುಳಿನವ್ಯೋಮಂ ತ್ರಿಸಂಧ್ಯಾನಕ
ಧ್ವನಿಶಬ್ದಾತ್ಮಕದಿಕ್ತಟಂ ಶಿಖರಮಾಣಿಕ್ಯಾತಪೋಜ್ಜೃಂಭಿತ
ದ್ಯುನದೀವಾರಿಜಮೊಪ್ಪುತಿರ್ಪುದು ಸುಧಾಗಾರೋತ್ಕರಂ ನರ್ತಕೀ
ಜನತೋಲ್ಲಾಸಿತಕೇಕರಂ ವಿವಿಧಲೀಲೋದ್ಯಾನಶೋಭಾಕರಂ ೬೦೭
(ಜಗನ್ನಾಥವಿಜಯಂ ೯-೯೮)

ಘುಸೃಣಮಃದಾಳೀಸ್ವನವ
ತ್ಕುಸುಮಿತ ವನರಾಜಿಯಂತೆ ವಿಪ್ರಜನಾಳೀ
ವಿಸರದ ವೇದಸ್ವರದಿಂ
ದೊಸೆದಿರ್ಕುಂ ಬ್ರಹ್ಮಪುರಿಯ ಸೌಧಸಮೂಹಂ ೬೦೮

ಅವನೀಪೇನಸಮೂಹಮೋದುವುದನಾದಂ ಕೇಳ್ದು ಕೇಳ್ದೋದುತಿ
ರ್ಪುವು ವೇದಂಗಳನೋದಿ ತಪ್ಪುವಿಡಿದಂತೇವಾಸಿಗಳ್ಗೋದಗೇ
ಳ್ವುವು ತಮ್ಮೋದಿನ ಬಲ್ಮೆಯಿಂ ದ್ವಿಜವರರ್ಗಾನಂದಮಂ ಮಾಡುತಿ
ರ್ಪುವು ಕೇಳೀಶುಕಸಾರಿಕಾತತಿಗಳಾಗಳ್ ದೇವಸದ್ಮಂಗಳೊಳ್ ೬೦೯

ಚದುರ ಪೊದಟಿಕ್ಕೆ ಸಂಪದದ ಪೊಂಪುಟಿ ಸತ್ಯದ ಬಿತ್ತರಂ ವಿವೇ
ಕದ ನೆರವೀವ ಪ್ಕೆಮೆ ದಯೆಯುನ್ನತಿ ಧರ್ಮದ ಪೆರ್ಮೆ ಸಜ್ಜನ
ತ್ವದ ವಿಮಲತ್ವಮಾರ್ಪಿನ ಪೊಡರ್ಪು ವಿಳಾಸದ ದೇಸೆ ಕೂಡೆ ಭೋ
ಗದ ಕಣಿಯಾಯ್ತು ತಂತಮಗೆ ಪೌರಜನಂ ಸ್ಥಿರಸೌಖ್ಯಭಾಜನಂ ೬೧೦
(ಜಗನ್ನಾಥವಿಜಯಂ ೯-೧೧೬)

ಜಲಧರತತಿಯಿಂ ನಿಜಮೇ
ಖಲೆಯೊಳ್ ತಳೆದಿರ್ದ ಮೇರು[1]ವೆನೆ ಕನಕಮಯಂ[1]
ವಿಲುಳಿತ ಪರಿಖಾವಳಿ ಪರಿ
ವಳಿಯಿತಮುರಮನೆಯ ಕೋಂಟೆಗಳ್ ಸೊಗಯಿಸುಗುಂ ೬೧೧
(ಜಗನ್ನಾಥವಿಜಯಂ ೯-೧೧೮)

---

[1]ವ ಸುತ್ತಿದ ನದಿಯೊಳ್ (ಸ)

ಸತತಂ ಪೊಂಗಳಸದ ದೀ
ಧಿತಿಗುನ್ನತಿಗಳ್ಕಿ ಬಳ್ಕಿ ಕೆಲಸಾರ್ದುೞ ದಿವಾ
ಪತಿ ದಕ್ಷಿಣೋತ್ತರಾಯಣ
ಗತಿಯಾದಂ ಪೊಗೞ್ವರಳವೆ ಬಾಗಿಲ್ವಾಡಂ ೬೧೨
(ಜಗನ್ನಾಥವಿಜಯಂ ೯-೧೧೮)

ಅಹಿರಾಜಂ ದ್ವಿಸಹಸ್ರಜಿಹ್ವನಜುಯಂ ವ್ಯಾವರ್ಣಿಸಲ್ ಬಲ್ಲನೇ
ಮಹಿಯೊಳ್ ಮಾನವನೊಂದೆ ನಾಲಗೆಯೊಳಂತಾ ಭೂಭುಜಾಗಾರಮಂ
ಬಹುವಿಸ್ತಾರಮನಿಂದ್ರ ಪುಷ್ಪಕವಿಮಾನಾಕಾರಮಂ ತನ್ಮಹಾ
ಮಹಿಮಾಧಾರಮನತ್ಯುದಾರಮನಿಳಾಚೇತಸ್ಥಮುತ್ಕಾರಮಂ ೬೧೩
(ಜಗನ್ನಾಥವಿಜಯಂ ೨-೩೭)

ವಿಕಸತ್ಪುಷ್ಪಕದಂಬತಾರಕಿತಮಾಯಾತಪ್ರಯಾತಾಂಗನಾ
ನಿಕರೋದ್ಯಚ್ಚರಣಾಂಶುಪಲ್ಲವಿತವಸ್ತ್ಯುರ್ವೀಶ್ವರವ್ರಾತದೂ
ತಕುಳಸ್ಥಾಪಿತನೂತ್ನರತ್ನಫಲಿತಂ ಯಾಮದ್ವಿಪೇಂದ್ರಪ್ರತಾ
ನಕಟೋಪಸ್ಮೃತ್ಯಮದೌಘಕರ್ದಮಿತಮಂತಾ ರಾಜಗೇಹಾಜಿರಂ ೬೧೪
(ಚಂದ್ರಪ್ರಭಪುರಾಣಂ ೧-೧೫೧)

ಅಗಟಿಂಭೋರಾಶಿ ಸಾಳಂಬಳಸಿ ಬೆಳೆದ ವೇಳಾಚಲಂ ವೀಧಿಗಳ್ ಸಿಂ
ಧುಗಳತ್ಯುತ್ತುಂಗ ದೇವಾಯತನತತಿಗ[1]ಳೇಟ್ದ್ರಿ[1]ಗಳ್ ರಮ್ಯದೇಹಾ
ಳಿಗಳೂರ್ಗಳ್ ಪೆರ್ಚುಯಿಂ ತಾನೆನೆ ಜನವೊದವಿರ್ದಾ ಪುರಂ ಪೆಂಪು ತನ್ನೊಳ್
ಮಿಗೆ ಜಂಬೂದ್ವೀಪಮಂ ಪೋಲ್ತಿರೆ ಸುರಗಿರಿವೋಲ್ ರಾಜಿಕುಂ ರಾಜಗೇಹಂ ೬೧೫
(ಲೀಲಾವತಿ ೭-೨೯)

ತರುಣೀಲೋಚನಚಂದ್ರಿಕಾಮಳಯುಜಪ್ರಕ್ಷೋದಮಂ ಕಾಮಿನೀ
ದರಹಾಸೋಜ್ವಲಮಲ್ಲಿಕಾಮುಕುಳಮಂ ಕಾಂತಾಮುಖೇಂದುಪ್ರಭಾ
ತರಳೋದ್ದಾಮದುಕೂಲದೀರ್ಘಪಟಮಂ ತಳ್ಕೈಸಿ ತದ್ರಾಜಮಂ
ದಿರಲಕ್ಷ್ಮೀವಧು ಕೂಡೆ ಜಿಳ್ವಿಸದಸಂಗೊಂಡಂತೆ ಕಣ್ಗೊಪ್ಪುಗುಂ ೬೧೬
(ಲೀಲಾವತಿ ೭-೨೪)

ಸುರಗಿರಿಯಂ ಸರೋಜಭವನೆಂಬ ಮಹಾರಥಕಾಜನೊಲ್ದು ತಂ
ದಿರಿಸಿದ ಚಿತ್ರಪುತ್ರಿಕೆಗಳಂ ಪರಿರಂಜಿಪ ಚಂಪೆಯಲ್ಲಿ ತಂ
ದಿರಿಸಿದನೆಂಬಿನಂ ಜನಮನೋಹರಮಾಗಿ ಪೊಗಟತ್ತಿಗೊಪ್ಪುವ
ಪ್ಪುರಿಗೆಗಳಿಂ ನೆಗೞ್ತವಡೆದಿರ್ದುದು ಸೌಂದರರಾಜಮಂದಿರಂ ೬೧೭

---

[1] ಳೆತಳ್ತದ್ರಿ(ಅ)

ಧೃತಪದ್ಮಾನುನಯಂ ಸುಗೋತ್ರಜನನಂ ಭದ್ರಾಹ್ವಯಂ ದಾನವಾ
ರಿತನುಂ ಕೌತಕಕೀರ್ತನಂ ನೆಲಸಿಯುಂ ತನ್ನಲ್ಲಿ ಪಂಚಾಸ್ಯದೂ
ರಿತಮಾತಂಗವೆಸರ್ಗೆ ನೋಂತೆನೆನುತಂ ಕೈನೀಡಿ ಸುಯ್ವಂತೆ ಪ್ರೂ
ತ್ಕೃತಿಯಿಂ ಪಂಜಿಸುತಿಪ್ಪ ಮನ್ಮಥಗಜಂ ರಾಜಾಲಯದ್ವಾರದೊಳ್ ೬೧೮

ತೊಲಗದೆ ತಮ್ಮತಮ್ಮ ಕೆಲಸಕ್ಕಿದಿರುಂಬುಳಿವಾಯ್ತು ಬರ್ಪ ಕೋ
ಮಲೆಯರ ಹಾರದಿಂ ಸುರಿವ ಮುತ್ತಿನ ಸೋರ್ಮುಡಿಯಿಂದ ಸೂಸುವೊ
ಳ್ಮಲರ ಕುರುಳ್ಗಳಿಂದುಗುವ ಕತ್ತುರಿಯುಬ್ಬರಮುರ್ಬೆ ಪರ್ಬಿ ಬ
ರ್ಪಲಘುನಿತಂಬೆಯರ್ಗೆಯುಸಮುಂ ಪಡೆದತ್ತು ನರೇಂದ್ರಮಂದಿರಂ ೬೧೯

ಮದಧಾರಾಸಾರದಿಂ ಧಾರಿಣಿಯುನಣಿಯುತಂ ನಾಂದು ತದ್ಗಂಧಧಾವ
ಲ್ಯದ ಮಿಂಚಿಂದೆಲ್ಲದಿಕ್ಕಂ ತೊಳಗಿ ಬೆಳಗುತಂ ಜೇಗದಿಂ ಬೃಂಹಿತಧ್ವಾ
ನದೆ ಬರ್ಹಿವ್ರಾತಮಂ ಪ್ರೀತಿಯೊಳೆ ಕುಣಿಯಿಸುತ್ತಂ ಕರಂ ಕಾಳಕಾರಾಂ
ಬುದಮಂಬೊಂದಂದದಿಂದೊಪ್ಪಿದುದು ಮುದಿತ ನೀಲಾಳಿಲಾಭಂ ಮದೇಭಂ ೬೨೦

ಕತ್ತುರಿಗೊಂಡ ಕರ್ಣವೆಳನೀಲದ ನುಣ್ಪಡೆದಕ್ಷಿ ವಕ್ಷಮುಂ
ಪತ್ತಿದ ಕಂಧರಂ ಮೃದುಘಟಾವಳಿ ಸೂಳ್ಪ ನರಳ್ಪಗೋಣುಮು
ದ್ವೃತ್ತಮನಂ ನಯಂಬಡೆದ ರೋಮಚಯಂ ನಿಮಿರ್ವೆತ್ತ ವಾಲಮು
ತ್ಕೃತ್ತಮಲಕ್ಷಣಂ ಬಡೆದ ವಾಜಿಗಳಿರ್ದುವು ಮಂದುರಂಗಳೊಳ್ ೬೨೧

ಶಶಿರವಿಗಳ ದಾಯಾದ್ಯದ
ವಿಷಯಕ್ಕಂ ಕಮಲಜಾತನಾ ಪಟ್ಟಣಮಂ
ಹಸುಗೆಯ ಮಾಡಿದ ತೆಜದಿಂ
ಶಶಿರವಿನಾಮದಲಿ ಬೀದಿಗಳ್ ಕಂಗೊಳಿಕುಂ ೬೨೨

ಪೊಸಸೊದೆ ಕೌಮುದಿಯಂತಿರೆ
ಪಸರಿಸಿ ಪೊಂಗಳಸಮಾಲೆ ಪೊಂಬಿಸಲಂ ಪ್ರೊ
ಣ್ಮೆಸೆ ತರತರದಿಂ ರಾರಾ
ಜಿಸುತಿರ್ಪುವು ಸೋಮಸೂರ್ಯವೀಧಿಗಳವಜೀರೊಳ್ ೬೨೩

(ಗಿರಿಜಾಕಲ್ಯಾಣಂ ೨-೮೨)

ಪನ್ನೀರಪುಟಿಕೆಯಂ ತೂ
ಪನ್ನಂ ತಾನಂತು ಜಾರಿ ತೊಡದಾರ್ ಹೊನಲ
ಲ್ಲಿನ್ನುಂ ಹರಿಗೋಲಿಟ್ಟೊಡೆ
ಚೆನ್ನಿಗರೆಡೆಯಾಡುತಿರ್ಪರಾ ವೀಧಿಗಳೊಳ್ ೬೨೪

ಕಣ್ಗಿಂಬಾದುದು ರಾಜವೀಧಿ ಮುಡಿಯಿಂ ಬಿಟ್ಟಿರ್ದ ಪೂಮಾಲೆಯಿಂ
ತಣ್ಗಂಪಂ ಸವಿದಲ್ಲಿ ವಂಗಡದೆ ಪಾಡುತ್ತಿರ್ಪ ಪೆಣ್ದುಂಬಿಯಿಂ
ಸುಣ್ಣಾಲುಂಗುರವಿರ್ಪಿಯೆ ಮೆಲ್ಲುಲಿಯನೆತ್ತಂ ಬರ್ಪ ನಲ್ವೆಂಡಿರಿಂ
ಜಾಣ್ಗಿಂಬಾದರವೆಂಡರಿಂ ಪೊಗಟ್ಬಿರೋದಂ ಕೇಳ್ವ ಕೂರಾಳ್ಗಳಿಂ . ೬೨೫

ಪುರದೊಳಗಲ್ಲಿಗೆರಡುಂ ತರದಿಂ ಸೊದೆವೆಳ್ಪಿನಿಂದಲಂ
ಬರಚರಕಾಮಿನೀತತಿಗೆ ಚಂದನವಣ್ಪಿನ ಸೊಂಪನೀಯುತುಂ
ಸಿರಿಗೆ ನಿವಾಸಮಾದ ಪಿರಿಯಂಗಡಿಗಳ್ ಬಗೆಗೊಪ್ಪಿ ತೋರ್ಪುವಾ
ಪುರವರಲಕ್ಷ್ಮಿ ತೊಟ್ಟ ಪೊಸಮುತ್ತಿನ ಹಾರದ ಪೊತ್ತಮೆಂಬಿನಂ ೬೨೬
(ಜಗನ್ನಾಥವಿಜಯಂ ೯-೧೦೫, ಸೂಕ್ತಿಸುಧಾರ್ಣವಂ ೪-೧೦೯)

ತಪ್ಪದೆ ಸರಸಿಜಸಂಭವ
ನಪ್ಪೊಡಮೆಣಿಸಲ್ಕೆ ನೆಱೆಯನೆನಿಸುವ ಪಲವುಂ
ಕಪ್ಪುರದ ರಾಸಿ ಬೀದಿಯೊ
ಳುಪ್ಪಿನ ರಾಸಿಯವೊಲೊಟ್ಟಿ ಬೆಟ್ಟಾಗಿರ್ಕುಂ ೬೨೭
(ಸೂಕ್ತಿಸುಧಾರ್ಣವಂ ೪-೧೧೦)

ಸುರಪನ ವಜ್ರಮುಂ ಹರಿಯ ಕೌಸ್ತುಭಮುಂ ಹರನಿಂದುಲೇಖೆಯುಂ
ವರುಣನ ಮುತ್ತಿನೆಕ್ಕಸರಮುಂ ಗರುಡಾಂಗದ ಪಚ್ಚೆಯುಂ ಫಣೀ
ಶ್ವರಫಣರತ್ನಮುಂ ಬೆಲೆಗೆ ಬಿಣ್ಣಿದುಮಲ್ಲೆನಿಸಿರ್ಪ ರತ್ನದಿಂ
ದೆರಡನೆಯಬ್ಧಿರನ್ನವೆಸರಂ ಗೆಲೆಮಂದುಸೊ ರೋಹಣಾದ್ರಿಯುಂ ೬೨೭
(ಪಂಪರಾಮಾಯಣಂ ೧-೧೨೧; ಸೂಕ್ತಿಸುಧಾರ್ಣವಂ ೪-೧೧೧)

ಶರನಿಧಿಯೆಂಬ ಕೆಯ್ಯ ಬೆಳಸಂ ಬಿದಿಯೊರ್ಬುಳಿಮಾಡಿ ಕೂಡಿದಂ
ತಿರೆ ನವರತ್ನರಾಶಿನಿಕರಂ ಕನಕಾಚಲವರ್ಕರಶ್ಮಿಯಿಂ
ಕರಗಿದೊಡಚ್ಚುವೆಟ್ಟದವೊಲೊಟ್ಟಿರೆ ಪೊಂಗಳ ಬೆಟ್ಟು ಮುಂದೆ ಬ
ಜ್ಜರವಸರಂಗಳಚ್ಚರಿಯನೀವುವು ನೋಡೆ ಕುಬೇರಲಕ್ಷ್ಮಿಗಂ ೬೨೮
(ಲೀಲಾವತಿ ೭-೧೮)

ಬಿತ್ತರದ ಪೊದಕೆಗಳೆ ಬಿಡು
ಮುತ್ತುಗಳಂ ಮೊಗೆದು ಸುರಿದು ಪಾಮರಿಯರ ಪೆ
ರ್ಮುತ್ತಲ್ಲವು ವಿನಂಬಿಸೆ
ಪತ್ತಿದ ಪಣ್ಣಿಗೆವರಲ್ಲಿ ಪರದರಮಕ್ಕಳ್(?) ೬೨೯
(ಧರ್ಮನಾಥಪುರಾಣಂ ೨-೭೩)

ತಾವರೆ[1]ಯಂಬಲಿರ್ದ ಮನೆಯುಂ[1] ವಿಬುಧರ್(?)ಕೆಡುಗೂರ್ತ ವಲ್ಲಭಂ
ಗೋವಳೆನೊಂದೆ ಪಾಸದುವೆ ಪಾವಿನಪುತ್ತ್ರದಜೀಂದವಿನ್ನುವು
ತ್ತಾವುದುಪಾಯಮೆಂದುಸಿರೆ ನಿಶ್ಚಯದಿಂದವನೆಯ್ದೆ ಬಿಟ್ಟು ಬಂ
ದಾವಣಿಗಾಲಯಂಗಳೊಳಹರ್ನಿಶಮಿರ್ಪಳದೇಂ ವಿದಗ್ಧೆಯೋ ೬೩೦
(ಧರ್ಮನಾಥಪುರಾಣಂ ೨-೭೫)

ಪೊರೆವಡೆದಿತ್ತರಂಬಿಡಿದ ಕತ್ತುರಿ ಕಪ್ಪುರದುದ್ಧರಾಸಿಗಳ್
ಚರಿಸುವ ವಾರನಾರಿಯರ ಲೋಚನಚಂದ್ರಿಕೆಯಿಂದೊಸರ್ತು ಕಾ
ಲ್ವುರವರಿವಿಂದುಕಾಂತಮಣಿಕುಟ್ಟಿಮದೊಳ್ ಜರಿದೆಯ್ದೆ ಜಾರೆ ಜಾ
ಣರ ಬಗೆ ಕೊಟಿಗ್ಗಸರ್ಮಸಗುತಿರ್ಪುದು ಸಂತತಮಾ ವಣಿಕ್ಪಥಂ ೬೩೧
(ಧರ್ಮನಾಥಪುರಾಣಂ ೨-೭೬)

ಅಂಗಡಿಗಳ್ ಪಲವವಱೊಳ್
ವಂಗಡದಿಂದಿರ್ಪವಖಿಳಧಾನ್ಯಾದಿಗಳ್ ಮ
ನಂಗೊಳೆ ಕ್ರಯಮುಂ ಕೊಂಬ ಜ
ನಂಗೊಳೆ ಸಂಭ್ರಮದೊಳೆಸೆಯೆ ವಿಕ್ರಯವಸರಂ ೬೩೨

ದಯೆಯಿಂ ಮಾಱುಗೊಡುವ ಕೊ
ಳ್ವೆಯತ್ನಪೂರ್ವಕದೊಳಿರ್ಪ ಘನ ಧನಿಕರ ಸಂ
ತೆಯ ಮುಂದೆ ಸಂದಣಿಸಿ ವಿ
ಕ್ರಯಕಳವಾರಾ[ಗಿ]ಧಾನ್ಯವಸರಗಳೆಸೆಗುಂ ೬೩೩

ಎಸೆವ ಸುರತ್ನಜಾತಿಗಳ ವಾಣಿಯ ರೀತಿಯದಾತಕೂಡೆ ಗಿ
ಟ್ಟಿಸಲರಿದಾ ಪುಟಂಗಳಿಡಲೆತ್ತುವ ರಂಗಮಿದೆಂಬ ಭೇದಮುಂ
ಪಸಿನವ ತೂಕಮುಂ ಬೆಲೆಯ ತಪ್ಪದೆ ಪೇಳ್ವ ದೃಷ್ಟಿವಾಳರೊಳ್
ಪೆಸರ್ವಡೆದಿರ್ಪ ರತ್ನದ ಪರೀಕ್ಷಕರಿರ್ದರನಂತಗಾಡಿಯಿಂ(?) ೬೩೪

ಚಾರುತರ ವಿಮಲ ಮೌಕ್ತಿಕ
ಪೂರಾದಿಸಮಸ್ತರತ್ನರಾಸಿಗಳಿಂದಂ
ನೀರೋಡಿದ ರತ್ನಾಕರ
ದೋರನ್ನವಮಾಯ್ತು ರನ್ನವಸರಂ ಪುರದೊಳ್ ೬೩೫

---

[1] ಯೆಂಬರಿರ್ದು ಮನೇಮಂ(ಅ)

ಕರಿ ಶಂಖ ಮೀನು ಮುಗಿಲುಂ
ಹರಿ ವರಹ ರೇಣು ಶುಕ್ತಿ ಭೋಗಿಗಳೆಡೆಯೊಳ್
ಸರಿಮಿಗಿಲೆನೆ ಪುಟ್ಟಿದಾಣಿಯು
ವರಮಣಿಗಳ ತಂಡ ರನ್ನವಸರದೊಳೆಸೆಗುಂ ೬೩೬

ಭೀಕರ ಬಾಡಬಾಗ್ನಿಯು ದವಾಗ್ನಿಯ ತೀವ್ರತೆಗಳ್ಕಿ ಬಂದು ಸಿ
ರ್ವ್ಯಾಕುಳಮೀಗಳಿಲ್ಲಿ ನೆಲಸಿತ್ತ ಜಡಾತ್ಮಕರೂಪಮಾಗಿ ರ
ತ್ನಾಕರಸಂಕುಳಂ ವಿಪಿನವೃಕ್ಷವಿವರ್ಜಿತಮಾ ನಿರೋಹ
ಣಾನೀಕಮೆನಲ್ಕೆ ರನ್ನವಸರಂ ಬಗೆಗಚ್ಚರಿಯಂ ನೆಗಳ್ಚುಗುಂ ೬೩೭

ವರವೃದ್ಧನೊರ್ವನ ಹರದನ
ವರಮುಕ್ತಾಳಿಗಳಂ ಜೇಡಲ್ ಪುರದೊಳಗಾ
ಯಿರುಳಿನ ಕೈರವಡೆಡೆಯೊಳ್
ವಿರಹಿಣಿಯೊಳ್ ತನ್ನ ಕಯ್ಯೊಳುಂಟೆನಿಪನಹೋ ೬೩೮

ಸುರಚಿರದಿಂದು ತಮ್ಮಯ ಮುಖಕ್ಕೆಣೆಯಾದಪುದೆಂದು ಕಂಚುಗಾ
ಜಿರ ವಧುಗಳ್ ಸುಧಾಕರನ ಬಳ್ಸಿಜಿತಿಗಿಕ್ಕಿರಲಲ್ಲಿ ತಾರಕಾ
ತರುಣಿಯರೊಲ್ದು ಬಂಸು ನೆರೆದೇಂ ಬಹುಪುತ್ರರನಿಂದುವೇಡಿ ಪೆ
ತ್ತರೊಯೆನೆ ತೋರ್ಪ ಪಾತ್ರೆಗಳ ಮಾಜುವರಾ ಸಲೆ ಕಂಚುಗಾರ್ತಿಯರ್ ೬೩೯

ತೊಳಗುವ ಪೂಗಳನೆಂದುಂ
ತಳೆದಿರ್ಪ ಕೊಳಂಗಳೆಂಬ ಶಂಕೆಯನೆನಸುಂ
ಬಳೆಯಿಸುತಿರ್ಪುವು ಬೀದಿಗ
ಳೊಳಗೆಲ್ಲಿಯು ನೆಗಟ್ದ ಕಂಚುಗಾಜಿರ ಪಸರಂ ೬೪೦

ಬೆಳಗಿನ ಬಿಂಬಂಗಳನಂ
ತಳವಡೆ ತರತರದಿನೇಳಿಪಂತಿರ್ದುವು ನಿ
ರ್ಮಳ ಪಾತ್ರಾಕುಲದಿಂದಂ
ತೊಳತೊಳಗುತ್ತಿರ್ಪ ಕಂಚುಗಾಜಿರ ಪಸರಂ ೬೪೧

ಸಲೆ ದೋಷಾಕರನಂ ಕಳಂಕಯುತನಂ ತಾಳ್ದಿರ್ಪುದೀ ವ್ಯೋಮನುಂ
ಡಲಮೆಂದಂತದನೊಲ್ಲದಪ್ರತಿಮಪೌರಸ್ತ್ರೀಜನಾಸ್ಯೇಂದು ಸಂ
ಕುಲಮಂ ತಾಳ್ದಪುದಿಂತಿದೆಂದು ಪುರದೊಳ್ ಬಂದಿರ್ದ ತಾರಾಗಣಂ
ಗಳಿನೆಂಬಂತಿರೆ ಕಂಚುಗಾಜವಸರಂ ಮಾಟ್ಕುಂ ಮನೋರಾಗಮಂ ೬೪೨

(ಜಗನ್ನಾಥವಿಜಯಂ ೯-೧೧೦)

ಮುತ್ತುಂ ಪಚ್ಚೆವರಲ್ಗಳುಂ ಕುಲಿಶಮುಂ ಮುಂತಾಗಿ ಕುಂದಿಲ್ಲದೊಂ
ಬತ್ತುಂ ರನ್ನದ ನುಣ್ಗದಿರ್ ನೆಗೆದು ನೀಳ್ದೊಂದೊಂದಱೊಳ್ ಕೂಡಿ ಪ್ಪೆ
ಪೆತ್ತಂತಿಂದಿರವಿಲ್ಲಪಾಂಗಮೆನಸುಂ ಮೀಂಬಟ್ಟೆಯೊಳ್ ಪೇೞ ಕ
ಣ್ಗೆತ್ತಂ ಸೋಲಮನೀವ ರನ್ನವಸರಂ ಚೆಲ್ವಾದುವಾ ಬೀದಿಯೊಳ್ ೩೪೩

ಚೆಂದುಟಿಯಿಂಪಂ ಪೈತ್ಯಂ
ಸಂದಪ್ಪಿಂ ವಾತಮೊಲ್ದ ರತಿಯಿಂ ಶ್ಲೇಷ್ಮಂ
ಸಂದಂದಿನೆ ಕೆಡಲೆಲೆ ಸತಿ
ಗಂದಿಗಸರಕೇಕೆ ಕಟ್ಟುಗೆಂದಳಿದೊರ್ವಳ್ ೩೪೪

ಅರಸಿನವಿಲ್ಲೆಂಬರಸಂ
ಗರಿಸಿನಮುಂಟೆನಿಸಿ ತೋಱಿ ವಣಿಜರ್ ಮತ್ತಾ
ಗರಸಿನ ಕೃಪೆಯಂ ಪಡೆವುತ
ಲರಿಸಿನ ಗುಣ ಪೊದ್ದದಿಪ್ಪ ಸಿರಿಯಂ ಮೆಱೆವರ್ ೩೪೫

ಅಜರಾಮರತ್ವಮಂ ಪೌ
ರಜನಂಗಳ್ಗೀವ ತನ್ನ ವಿವಿಧೌಷಧಿ ನಾ
[1]ಕಜದ ಮಹೌಷಧಿಗಳಿ ತಂ
ದಜನಿಟ್ಟವೊಲೆಸೆದುವಲ್ಲಿ[1] ಗಂದಿಗವಸರಂ ೩೪೬

(ಜಗನ್ನಾಥವಿಜಯಂ ೯–೧೦೮)

ತನತನಗೆ ಹೊನ್ನರಾಸಿಯು
ನನವರತಂ ಮುಂದುಗೊಂಡನೇಕ ಕುಬೇರರ್
ಜನಿಯಿಸಿ ನಿಂದಂತಿರ್ಪುವು
ಕನಕವ್ಯವಹಾರದಿಂದೆ ವೈಶ್ಯಕದಂಬಂ ೩೪೭

ದೆಸೆಗಳ್ ನಿಜಾಂಶುವಿಂ ರಂ
ಜಿಸುತಿರೆ ಪುಂಜಿಸಿದ ಪೊನ್ನ ಪುಂಜಳಿಯಿಂದಂ
ಕೊಸಗಿನ ಮರದುಱುಗಲರ
ಳ್ದೆಸೆವಂತೆಸೆದಿರ್ಪುವಲ್ಲಿ ಬಜ್ಜರವಸರಂ ೩೪೮

(ಜಗನ್ನಾಥವಿಜಯಂ ೯–೧೦೭)

---

[1]ಕಜನಗವ ಮಹೌಷಧಿಗಳಿ ನಿಜಸೃಷ್ಟಿಯೊಳೆನಿಪುವಲ್ಲಿ(ಅ)

ಅಗಣಿತ ಧನರಾಶಿಗಳಿಂ
ನಗುತಿರ್ಕುಂ ಮೇರುನಗಮನೆನೆ ನೆಗೆಟ್ದಿಳಿಕಾ
ನಗರೀಶಂ ಬರ್ಕುಮೆ ತ
ನ್ನಗರದ ಕಡೆಪಟ್ಟ ಪರೆದರೊರೆಗಂ ಜೊರೆಗಂ ೬೪೯
(ಜಗನ್ನಾಥವಿಜಯಂ ೯-೧೦೬)

ಜೊರೆಯೊಳೆ ಬಣ್ಣ ಮಚ್ಚದೊಳೆ ತಾಂ ಪುಸಿ ತಪ್ರಸಲಿ ತೂಗಿ ಕೊಟ್ಟೊಡಂ
ಸರಿಯಿದು ತಪ್ಪಿದೆಂದೆನಿಪ ಕಟ್ಟಳೆಯೆಂಬಿವು ಪೊರ್ದದಾರು ಬಂ
ದರೆ ಕ್ರಯವಿಕ್ರಯಂಗಳೊಳು ತಪ್ಪದೆ ಮಾಱುವ ಕೊಂಬ ಚಿನ್ನಗೆ
ಯ್ತರು ಸಮುದಾಯದಂಗಡಿಯಲಿರ್ಪರು ನೋಡಲನಂತಸೌಖ್ಯದಿಂ ೬೫೦

ತುರಗದ ಜಾತಿಯಂ ಪೆಸರ ವರ್ಣಮನಾಯುಮ ಲಕ್ಷಣಂಗಳಂ
ಪರಿಕಿಸಿ ಬಂದ ದೀಹಗಳ ರಕ್ಷಿಸಲುತ್ತಮಮಪ್ಪ ಭೇದಮಂ
ಪರದರು ತಪ್ಪದೇ ಬೆಲೆಯುಮಂ ಚಳಕಂಗಳ ಮೇಲೆ ಕಟ್ಟುವಾ
ತುರಗಪರೀಕ್ಷಕರ್ ಮೆಱೆಯುತಿಪ್ಪರು ತತ್ಪುರದೊಳ್ ನಿರಂತರಂ ೬೫೧

ತೀವಿರ್ಪಶ್ವಾವಳಿಯ ಗ–
ಜಾವಳಿಯ ನರಾವಳಿಗಳ ವಿಕ್ರಯದಿಂದಂ
ಭಾವಿಸೆ ದೂಸಿಗೆವಸರಂ
ಮೂವರ್ ರಾಯರನೆ ಮಾಱುವಂತೆಸೆದಿರ್ಕುಂ ೬೫೨
(ಗಿರಿಜಾಕಲ್ಯಾಣಂ ೨-೯೪)

ಸುರತರು ಕೊಡುವಂಬರದೊಳ್
ಪರಿಪಾಟಿಚ್ಛಾಯೆ ನೆಯ್ಗೆ ನೂಲಿಂ ರಂಗಿಂ
ಜೊರೆಕೊಳ್ಳದೆನಿಪ ದಿವ್ಯಾಂ
ಬರದಿಂದೆಸೆದಿರ್ದವಲ್ಲಿ ದೂಸಿಗವಸರಂ ೬೫೩
(ಜಗನ್ನಾಥವಿಜಯಂ ೯-೧೧೧)

ಬಗೆಗೊಳುತಿರ್ಪುದಲ್ಲಿ ಸಿರಿಗಂಪಿನ ಬಲ್ಪೊರೆಯೊಟ್ಟಲಿಂದೆ ಪಾ
ಯ್ದಗರುವಿಸೇಷಂ ಕುಂಕುಮದ ಕತ್ತುರಿ ರನ್ನದ ರಾಸಿ ಪೊನ್ನಪುಂ
ಜಗೆ ಪೊಸಕಂಚುಮುಟ್ಟುಗಳ ತಿಂತಿಣಿ ಮುಂತಮರ್ದಿಪ್ಪ ಬಣ್ಣವ
ಣ್ಣಿಗೆಗೆಡೆಗೊಟ್ಟ ಪಟ್ಟೆಗಳ ದಿಂಡುಗಳಂಗಡಿಬೀದಿಬೀದಿಯೊಳ್ ೬೫೪

ಉಗುರಿಂದೆ ಸೀಳ್ದು ಪೆಯ್ಯಂ
ತೊಗಟೆಗಿತ್ತುತೆ ಶಿಖಿಯ ತಂಬಲಗಿತ್ತಿಯರ ಮಿಗೆ
ಸೊಗಸಿನ ಪೆಲ್ಪೋದೆಲೆಗಳ್
ಸೊಗಸಪ್ಪುವು ನಲ್ಮೆಸಾರೆ ನೋಯಿಸಿ ಸುಖದಿಂ ೬೫೫

ವಿವರಿಸೆ ರನ್ನದ ಬಣ್ಣಂ
ಸವಿಯಲ್ಕಂ ಸುಧೆಯ ಸೊಗಸು ವಾಸಿಸಲು ಮೃಗೋ
ದ್ಭವಗಂಧದಷ್ಟಭಾಗದ
ನವಕ್ರಮುಕಂಗಳನೆ ಕೊಳ್ವೆ ಪಸರಗಳೆಸೆಗುಂ

ವಿಧಿಯುತ್ಪತ್ತಿಯಬೀಜಮಂ ಹರಿಜಗತ್ಸಂಪಾದನಾರತ್ನಮಂ
ಮದನಾರಾತಿ ದಿಗಂಬರತ್ವಮಳಿಯಲ್ ಸದ್ವಸ್ತ್ರಮಂ ಭಾಸ್ಕರಂ
ಮೃದುಶ್ಚೈತ್ಯೌಷಧಿಯಂ ಶಶಾಂಕನೊಲವಿಂದಂ ರಾಜಲಕ್ಷ್ಮಿಕ್ಕೆ ಮಾ
ಡಿದ ಮದ್ದೆಂಬಿನಮುಜ್ಜುಗಂದಳೆವರಂತಾ ಸೆಟ್ಟಿಗುತ್ತರ್ಕಳೊಳ್ ೬೫೭

## ಘಟ್ಟಿವಳ್ತಿಯರ ವರ್ಣನೆ

ಸುಳಿಗುರುಳಾಡೆ ತೋಳ್ಗಳಿಡೆಯಾಡೆ ಬೆಮರ್ ಮಿಗೆ ಮೂಡೆ ಸುಯ್ಯೆಲ
ರೆಬಿಲೆ ಕುಚಂಗಳೊತ್ತರಿಸೆ ಕಕ್ಷಪುಟಂ ನಸುದೋಱೆ ಮೇಲುದಿಂ
ಬಳಿಯೆ ಕರಂ ಕರಂ ಕೊರಗೆ ಸೋರ್ಮುಡಿ ಲಂಬಿಸೆ ಕರ್ಣಪೂರಿತೋ
ತ್ಪಲಮೊಲೆದಾಡೆ ಗಟ್ಟಿಗಳನಂದು ಮಗುಳ್ಚಿದರಿಂದುವಕ್ತ್ರೆಯರ್ ೬೫೮
(ಗಿರಿಜಾಕಲ್ಯಾಣಂ ೨-೯೦)

ಕುರುಳ್ಗಳ ಕಪ್ಪು ತಳ್ತಿರಲು ಸಾಣೆಗಳೊಳ್ ಮಿಗೆ ಮಿಂಚುವೆತ್ತು ಭಾ
ಸುರ ಮೃಗನಾಭಿಜಭ್ರಮೆಯನೀವುತಿರಲ್ ಬೆಲೆಗೊಟ್ಟು ಕೊಂಡು ಚ
ಚ್ಚರದೆ ತಳರ್ದು ನೋಡಲದು ಚಂದನಮಾಗಿರೆ ತಪ್ಪಿ ಕೋಪದಿಂ
ದಿರದೆ ಮಗುಳ್ದು ಬಪ್ಪ ವಿಟರಂ ನಗುವರ್ ಮಿಗೆ ಘಟ್ಟವಳ್ತಿಯರ್ ೬೫೯

ನೀರೊಳೆ ಗಂಧದಿಂದರೆದು ಕತ್ತುರಿ ಕಪ್ಪುರ ಕುಂಕುಮಂಗಳಂ
ಸಾರಮನಿಟ್ಟವೋಲ್ ಪರಿಮಳಂಗುಡಲಲ್ಲಿಯ ಘಟ್ಟವಳ್ತಿಯರ್
ನೇರದ ಕತ್ತುರೀಕರುವೊ ಕಪ್ಪುರಬೊಂಬೆಯೊ ಕುಂಕುಮೌಘದಾ
ಕಾರಮೊಯೆಂಬ ಸಂದೆಗಮನಾ ಸಲೆ ಗಂಧಮೆ ಪೇಳ್ವೇ ದಿಟಂ ೬೬೦

ತುಳ್ಕುವ ತುಂಬುಜವ್ವನೆಯರಾ ಪನಿನೀರ್ಗಳೆಲ್ಲಿಯೆ ತುಳ್ಕುತಂ
ಬಳ್ಕುವ ಮಧ್ಯಕಾಂಚಿಯ ಮಹಾಮಣಿದೀಪ್ತಿಕೆ ಕುಂಕುಮಂಗಳೊಳ್
ನಿಳ್ಕಲಪಾಗೆ ಪೊಂಬುಗುರಿಯಂದದ ನುಣ್ಮೊಲೆಯಾಟದೊಳ್ಪೊಗ
ರ್ಗಳ್ಕುಗಳಾದ ಪೊನ್ನ ಧರೆಗಾ ಪೊಳಪಿಂ ಮಿಗೆ ಘಟ್ಟಿವಳ್ತಿಯರ್ ೯೬೧

ಸೀರಿಲ್ಲದ ಬಱುಸಾಣೆಯು
ಲಾರಯೆ ಸಿರಿಗಂಧಗೊರಡಿನಿಂ ತೇಯೆಲ್ ಸತಿ
ಸಾರಸುಗಂಧದ ಗಟ್ಟಿಯು
ಪಾರಂ ಪೊಣ್ಮಿದುದು ನೋೞ್ಪೊಡೇನೊ ವಿಚಿತ್ರಂ ೬೬೨

ನಿಮಿರ್ಕೆವಡೆದೋಳಿಯಿಂದೊಲೆಯೆ ಕುಂತಳಂ ಮೇಲುದಂ
ತೆಮಳ್ಚಿ ಕುಚಮಂಡಳಂ ಕುಣಿಯೆ ಗಂಡಪೊಳ್ ಕುಂಡಲಂ
ಕ್ರಮಂಬಿಡದೆ ಕಂಕಣಕ್ವಣಿತಮುಣ್ಮೆ ಕಾಶ್ಮೀರಮಂ
ಸಮಂತರೆವ ಘಟ್ಟಿವಳ್ತಿಯರದೇಂ ಮನಂಗೊಂಡರೋ ೬೬೩
(ಧರ್ಮನಾಥಪುರಾಣಂ ೨-೮೪)

ನೆಲೆವೊಲೆ ಮೇಲುದಿಂದಿನಿಸು ಪಾಯ್ತರೆ ತಮ್ಮನೆ ಪಾಯ್ದಪೆಂದು ಕೋ
ಟಲೆಗೊಳುತಿರ್ಪ ನೋಟಕರನೋವಮುದರ್ಳ್ಕೆದೆಗಳ್ ತೆಮರ್ದುದಂ
ದಲಸದೆ ಕೂರ್ಮೆವೆತ್ತ ಕೃಪೆಯಿಂದರೆವಂತರೆವರ್ ವರಾಂಗಿಯರ್
ಮಲಯಜಮಂ ಮರಲ್ದು ತನು ಪುಣ್ಣಿಡೆ ಪೂಣ್ದಿಸೆ ಪುತ್ತೆ ಮನ್ಮಥಂ ೬೬೪
(ಧರ್ಮನಾಥಪುರಾಣಂ ೨-೮೫)

ಚಳಿದಳಿಲೋಲಕುಂತಳೆ ಮನಂಗೊಳೆ ನುಣ್ಗಱಿಽಯೊಳ್ ತಗುಳ್ದೆ ತಿಂ
ಗಳೆ ತಿರುಳಂದದೊಳ್ ಬೆರಕೆಗತ್ತುರಿ ಕಪ್ಪುರಮಂ ಪೊದಟ್ಟಿ ಸು
ಯ್ಗಳ ನಱುಗಂಪಿನಂ ಪೊರೆದು ಸಣ್ಣಿಗೆಗೊಂಡರೆಯಲ್ ತಗುಳ್ಚಿದಾ
ಗಳೆ ತನಿವೇಟವಿಟ್ಟರೆಯೆ ಸಣ್ಣಿಸುಗುಂ ಬಗೆ ಕೇಳ್ದ ಮೇಳರಾ ೬೬೫
(ಧರ್ಮನಾಥಪುರಾಣಂ ೨-೮೬)

ಕುಂದದೆ ಪುಷ್ಪಲಾವಿಗೆಯರೆತ್ತಿದ ದೇಸಿಯ ಬಾಸಿಗಂಗಳಿಂ
ದಂದುರೆ ಪೊಣ್ಮೆ ಪಾಯ್ವ ಕುಸುಮಾಸವಮಂ ಸವಿದುರ್ಕಿಸೊಕ್ಕಿದ
ಕ್ಕಂದಲೆವಾಯ್ವುವಾಗಳೆರೆದಣ್ಕೆಯ ಕುಂಕುಮನುಂ ಬೞಿಲ್ದು ಕ್ಕೆ
ಗುಂದಿದ ಘಟ್ಟಿವಳ್ತಿಯರ ಸೂಸುಗುರುಳ್ಗೊಳುನ್ಮದಾಳಿಗಳ್ ೬೬೬
(ಧರ್ಮನಾಥಪುರಾಣಂ ೨-೮೩)

ಎಸೆವ ಪುರಂಧ್ರಿಯರ್ ಪಡೆದು ಸಂಗಡವಿರ್ದು ಮನೋನುರಾಗದಿಂ
ದಸುವೆಯ ಕಲ್ಗಳಿಂ ತೊಳೆದು ಚಂದನಮುಂ ಪನಿನೀರ್ಗಳಿಂದೆ ಜಾ
ರಿಸಿ ಹಿಮಚೂರ್ಣಮುಂ ತಳಿದು ಕಂದುಗಳಿಂ ಪಿಡಿದೌಂಕಿ ನೂಂಕಿದರ್
ದೆಸೆದೆಸೆಗೆಲ್ಲ ಕಂಪೆಸೆಯೆ ಘಟ್ಟಿಮಗುಳ್ಚುಗು ಘಟ್ಟಿವಳ್ತಿಯರ್ ೬೬೮

ಚಂದನಗಂಧಕ್ಕಂ ವದ
ನೇಂದೀವರ ಪರಿಮಳಕ್ಕಮೆಱಗುವ ಭೃಂಗೀ
ವೃಂದಮನುರು ಸೋವುತ್ತಂ
ಮಂದ್ಯೈಸಿ ಮಗುಳ್ಚಿ ಘಟ್ಟಿವಳ್ತಿಯರೆಸೆಗುಂ ೬೬೯

## ಮಾಲೆಗಾರ್ತಿಯರ ವರ್ಣನೆ

ನೆನೆದರ ಚಿತ್ರಮಂ ನೆರೆಯೆ ಕಮ್ಮನೆ ನೋೞ್ಪರ ಕಣ್ಣ ಬೆಳ್ಪು ಕ
ಮ್ಮನೆ ಮಿಗೆ ಮಾತಾಡುವವರ ಪೊಲ್ಮುಡಿ ಕಮ್ಮನೆ ಮೆಯ್ಗಳೆಯ್ದೆ ಕ
ಮ್ಮನೆ ದೆಸೆ ಕೂಡೆ ಕಮ್ಮನೆ ಕರಂ ನವಕೌಮುದಿ ಕಮ್ಮನಾಗೆ ಕಂ
ಪಿನ ಪೊಸಲಿತ್ತಱಿಂ ಪರಿವ ಪೂವಿನ ಸಂತೆಯನೆಯ್ದಿದಂ ನೃಪಂ ೬೭೦
(ಲೀಲಾವತಿ ೨-೨೮)

ನಯನಮರೀಚಿಗಳ್ ಪುದಿಯೆ ನೀಲದ ಮಾಲೆಗಳಂತೆ ಕೈಯ ಕಾಂ
ತಿಯ ಪುದುವಿಂದೆ ಮಾಣಿಕದ ಮಾಲೆಗಳಂತಿರೆ ನಿಚ್ಚಮಚ್ಚಜಾ
ತಿಯ ಪೊಸಮಾಲೆಗಳ್ವಿಡಿದು ಮಾಱುವ ನೀಱೆಯರಲ್ಲಿ ಮಾಲೆಗಾ
ರ್ತಿಯೊ ಮಣಿಗಾರ್ತಿಯೋಯೆನುತಲಿರ್ಪುದು ಸಂಶಯಭಾಜನಂ ಜನಂ ೬೭೧
(ಧರ್ಮನಾಥಪುರಾಣಂ ೨-೭೯)

ಕಡು ನಿಡುಗಂಗಳಂಗಜನಕೀರ್ತಿಪತಾಕೆಯನೆತ್ತಿ ನೆಟ್ಟನೊ
ಳ್ನಡು ನಿಡುವಾಸೆಯೊಳ್ ಪುದಿವ ಪೈಸಿರಿಯಂ ಪಿಡಿಪೆತ್ತಿ ಪೊಂಗಿ ಪೊಂ
ಗೊಡಮೊಲೆ ಮೇಲುದಂ ಭರದಿನೆತ್ತೆ ನೆಗೞ್ತಿಯ ಮಾಲೆಯೆತ್ತೆ ಕೈ
ಯ್ಯೊಡನಗೆಯೆತ್ತುವರ್ ವಿಟರ ಬಿಂಕಮನಂಕದ ಮಾಲೆಗಾರ್ತಿಯರ್ ೬೭೨
(ಧರ್ಮನಾಥಪುರಾಣಂ ೨-೮೦)

ನೋಡಿದೊಡೀಕೆ ಪೊಚ್ಚಪೊಸನೆಯ್ದಿಲಮಾಲೆಗಳಾದುವೋತು ಮಾ
ತಾಡಿದೊಡೋವೊ ಬಂದುಗೆಯ ಮಾಲೆಗಳಾದುವು ಮಂದಹಾಸಮಂ
ಮಾಡಿದೊಡಚ್ಚಮಲ್ಲಿಗೆಯ ಮಾಲೆಗಳಾದವಿದೊಂದು ಚೋದ್ಯಮಂ
ನೋಡಿರೆ ಮಾಲೆಗಾರ್ತಿಯೊ ದಿಟಕ್ಕಿವಳಗ್ಗದ ಮಾಯಗಾರ್ತಿಯೋ ೬೭೩
(ಧರ್ಮನಾಥಪುರಾಣಂ ೨-೮೧)

ಬಗೆಗೊಂಬೀಯುವಲೋಕಮಾತ್ರದೊಳೆ ಪೂಣ್ದೀ ಲೋಕಮಂ ಗೆಲ್ದ ಕಂ
ತುಗೆ ಪೂಜಾರ್ಥಮಿದೆಂದು ಸುಯ್ಗೆಱಗಿದುನ್ಮತ್ತಾಳಿಯಿಂ ಬೀರದೇ
ಟಿಕ್ಕಗಳಂ ಪಾಡಿಸುತಂ ಜಯಧ್ವಜವನೆತ್ತಿರ್ಪಂತಿರೇಂ ತೀರ್ದ ಮಾ
ಲೆಗಳುಂ ತೋಳ್ಗೆಳೊಳೊಪ್ಪೆ ಕಂಗೊಳಿಸಿ ತೋರ್ಕುಂ ಪುಷ್ಪಲಾವೀಜನಂ ೬೭೪

ಎತ್ತಿದದೊಂದು ಮಾಲೆ ಪೊಸಪೂವಿನ ಬಿಲ್ಲವೊಲಾಗೆ ಕೂಡೆ ಬೆಂ
ಬತ್ತುವ ನೋಟಮುಂಗಜನ ಬಾಣದವೋಲಿರೆ ಕಾಯಕಾಂತಿ ಸೈ
ತೊತ್ತಿದ ಮೌರ್ವಿಯಂತಿರೆಸೆವಿಂದುವಿನೊಳ್ಮೃಗನುಂ ಕಱುತ್ತು ಕೋ
ಲೆತ್ತುವ ಬೇಂಟೆಗಾರ್ತಿಯರವೋಲೆಸೆದರ್ ಮಿಗೆ ಮಾಲೆಗಾರ್ತಿಯರ್ ೬೭೫

(ಗಿರಿಜಾಕಲ್ಯಾಣಂ ೨-೮೮)

ತರತರದಿಂದೆ ಬಾಹುಲತೆ ಪುಷ್ಪಿತಮಾದುದೊ ಕಾಮಮಾರ್ಗಣಂ
ತರುಣಿಯರಿಂದೆ ಕಟ್ಟುವಡೆದಿರ್ದುದೊ ಮೇಣ್ ನಱುಸುಯ್ಗೆ ಕೂರ್ತು ಬಂ
ದುರುತರಮಾಲೆಯೊ....ಕೆ ಪೇೞ್ವೆನೆ ದಿವ್ಯಸುಗಂಧದಿಂ ಮನೋ
ಹರಮೆನಿಸಿರ್ಪ ಪೊಚ್ಚಪೊಸಮಾಲೆಯನೆತ್ತುಗುಃ ಮಾಲೆಗಾರ್ತಿಯರ್ ೬೭೬

ತರಳೆ ಕಟಾಕ್ಷಮಾಲೆಯೊ ಸಿತೋತ್ಪಲಮಾಲೆಯೊ ಕಯ್ಯ ಮಾಲೆಯೋ
ಸಿರಿಸದ ಮಾಲೆಯೋ ಮಿಸುಪ ಜಾತಿಯ ಮಾಲೆಯೊ ಪೇೞ್ವೆನಿಪ್ಪ ನೀ
ಱರ ಸೊಬಗಂ ಪೊದಲ್ಗೆಡಿಸೆ ತೋಳಪೊದಲ್ಚಿಲೆಪೂವನೆತ್ತುವಂ
ತಿರೆ ನನೆಯಂಬುಗಳ್ಗೆ ಬೆರಲೆತ್ತುವರಲ್ಲಿಯ ಮಾಲೆಗಾರ್ತಿಯರ್ ೬೭೭

(ಮಲ್ಲಿನಾಥಪುರಾಣಂ ೨-೫೯, ಸೂಕ್ತಿಸುಧಾರ್ಣವಂ ೪-೧೨೦)

ಉಗುರ್ಗಳ ಕಾಂತಿಯುಂ ನಯನಕಾಂತಿಯುಮೊಂದಿ ಕದಂಬಮಾಗಿ ಸಂ
ಪಗೆಯೆಸಟಿಂತೆ ಸ್ಫದಿಲೆಸಟಿಂತೆ ವಿಮೋಹಮನೀಯೆ ಮಾಱುಗೊಂ
ಡಗಲಲೊಡಂ ಬಱಿಕ್ಕೆ ಮಧುಮಲ್ಲಿಗೆಯಾಗಿರೆ ಬಂದು ಮಾಯವಾ
ಸಿಗಮಿದು ಸಲ್ಲದೆಂಬ ವಿಟರಂ ನಗುವರ್ ಮಿಗೆ ಮಾಲೆಗಾರ್ತಿಯರ್ ೬೭೮

(ಸೂಕ್ತಿಸುಧಾರ್ಣವಂ ೪-೧೨೧)

ಪೂಗೊಳಲೆಂದು ಬಂದ ವಿಟಸಂತತಿಯಳ್ಕಿರ್ದೆ ಡಿಳ್ಳವಪ್ಪಿನಂ
ಪೂಗಣೆಯುರ್ಚೆ ಮೂರ್ಛೆಗೊಳಗಾಗಲೊಡಂ ಕಡುಪಿಂದ ಪ್ಕೈಗಳೋಳ್
ಪೂಗೊಳದತ್ತಲೊಯ್ದು ಮದನಾಗ್ನಿಯನಾಱಿಸುವಂತೆ ಮಾಡುವಾ
ಪೂಗಳನೊಪ್ಪೆ ಕಟ್ಟಿ ಪೊಸಮಾಲೆಯನೆತ್ತುವ ಮಾಲೆಗಾರ್ತಿಯರ್ ೬೭೯

ಭರದಿಂ ಪೂಮಾಲೆಗಳಂ
ತರದಿಂ ಪಿಡಿದೆತ್ತಿ ನಿಂದ ಶಶಿಮುಖಿಯರ್ ಬಂ
ಧುರ ಶಶಿಕಲೆಗಳನೀವಂ
ತಿರುತಿರ್ದರ್ ವಿಟಚಕೋರಸಂತತಿಗಾಗಳ್ ೬೮೦
(ಗಿರಿಜಾಕಲ್ಯಾಣಂ ೨–೮೫)

ವರಮಲ್ಲಿಗೆ ಮಾಲೆಗಳೊಳ್
ಬೆರೆದಿಹ ಮಧುಕರಕದಂಬದಿಂದಂ ನೀಲೋ
ತ್ಕರಮುಂ ಮೌಕ್ತಿಕಮುಂ ಪೋ
ಲ್ತಿರೆ ಪೇಱಿದಳ್ ಮಾಲೆಗಾರ್ತಿ ಮಣಿಗಾರ್ತಿಯವೋಲ್ ೬೮೧
(ಗಿರಿಜಾಕಲ್ಯಾಣಂ ೨–೮೬)

ನಗೆಗಣ್ಗಳ ಕಾಂತಿಯ ಸೆ
ಳ್ಪುಗುರ್ಗಳ ಕಾಂತಿಯು ಕರದ್ವಯದ ಕಾಂತಿಯು ಮಾ
ಲೆಗಳಂ ಪೊಸಪೂವಿನ ಮಾ
ಲೆಗೆತ್ತು ಬೆಲೆಗೊಟ್ಟು ಕೊಂಡು ನಗಿಸಿದನೊರ್ವಂ ೬೮೨
(ಗಿರಿಜಾಕಲ್ಯಾಣಂ ೨–೮೭)

ಎತ್ತಿದುದೊಂದು ಪೂಸರಕೆ ಚಂದ್ರಮನಗ್ನಿಸುರಾಧಿಪರ್ಕಳುಂ
ಚಿತ್ರಮನಿಟ್ಟುದಲ್ಲದೆ ಸುಧಾಕರ ನಿಮ್ಮೊಯುಮುನ್ನಿದೇವೆಯುಂ (?)
ಚಿತ್ರರಲಂತ್ಯದಿಂ ಹರಿಹರಾದಿಗಳಾಸೆ ನಿರಾಸೆಯಾದುದೆಂ
ದುತ್ಪಲಮಾಲೆಯಂ ನೆಗಪಿ ತೋಱುಸುತಿರ್ದಳು ಮಾಲೆಗಾರ್ತಿಯುಂ ೬೮೩

ಸುರಪತಿ ಸೋಲ್ತನಕ್ಕಟ ಸುಧಾಕರಸೋಲ್ತ . . . ಮತ್ತೆ ಭಾ
ಸ಼್ರರುಗಳೊಪ್ಪೆ ಮೂವರುಗಳೊತ್ತಿನಲಗ್ನಿಯು ಸೋಲ್ತನೆಲ್ಲರುಂ
ನಿರುತದಿ ಸೋಲ್ತರೊಮ್ಮೆ ಪದಿಮೂಱೂನ ಪೂವಿಗೆಯಂದುಮಾಗಪೂ
ಸರವನು ಎತ್ತಿ ತೋಱಿದಳು ಚಂಪಕಮಾಲೆಯ ಮಾಲೆಗಾರ್ತಿಯುಂ(?) ೬೮೪

ನಲ್ಲನಗಲ್ದು ಮಿರ್ಪ ಸರಗಾರ್ತಿಯು ಬಲ್ವಿರಹೀಣಿಯಾಗುತಂ
ಫುಲ್ಲಶರಂಗಳಂ ಕ್ರಯುವಮಾಡುತಲೊಪ್ಪುತಲಿಪ್ಪ ವೇಳೆಯೊಳ್
ನಿಲ್ಲದೆ ಮುಸ್ಮಘಂ ಬರುತೆ ಬಾಣಮು ತೊಟ್ಟುಱಿ ಕೋಪದೇಱ್ಗಿಯಿಂ
ಬಿಲ್ಲುಮನೆತ್ತಿ ತುಯ್ದೆ ಸೆಯೆ ನಾರಿಯು ಖಂಡಿಸಿತೇನ್ವಿಚಿತ್ರಮೋ ೬೮೫

ತರಳಾಪಾಂಗಂಗಳೊಳ್ ಮಚ್ಚರಿಪಲರ್ಗಣೆಯಂ ಕಟ್ಟಿ ತೋರ್ಪಂದದಿಂ ಚಾ
ಮರಮಂ ವಕ್ಷೋಜಪೀಠಸ್ಥಿತ ಮದನನೃಪಂಗೆತ್ತುವಂತೆತ್ತಿ ಪೂವಂ
ದರಹಾಸಶ್ರೀಯನೀವಂತಿರೆ ಪೊಸನನೆಗಳ್ಗಂತವಂ ಸುಯ್ಯಕಂಪಿಂ
ಪೊರೆವಂತಾ ಸಂತೆಯಿಂದಂ ತೊಲಗದು ಸತತಂ ಪುಷ್ಪಲಾವೀಕದಂಬಂ ೬೮೬
(ಲೀಲಾವತಿ ೭-೧೪, ಸೂಕ್ತಿಸುಧಾಣವಂ ೪-೧೧೮)

ನಱುಸುಯ್ಗಂ ಮಾಲೆಗಂ ಸೂಟಿಱುಪೆಱಗುವಿನಂ ತುಂಬಿಗಳ್ ನೋಡಿದರ್ ಪೆಯ್
ಮಱೆವನ್ನಂ ಬಾಹುಮೂಲಂ ಪೊಗರನುಗುಳ್ವಿನಂ ಕಣ್ಮಲರ್ ಬಳ್ಳಿಮಿಂಚಂ
ಕಱೆವನ್ನಂ ಮಾಲೆಪೂವಂ ನೆಗಪಿ ಸೊಗಯಿಕು [೧]ಪಾಂಥರಂ[೧] ಪುಷ್ಪಚಾಪಂ
ಗುಱಿಯೇಸಂ ತೋಱಲಂಬಂ ಪೊಡೆಗೆದಱುದವೋಲ್ ಪುಷ್ಪಲಾವೀಕದಂಬಂ ೬೮೭
(ಪಂಪರಾಮಾಯಣಂ ೧-೧೨೦, ಸೂಕ್ತಿಸುಧಾರ್ಣವಂ ೯-೧೧೯)

ಸಾರಸುಗಂಧದಿಂಪೆಸೆನ ಪೂವಿನಮಾಲೆಯನೀಪೆನಿತ್ತ ಬಾ
ಬಾರೆಲೆ ಧೂರ್ತಯೆಂಬವಳ ತೋಳ್ಪೊದಲ್ಗಳನುನ್ನತಸ್ತನಾ
ಕಾರಮನೆಯ್ದೆ ಕಂಡು ನಡೆಗೆಟ್ಟಿರೆ ದೂರದೊಳಿರ್ಪೆಯೇಕೆನಲ್
ದೂರಿತರಲ್ತೆ ಪುಷ್ಪವತಿಯಾದಳ ಕಂಡರೆ ನೀತಿಮಾರ್ಗದರ್ ೬೮೮

ಮಘಮಘಿಸುತ್ತಲಿರ್ಪ ನಱುಸುಯ್ ಪೊಸಪೂಗಳಕಂಪನೆತ್ತೆ ಸು
ಣ್ಣೊಗಮಿರದಚ್ಚದಾವರೆಯ ಪೆಯ್ ಸಿರಿಯಂ ಪಿಡಿದೆತ್ತೆ ನೀಳ್ದ ಸೆ
ಳ್ಳುಗುರ್ಗಳ ಬೆಳ್ಪು ಕೇದಗೆಯ ಕುತ್ತೆಸಲಿಱೋಳಿಯನೆತ್ತೆ ಸುತ್ತಲುಂ
ಸೊಗಯಿಸುತಿರ್ಪ ಬಾಸಿಗನನೆತ್ತುವರಗ್ಗದ ಮಾಲೆಗಾರ್ತಿಯರ್ ೬೮೯
(ಕಬ್ಬಿಗರಕಾವಂ -೪೦-)

ಪೂವಿನ ಸಂತೆಯ ಪರಿಮಳ
ಮಾವೂರ ಗೃಹಂಗಳೊಂದನುಳಿಸದೆ ಪೊಕ್ಕಾ
ಜೀವನ ದೇಹಗಳೆಲ್ಲವ
ನೋವೋ ಪರಿಮಳಿಸಲ್ಕಾವ ಲೋಕದ ಪೂವೋ ೬೯೦

ತುಂಬಿಯ ಮಾಲೆಯೀಯಲರಮಾಲೆ ನಖಾಳಿಯ ಕಾಂತಿಮಾಲೆಯೀ
ಯಂಬುಜಲೋಚನಾಂಶುಘನಮಾಲೆಯೊಳಾವುದಕೀಪೆನರ್ಘಮಂ
ರಂಭೆಗೆ ಪಾಟಿಯಾದ ವಧುವೆಂಪೆನೆ ತನ್ನಕಟಾಕ್ಷದೋರೆಯಿಂ
ತಾಂ ಬೆದಕಲ್ಕೆ ಭಾಪು ಬೆಲೆಗೊಟ್ಟವನೆಯ್ದಿದನೇಂ ಪ್ರವೀಣನೋ ೬೯೧

---

[೧] ನೀಱರೊಳ್ (ಸೂ)

ಎನಗಂ ಬೇಡಿದ ಮಾಲೆಯುಂಟೆಯೆನೆಲೊರ್ವಂ ಬಾಲೆ ಕೈಮಾಲೆಯೊಂ
ದನೆ ತೋಱಲ್ಕೆಲೆ ಹೆಣ್ಣೆ ಕಣ್ಣ ಕಡೆಯಾ ಶ್ರೀಮಲ್ಲಿಕಾಮಾಲೆಯಿ
ರ್ದನಗಿಂದೀ ನನೆಮಾಲೆಯುಂ ನೆರೆಯೊಳೊಪ್ಪಂದೋರ್ಪುದೊಂದಪ್ಪುವೇ
ಯೆನೆ ನಕ್ಕಾ ಗುಣಿ ಮಾಲೆಗಾರ್ತಿ¹[ಯೊರೆದಾ]¹ಜಾಣ್ಮಾತದೇಂ ಚಿತ್ರಮೋ ೬೯೩

ಮಾಲೆಯನೆತ್ತಿ ನೋಡುತಿರೆ ತನ್ನಿನಿಯಂ ತಡೆದೆಯ್ದಲಾಗಲಾ
ಮಾಲೆಯೆ ಕೆಂಪನಾಳ್ದುದನನೊಳ್ನುಡಿಗಾಣಿಸೆ ಜೆಳ್ಪನಾಂತುದಾ
ಮಾಲೆಯೆ ಸೋಂಕಲಾಕೆಯವನಂ ಕರಿದಾದುದಿದೇಂ ವಿಚಿತ್ರಮೋ
ಲೋಲತರಾಕ್ಷಿಯೊಳ್ ತ್ರಿಗುಣಮಾದುದು ನೋಟಿಪ್ಪೊಡೆ ಮಾಲೆಗಾರ್ತಿಯೊಳ್ ೬೯೪

## ಜೂಜುಗಾಱರ ವರ್ಣನೆ

ರಾಜಕುಮಾರಕರ್ ನಿಜವಿನೋದಿಗಳಂಗವಿಕಾರಿಗಳ್ ಕಳಾ
ಯೋಜಪರಾರ್ಥಿಗಳ್ ಸುಭಗಮೂರ್ತಿಗಳೊಪ್ಪುವ ನಾಗರೀಕನಾ
ನಾಜನಮಂದು ಪೆಂಪೆಸೆವ ಮಂದಿರದೊಳ್ ನೆರೆದುತ್ಸವಂ ಮಿಗಲ್
ಜೂಜುಗಳಂ ಸಮಗ್ರಮೆನಲಾಡುತಿರ್ದರದೊಂದು ತಾಣದೊಳ್ ೬೯೫

ಸಮರಪೆ ದಾಯಮಂ ಪಿಡಿವ ವಿತ್ತವನೊಡ್ಡುವ ಜೊತ್ತುಗಾಱರಿಂ
ದಿದಿರವರಂ ತೆರಳ್ಚಿಸುವ ಧಾಳಿಸಿ ಮೆಯ್ಯಱದಕ್ಷಮಂ ಕರಾ
ಗ್ರದಿ ಗುಱದಂಡೆಗೊಳ್ವ ತೆಗೆಯಾಗಳೆ ತಾಗಿತೆನುತ್ತ ಸಾರಿಯಂ
ಕೆಡಱುವ ನೆತ್ತಗಾಱರ ವಿನೋದಮದೊಪ್ಪಿದುದತ್ಯಪೂರ್ವದಿಂ ೬೯೬

ತಾಗುವ ದಾಯಮಂ ತೆಗೆವ ತಪ್ಪಿಸಿ ಸಾರಿಯನೊಡ್ಡಿಕೊಂಬ ಗೆ
ಲ್ವಾಗಱದೊಡ್ಡನೇಱಸುವ ಮೆಯ್ಯಱದಕ್ಷವನೊಯ್ಯನೆತ್ತಿ ಕೈ
ವೇಗದೊಳಾರ್ದು ಧಾಳಿಸುವ ಪಾವುಗೆಸಾಕೆನಲೇಟ್ವ ಬಿನ್ನಣ
ಕ್ಕಾಗರಮಾಗಿ ನೆತ್ತಗಳನತ್ತಣ ಜೊತ್ತುಗಳಿಂ ನೆಗಳ್ಚಿದರ್ ೬೯೭

ಡಾಳಿಸಿ ಹಾಸಂಗಿಗಳಂ
ಹೇಳಿದ ದಾಯವನು ಹಾಯ್ಕಿ ಹೆಚ್ಚಿಸಿ ಗಣಮಂ
ಸೋಲದೆ ಸಮವೆನಲಾಡುವ
ಲೀಲೆಯ ನೆತ್ತದಲಿ ಜೂಜುಗಾಱರ್ ಮೆಱೆದರ್ ೬೯೮

---

¹ಯುದನಾ(ಸ)

ಅರಸೆನಲೀಯದೆ ಕರುವಂ
ಸರಿಗೊಳ್ಳದೆ ತುರಗಹಸ್ತಿತೇರ್ ಭಟರಿರುತಿರೆ
ಲರಸಂ ನಡುವಕೆ ಕಟ್ಟುವ
ನಿರುತಂ ಚದುರಂಗದವರ್ ಮೆಱೆದರ್ ಪುರದೊಳ್ ೧೯೯

ಬಿರಯಿಗಳನೆಸುವ ಮದನನ
ಶರಾಸನಂಗಳಿರದೆ ಸಿಲುಕಿ ಮಿರ್ದುವನೆತ್ತುವ
ನಿರದೇ ಖಂಡಂಮಾಟೆಪ್ಪೊಲು
ತರತರದಿಂ ಕರ್ವುಜೂಜುಗಾಱರ್ ಮೆಱೆಗುಂ(?) ೨೦೦

ಪೊಱಗೊಳಗು ಸಾಮ್ಯವಿಲ್ಲದ
ಬರಹುಂಡಗೆ ಕೇಳೀವನವ್ರೋಲ್ ಕೆಣ್ಮಾಱೆನು
ತಿರದೆ ಪೊಡೆದೊಡೆವ ಜೂಜಿನೊ
ಳಿರಕದ ಚೆಂಡೆಂಗುಗಾಯ್ಗಳೊಡೆವರ್ ಮೆಱೆಗುಂ(?) ೨೦೧

ಕುಂಕುಮದ ಪುಡಿಯ ಕೆಸಱಿನೊ
ಳಂ ಕಡುಧೈರ್ಯದಲಿ ವಜ್ರಮುಷ್ಟಿಯನೆತ್ತುತ
ಲೌಂಕಿ ಸಮಸಂದು ಹೆಣಗುವ
ಬಿಂಕದ ಮಲ್ಲಾಳ್ಗಳಧಟುಗಾಳೆಗ ಮೆಱೆಗುಂ ೨೦೨

ನೀಲಾದ್ರಿಯ ಮಱಿಯೆರಡಂ
ಶ್ವೈಲಾದ್ರಿಯ ಸೆಱೆಯುತಂದುವ್ರಲಿಯುತ್ತಿದ್ದ ಕೆ
ಸಾಲಿಡೆ ಬಿಟ್ಟೊಲು ಮಹಿಷನ
ಕಾಳೆಗಗಳು ಸೊಗಸುತಿರ್ಪುವಾ ಬೀದಿಗಳೊಳ್ ೨೦೩

ತಳಿಯಿಟ್ಟು ಗಂಧಗಜಗಳ
ನಿಲಿಸುತಲಿಬ್ಬದಿಯೊಳೊಟ್ಟಿ ಮಾವ್ರತರೆಡನಱಿಂ
ದಲೆದು ತಿವಿತಿವಿದು ಮೋಡಿಪ
ಬಲುಮದದಾನೆಗಳ ಕಾಳೆಗಂ ಕಣ್ಗೊಳಿಕುಂ ೨೦೪

ಮದವೆದ್ದು ಚರಿಪ ಜೀವ
ಗಿರದಿರೊಳ್ ತಲೆದಾಗುಗಿಂತುಮೆಂಬವ್ರೋಲ್ ತಾಗುತ
ಲಿದಿರಾರ್ದು ಕಾದಿ ಕನಲುವ
ಪದಿಲದ ತಗರುಗಳ ಕಾಳೆಗಂ ಕಣ್ಗೊಳಿಕಂ ೨೦೫

ಆಯುಧದಭ್ಯಾಸಂಗಳೆ
ನಾಯಂಗಳ ತೋಱುತಂಗಡೊಳು ತೊಲಗದೆ ನಿಂ
ದೊಯ್ಯಾರದಿಂದಲಿಱುವ ವಿ
ಡಾಯದ ಮಾಸಾಳುಗಾಳೆಗಂ ರಂಜಿಸುಗುಂ ೨೦೬

## ವೇಶ್ಯಾವಾಟಿಯ ವರ್ಣನೆ

ರತಿರೂಪಾಂತಧ್ವಜಂ ಮನ್ಮಥನಿಚಿತಪತಾಕಾಳಿ ಸೌಧಾವಿಜೃಂಭಾ
ಯತ ಬಂಧದ್ವಾರಮುಂಗೋದ್ಭವಪರಿತ ಕಥಾಲೇಖ್ಯವದ್ಭಿತ್ತಿ ಪಾರಾ
ವತಕೀರ್ಣಶ್ರೇಣಿ ವಿಭ್ರಾಜಿತಮಣಿಮಯಕೂಟಂ ವಿಮಾಣಿಕ್ಯಶೋಭಾ
ನ್ವಿತನಾನಾವೇದಿಕಾಂತದ್ವಿಷಯಮೆನಿಸುಗಲ್ಲಲ್ಲಿ ವೇಶ್ಯಾಲಯಂಗಳ್(?) ೨೦೭

ಬತ್ತಲೆ ಬಂದ ಮುನೀಂದ್ರರ್
ಸುತ್ತುವರತಿವಿಭವದಿಂದಲುಟ್ಟಿರ್ದವರುಂ
ಬತ್ತಲೆಪೋಪರ್ ಸೊಬಗಿನ
ಬಿತ್ತರದಿಂದೆಸೆವುವವಱ ವೇಶ್ಯಾವಾಟಂ ೨೦೮
(ಸೂಕ್ತಿಸುಧಾರ್ಣವಂ ೪–೧೨೫)

ಮನಸಿಜನಾಣೆ ಮನ್ಮಥನ ಘೋಷಣೆ ದರ್ಪಕನೇಱಿತ್ಗ ಕಂತುರಾ
ಜನ ವಿಜಯಪ್ರಶಸ್ತಿ ರತಿನಾಥನ ಸೃಷ್ಟಿ ಮನೋಜ್ಞನಾಜ್ಞೆ ಕಾ
ಮನ ಪೊಸದೇಸಿ ಚಿತ್ತಜನ ಬಿತ್ತಿ ಹರಾರಿಯ ಬೀರಮಂಗಜ
ನ್ನನ ಬಿರುದಿಲ್ಲದಿಲ್ಲ ಮಱೆಜಿಲ್ಲಿಯುಮಲ್ಲಿಯ ಸೂಳೆಗೇರಿಯೊಳ್ ೨೦೯
(ಸೂಕ್ತಿಸುಧಾರ್ಣವಂ ೪–೧೩೭)

ಗರುವರ ಗೊಟ್ಟಿಗಾಱರ ನೆಗಱಿತ್ತ್ರಯ ಮಿಂಡರ ಮೇಳಗಾಱರ
ಕ್ಕರಿಗರ ಸಂದ ಕಬ್ಬಿಗರ ಜೋಡೆಯ ಭಂಡರ ಸಾರ್ದ ನೆತ್ತಗಾ
ಱರ ಚದುರಂಗಗಾಱರ ಚದುರ್ನುಡಿಗಾಱರ ಬೀಣೆಗಾಱರಾ
ಗರಮೆನೆ ಪೆಂಪು ಸೊಂಪನೊಳಕೊಂಡೆಸೆದಿರ್ಪುದು ಸೂಳೆಗೇರಿಗಳ್ ೨೧೦
(ಕಬ್ಬಿಗರಕಾವಂ –೪೨–)

ಚದುರಿನವಾರ್ತೆದಾಣಮಲರಂಬನನಚ್ಚಿನಮುರ್ದು ಮಾದ ಮಾ
ಯದ ನೆಲೆಯೂರು ಜೂರುಳ ತವರ್ ತನದುಕ್ಕೆವದಿರ್ಕೆ ಟಕ್ಕುವೇ
ಟದ ಬೆಳೆಗೆಯ್ ತಗುಳ್ಕಳುಪಿನಂಗಡಿ ಗನ್ನದ ಗೊತ್ತು ತಥ್ಯಮೆ
ನ್ನದೆ ಕೆಜತ್ತೆಂಬಿರ್ಪೆ ಕೃತಕಪೇಟೆಯನಲ್ಲಿಯ ಸೂಳೆಗೇರಿಯುಂ ೨೧೧

ಅವಿರಳವಾದ ಕೇಳಿ ವನಕೇಳಿ ಸರೋವರಶೋಭೆಯಿಂ ಸುಧಾ
ಧವಳಿತರಮ್ಯಹರ್ಮ್ಯ[1]ಕುಲಮುಂ[1]ಬಕದಿಂ ವರವಾರಕಾಮಿನೀ
ವಿವಿಧ ವಿಡಂಬದಿಂ ಸೊಗಯಿಕುಂ ವಿಟವೃಂದವಿಹಾರಿಗಳ್ ಮನೋ
[2]ಜಯಕಾರಿಗಳ್ ಹೃದಯಹಾರಿಗಳಲ್ಲಿಯ[2] ಸೂಳೆಗೇರಿಗಳ್ ೭೧೨
(ಜಗನ್ನಾಥವಿಜಯಂ ೯-೯೯)

ಮುನಿದುಱಿದಿರ್ಪ ಪೋಪುಱಿದುಪೋದೊಡೆ ಪಿಂಪನೆ ಬರ್ಪ ಬಂದು ಕ
ಣ್ಬನಿ ಕಡೆಗಣ್ಮೆ ಪೊಣ್ಮುತಿರೆ ಕಾಲ್ವಿಡಿದೋಪನನೋಪಳುಯ್ದು ನಂ
ದನವನಮಧ್ಯಕೇಳಿಗೃಹಮಂ ಪುಗುತಿರ್ಪ ವಿಚಿತ್ರ ಭಾವಮಂ
ಜನಿಯಿಪುದಾ ಸುಧಾಗೃಹದ ಭಿತ್ತಿಗಳುರ್ವಿಗಪೂರ್ವಭಿತ್ತಿಗಳ್ ೭೧೩
(ಜಗನ್ನಾಥವಿಜಯಂ ೯-೧೦೨)

ಲಲಿತೋಜ್ಜೃಂಭಿತರಾಜಹಂಸರಮಣೀಲೀಲಾಹರಿಧ್ವಾನಸಂ
ಕುಳಮುದ್ಯತ್ಸುಮನಃಪ್ರತಾಪನಿಚಿತಂ ತಾರಾಳಿಮುಕ್ತಾಕರಾ
ವಳಿರಮ್ಯಂ ಪರಿಪೂರ್ಣಪುಷ್ಕರವಿಚಿತ್ರಾಕೀರ್ಣವರ್ಣಂ ಕರಂ
ಕೊಳನಂ ವ್ಯೋಮಮನೆಯ್ದೆ ಪೋಲ್ತುದು ನಿಜಾವಾಸಂ ಸರೋಜಾಸ್ಯೆಯಾ ೭೧೪

ಪೊಸತೆನಿಪೊಂದು ಪಕ್ವಫಲಮೆಂದರುಣಾಧರಮಂ ಕರ್ದುಂಕಲಾ
ಟಿಸುತಿರಲೌಡುಗರ್ಚಿ ಭರದಿಂ ನಿಲೆ ತತ್ಫಲಮೆತ್ತಪೋದುದೆಂ
ದಸಿಯಳ ಹಸ್ತದಿಂದಿಱಿದು ತನ್ಮಣಿಕುಟ್ಟಿಮದೊಳ್ ತೊಳಲ್ದು ವೀ
ಕ್ಷಿಸುವತಿಮುಗ್ಧರಾಜಶುಕಮೊಪ್ಪುಗುಮಾ ಗಣಿಕಾಗೃಹಂಗಳೊಳ್ ೭೧೫
(ಜಗನ್ನಾಥವಿಜಯಂ ೯-೧೦೧)

ಟಂಕೃತಿ ಮಿಗೆ ಜೇವೊಡೆಯು
ತ್ತಂ ಕಬ್ಬಿನ ಬಿಲ್ಲನರಳಸರಳಂ ತೂಗು
ತ್ತಂ ಕರಮೆಸೆದಲ್ಲಿ ತೊಳ
ಲ್ವಂ ಕಡುಬಿಲ್ಗಾಱನತನು ಸಂಭ್ರಮದಿಂದಂ ೭೧೬
(ಜಗನ್ನಾಥವಿಜಯಂ ೯-೧೦೩)

ಕಳೆ ಕರ್ಪೂರದ ಕಸಮುಂ
ತಳಿ ಕತ್ತುರಿನೀರನಿಕ್ಕು ಮುತ್ತಿನ ಕಡೆಯಂ
ಬೆಳಗು ಮಣಿದೀಪಮಂ ಪೊಗೆ
ಗೊಳಿಸಗರುವನೆಂಬರಲ್ಲಿ ಸೂಳೆವಳರ್ಕಳ್ ೭೧೭
(ಜಗನ್ನಾಥವಿಜಯಂ ೯-೧೦೦)

---

[1] ನಿಕರಂ(ಅ) [2] ಭವಧಾರಿಗಳ್ ತಪವಿದಾರಿಗಳಲ್ಲಿಯ(ಸ)

ಕಡಲೊಡೆಯನಿತ್ತ ರನ್ನದ
ತೊಡವಂ ತೊಡು ಗೌರಿಯಿತ್ತ ಪೊಂಬಟ್ಟೆಯ ನೀ
ನುಡು ಸಸಿಯಟ್ಟಿದ ಪೂವಂ
ಮುಡಿಯೆಂಬೀ ರವಮೆ ಸೂಳೆಗೇರಿಯೊಳೆಲ್ಲಂ ೭೧೮

ಅರುಣಾಧರೆ ಶಶಿಮುಖಿ ಕನ
ಕರೋಚಿ ಸೌಮ್ಯಾಂಗಿ ವಿಮಲಗುರುಕುಚೆ ಸಿತವಿ
ಸ್ಫುರಿತದೃಶೆ ಮಂದಯಾನೆಯೆ
ನುರುಮುದದಿಂ ವಾರನಾರಿಯೆನ್ನದರೊಳರೇ ೭೧೯

(ಸೂಕ್ತಿಸುಧಾರ್ಣವಂ ೮–೪೬೧)

ಪುಸಿನಗೆಯೊರ್ವನಲ್ಲಿ ನಸುನೋಟಮದೊರ್ವನ ಮೇಲೆ ಕೂರ್ತರಂ
ತೊಸೆದಿಹುದೊರ್ವನಲ್ಲಿ ಬಜಱಮಾತುಗಳೊರ್ವನ ಕೂಡೆಯಾಡಿ ಸಂ
ತಸದೊಳೆ ಕೂಡಿ[ಸರ್ವ]ಸುಖಮಿರ್ಪುದದೊರ್ವನಲಿಂತನೇಕ ದು
ರ್ವ್ಯಸನಿಯರಪ್ಪ ಸರ್ವಜನವಲ್ಲಭೆಯರ್ಕಳನಂತಮೊಪ್ಪುಗುಂ ೭೨೦

ಪುಸಿನುಡಿ ಪುಟ್ಟಿದಾಲಯಮಸಹ್ಯದಗೊತ್ತಪಮಾರ್ಗದೇಟಿಗ್ಗೆ ವಂ
ಚಿಸಿ ಪರರರ್ಥಮಂ ಕವರ್ವ ಚಾವಡಿ ನನ್ನದ ಬಯ್ಕೆ ಕೂರ್ತು ಛಿ
ದ್ರಿಸುವ ವಿಷಾದಮೆಂದೆನಲು ವೈಶಿಕಮೆ ವಧುರೂಪನಾಂತು ಬಂ
ದೆಸೆವವೊಲಪ್ಪ ಪಣ್ಯವನಿತಾಜನಮಿರ್ಪರನಂತಗಾಡಿಯಿಂ ೭೨೧

ಪುರುಡಿಸಿ ಮೋಹದಿಂ ಮುಳಿದು ಮುದ್ದಿಸಿ ಕೋಪಿಸಿ ಸೋಲ್ತರಂದದಿಂ
ಸುರಿದು ದೃಗಂಬುವಂ ಧನದಪೇಕ್ಷೆಯ ಮಾಡದೆ ಕೂರ್ತು ಕೂಡಮಂ
ತಿರೆ ವಿಟಸೊಲ್ತ ಭಾವನನೆ ಕಂಡವನರ್ಥವ ಕೊಂಬುದೆಂದುಮೀ
ಪರಿವಿಡಿಯಿಂದೆ ಮುಗ್ಧೆಯರ ವೃದ್ಧೆಯರೋದಿಸುತಿರ್ಪರಾವಗಂ ೭೨೨

ಜಯ[1]ವ[1]ಡೆದಿಕ್ಷುಚಾಪಮನೆ ಜರ್ಬುವ ಪುರ್ಬು ಪಳಂಚೆ ಲೋಚನಾ
ಸಿಯು ಪೊಳೆಪೇಱ ಪೀವರಕುಚಂ ಕರಿಕುಂಭದ ಚೆಲ್ವನೆಯ್ದೆ ಕೈ
ಗೆಯೆ ಜಗಮಂ ಗೆಲಲ್ ಸಮುಱದಂಗಜದೊಡ್ಡಣದಂತೆ ಸೂಳೆಗೇ
ರಿಯ ಮಣಿಮತ್ತವಾರಣದೊಲಿರ್ಪುದು ವಾರವಿಳಾಸಿನೀಜನಂ ೭೨೩

(ಲೀಲಾವತಿ ೭–೭)

---

[1] ಪೊ(ಅ)

ಅಂಗಳದೊಳ್ ಪೊದಱ್ದಸೆಯೆ ಕೌಮುದಿ ಮುಗ್ಧೆಯರಿಂದುಕಾಂತಗೇ
ಹಂಗಳನೋಡಿ ಪೊಕ್ಕವಱ ಜೆಳ್ವೆಳಗಂ ಬಱುಸಂದು ಬಂದ ಬೆ
ಳ್ದಿಂಗಳೆಗೆತ್ತು ನೀಳ ನಿಳಯಂಗಳ ಕಟ್ಟಿಲೆಯತ್ತ ಸಾರ್ದೊಡಾ
ಲಿಂಗಪರಲ್ಲಿ ಮೆಯ್ಗ್ಗರೆದ ವಲ್ಲಭರಾಱುಸಲಂಗಜಾಗ್ನಿಯಂ ೭೨೪

(ಲೀಲಾವತಿ ೭-೯)

ಹರಿಯುರದಲ್ಲಿ ಪೆರ್ಮೊಲೆಯ ಲಚ್ಚಣಮಿಟ್ಟಜನಾನನಂಗಳೊಳ್
ಚರಣದಲಕ್ತಕದ್ರವದಿನುಂಡಿಗೆಯೊತ್ತಿದ ರೂಢಿವೆತ್ತ ಶಂ
ಕರನೊಡಲರ್ಧಮುಂ ಕವರ್ದುಕೊಳ್ವೆಳವೆಂಡಿರ ಗಾಡಿಯಂ ನಿರಾ
ಕರಿಪೆಸಕಂ ಜಸಂಬಡೆಯಲೊಪ್ಪುಗುಮಾ ಪೊಱಲಂಗನಾಜನಂ ೭೨೫

(ಧರ್ಮನಾಥಪುರಾಣಂ ೨-೮೭)

ಮುನಿವಧುಗಾತ್ಮವಲ್ಲಭನಿತ್ತ ಪುಲೋಮಜೆ ಗೊಲ್ಲವೆಣ್ಗೆ ನ
ಲ್ಲನನೆಡೆಗೊಟ್ಟ ಲಕ್ಷ್ಮಿ ಪತಿಯಂ ಸುರಸಿಂಧುಗೆ ಪಚ್ಚುಗೆಯ್ದುಮಾ
ವನಿತೆಯಿವಳ್ದಿರೊಳ್ ದೊರೆಗಡೆಂಬಿನಮುಣ್ಮುಗುಮಲ್ಲಿ ಮೀನಕೇ
ತನನ ಕರಾಗ್ರದೊಳ್ ನಿಮಿರ್ದ ಕರ್ವಿನಬಿಲ್ದನಿಯೆಂಬ ಡಂಗುರಂ ೭೨೬

(ಧರ್ಮನಾಥಪುರಾಣಂ ೨-೧೮೯)

ಮನಮೊಲ್ದೊಡ್ಡೋಲಗಂಗೊಟ್ಟಱುಕೆಯ ಗಣಿಕಾವಾಟದೊಳ್ ಪೊಕ್ಕ ಮುಕ್ಕ
ಣ್ಣನ ಕಣ್ಗಿಚ್ಚೆಂಬ ಕೈದೀವಿಗೆಯ ಬೆಳಗುಗೊಂಡೋಡೆ ಕೀರಾಳಿ ವೈಕುಂ
ಠನ ವಕ್ಷೋಭಾಗದೊಳ್ ವಾಗ್ವರನ ವದನದೊಳ್ ವಜ್ರಿಯಂಗಂಗಳೊಳ್ ಮು
ನ್ನಿನ ತಾಣಂದಪ್ಪದೇಂ ನೋಡುವನೊ ಕಲೆಯನಾಟೋಪದಿಂದಿಕ್ಷುಚಾಪಂ ೭೨೭

(ಧರ್ಮನಾಥಪುರಾಣಂ ೨-೧೧೧)

ಪುಸಿಯುಳಿಪಂ ನಿಮಿರ್ಚಿ ತಮಗಿಲ್ಲದ ಬೇಟಮನುಂಟುಮಾಡಿ ಕೂ
ರಿಸಿ ಕಡುಕೂರ್ತರಂತೆ ಪುರುಡಂ ಪೊಸಬೇಟಮನೆತ್ತಿ ಲಲ್ಲೆಯಂ
ಪಸರಿಸಿ ಪೊಯ್ದು ಬೈದಱಲನಗ್ಗಿಸಿ ಮುಟ್ಟದ ಮುನ್ನಮೆನ್ನರಂ
ದೆಸೆವಲಿಗೆಯ್ದರೇನೊ ಕಡುಧಾಳೆಯರೊಂದಿರುಳಲ್ಲಿ ಸೂಳೆಯರ್ ೭೨೮

(ಧರ್ಮನಾಥಪುರಾಣಂ ೨-೧೧೩)

ಸಮಸಂದಲ್ಲಿಯ ಸಿಂಬೆಗಂ ಸರಿಯೆ ಪೇಱಾ ರಂಭೆ ನೋಡಲ್ ತಿಲೋ
ತ್ತಮೆಗಿಂತುತ್ತಮ ರೂಪಮಾವೆಡೆ ವಿಲಾಸಂಬೆತ್ತ ತನ್ನೊಂದು ಬಿಂ
ಕಮನಾಳ್ದೂರ್ವಶಿಗೀ ವಶೀಕರಣಮೆಲ್ಲಿರ್ದಪುದೆಂಬೊಂದು ವಿ
ಭ್ರಮದಿಂ ದಿಗ್ಭ್ರಮೆಯಂ ವಿಟರ್ಗೆ ಪಡೆಗುಂ ತದ್ವಾರನಾರೀಜನಂ ೭೨೯

(ಧರ್ಮನಾಥಪುರಾಣಂ ೨-೧೧೩)

ಇನ್ನುಱಿದಾದರೇಜೊರೆ ದೃಗಂಚಲದಂಜನದಿಂದೆ ಸಿದ್ಧರಂ
ಸನ್ನುತಮಾದಧರಪಲ್ಲವದಿಂದಮೃತಾಶನರ್ಕಳಂ
ಪನ್ನಗರಂ ಬಟಿಲ್ಮುಡಿಗಳಿಂ ಕಳಕಂಠಸುಕಂಠನಾದದಿಂ
ಕಿನ್ನರರಂ ಮರುಳ್ಗೊಳಿಪುದಲ್ಲಿಯ ವಾರವಿಲಾಸಿನೀಜನಂ ೭೩೦
(ಧರ್ಮನಾಥಪುರಾಣಂ ೨-೧೧೫)

ಬಿಸಿಲಂ ಲಾವಣ್ಯದಿಂ ಮಿಂಚಡರೆ ಬೆಳಗುತುಂ ನೀಳ್ದಪಾಂಗಂಗಳಿಂ ನು
ಣ್ಣುಸುತುಂ ದಿಕ್ಕಾಮಿನೀಸಂಕುಲಮನಮಲಹಾಸಪ್ರಭಾಪೂರದಿಂ ಪು
ಟ್ಟಿಸುತುಂ ತಳ್ತಿಚ್ಚವೆಳ್ದಿಂಗಳನವಯವಶೃಂಗಾರವಾರಾಸಿಯೊಳ್ ತೇಂ
ಕಿಸುತುಂ ವಕ್ತ್ರೇಂದುವಂ ಬಂದುದು ನೆರೆದಿದಿರಂ ವಾರನಾರೀಕದಂಬಂ ೭೩೧
(ಲೀಲಾವತಿ ೧೨-೯)

ಜೆಳತಿಗೆಗಣ್ಣ ಜೆಳ್ಪು ನಗೆಗಣ್ಣ ಮುಗುಳ್ನಗೆ ಜೆಲ್ಲಗಣ್ಣ ಚಾ
ಪಳಮಲರ್ಗಣ್ಣ ಬಳ್ವಳಿಕೆ ಮೀಂಬೊಣರ್ಗಣ್ಣ ನಿಮಿರ್ಕೆ ಸೊರ್ಕುಗ
ಣ್ಣಲಸತೆಪುಲ್ಲೆಗಣ್ಣಳತೆ ತಳ್ತಿಮೆಗಣ್ಣ[1]ರೆಗಪ್ಪು[1]ತೋಱಿಿಗ
ಣ್ಬೆಳಗಿನ ಸುಗ್ಗಿ ಕಾಣಲಣಮಾಯ್ತು ಪುರಪ್ರಮದಾಜನಂಗಳೊಳ್ ೭೩೨
(ಪುಷ್ಪದಂತಪುರಾಣಂ ೫-೨೪)

ಕವಿವ ಕುಬೇರಧೂಪದ ಕವಲ್ಗೊಗೆಯಂ ನವಮೇಘಮಾಲಿಕಾ
ನಿವಹಮೆ ಗೆತ್ತು ತೋರ್ಪ ಮಣಿದೀಧಿತಿಯಂ ಕುಡಿಮಿಂಚುಗೆತ್ತು ಪೊ
ಣ್ಮುವ ಪಟಹಪ್ರಣಾದಮನೆ ಮೇಘನಿನಾದಮೆಗೆತ್ತಕಾಲತಾಂ
ಡವಮನೊಡರ್ಚುಗುಂ ಶಿಖಿಕುಳಂ ಕನಕಾಯತಕೂಟಕೋಟಿಯೊಳ್ ೭೩೩
(ಕಾವ್ಯಾವಲೋಕನಂ ೭೧೧)

ಸರಸಿಜನಾಭನಂ ಸಿರಿ ಮನೋಭವನಂ ರತಿಯಿಂದುಮೌಳಿಯಂ
ಗಿರಿಜೆ ಸುರೇಶನಂ ಶಚಿ ಚತುರ್ಮುಖನಂ ವರವಾಣಿ ತಾರಕಾ
ಪರಿವೃಢನಂ ಸಮಂತೆಸೆವ ರೋಹಿಣಿ ಪಾರ್ಶ್ವದೊಳಿಟ್ಟುಕಾಯ್ವರಾ
ಪುರದ ವಿಳಾಸಿನೀಜನದ ಗಾಡಿಗೆ ಬೆಚ್ಚಿ ನಿಜಾತ್ಮನಾಥರಂ ೭೩೪
(ಸೂಕ್ತಿಸುಧಾರ್ಣವಂ ೪-೧೩೪)

ನಡೆಗಲಿಸುತ್ತುಮಂಚೆಗಳನೋದಿಸುತುಂ ಗಿಳಿಯಂ ಪಿಕಕ್ಕೆ ಮಾ
ಮಿಡಿಗಳನೀವುತುಂ ನವಿಲನಾಡಿಸುತುಂ ಪೊಣರ್ವಕ್ಕಿಯಂ ಪಿಣಿ
ಲ್ಪಿಡಿದು ಬಟಿಲ್ವಿನಂ ತಗುಳುತುಂ ಬನದೊಳ್ ಬಿನದಂ ವಿಲಾಸಮಂ
ಪಡೆಯೆ ನಿರಂತರಂ ತೊಲಗದಿರ್ಪುದು ವಾರವಿಳಾಸಿನೀಜನಂ ೭೩೫
(ಮಲ್ಲಿನಾಥಪುರಾಣಂ ೨-೩೯ ; ಸೂಕ್ತಿಸುಧಾರ್ಣವಂ ೪-೧೩೬)

---

[1]ಕೆಗಳ್ಪು(ಅ)

ಗಂಡನದೊರ್ವಳೂರ್ವಶಿಗೆ ಗಂಗೆಗೆ ಗೋಪಿಗೆ ಕೊಟ್ಟರೆಂದೊಡಾ
ಪೆಂಡಿರ ರೂಪುಮಂ ಸೊಬಗುಮಂ ಗುಣಮಂ [1]ಪೆಸರ್ಗೊಳ್ವುದೇ ಮನಂ
ಗೊಂಡಳನಂಗನಂ ರತಿಯೆನಲ್ ಚದುರೆತ್ತಣದಾಕೆಗೆಂದು[1] ಕ
ಣ್ಗೊಂಡ ವಿಲಾಸದಿಂ ನಗುವುದಲ್ಲಿಯ ವಾರವಿಳಾಸಿನೀಜನಂ ೭೩೬

(ಮಲ್ಲಿನಾಥಪುರಾಣಂ ೨–೫೫)

ಗಿರಿಜಾವಲ್ಲಭನೊತ್ತೆಗೊಟ್ಟು ಪೆಱತಿಯುಂ ಸ್ವೈತಿಕ್ಕವೇಱಿ ಬಂದಪಂ
ಹರಿ ಮುಂದಟ್ಟಿದನಿಂದು ಕೌಸ್ತುಭಮನಕ್ಕಂ ಕಂಡಳೇ ವಜ್ರಮಂ
ಸುರರಾಜಂ ಬಿಡಿಸಲ್ಕೆ ಬಂದು ಪೊಱಗಿರ್ದಂ ಕಾಮದೇವಂಗೆ ಜೋ
ಸರಿಗುಂ ನಿಂದುಱಿಯೆಂಬರಾ ಪುರದ ವೇಶ್ಯಾವಾಟದೊಳ್ ಚೇಟಿಯರ್ ೭೩೭

(ಸೂಕ್ತಿಸುಧಾರ್ಣವಂ ೪–೧೩೩)

## ರಾಜಾಲಯ ವರ್ಣನೆ

ವಿಮಲಪ್ರಾಸಾದಭಿತ್ತಿಪ್ರಕಟಘನಸುಧಾಕಾಂತಿಗಳ್ ಚಂದ್ರಿಕಾವಿ
ಭ್ರಮಮೆಂಬಂತೊಪ್ಪೆ ನಾನಾಮಣಿಮಯ ಕಲಶಶ್ರೇಣಿಗಳ್ ನಾಕದೊಳ್ ಚಿ
ತ್ರಮನೆತ್ತಂ ಬೀಱಿ ಭಾಸ್ವತ್ಕುಮುದಮನೊಲವಿಂ ಪೆರ್ಚಿಸುತ್ತಂ ಮಹಾಸಂ
ಭ್ರಮದಿಂ ಚೆಲ್ವಾದ ರಾಜಾಲಯಮಭಿನವಪೂರ್ವಾದ್ರಿಯಂತೊಪ್ಪಿ ತೋರ್ಕುಂ ೭೩೮

ಸ್ಫಟಿಕದ ಕುಟ್ಟಿಮಂ ಶಶಿಶಿಲಾಮಯಭಿತ್ತಿ ನವೀನ ವಜ್ರಸಂ
ಘಟಿತನಿಕಾಯಕೋಣತತಿ ವಿದ್ರುಮವಂದನಮಾಲೆ ಚಂದ್ರಿಕಾ
ಪಟಲಸದೃಗ್ವಿತಾನರುಚಿರಂಜಿತಮೌಕ್ತಿಕಪುತ್ರಿಕೆ ಚಕ್ರವಾಕಸಂ
ಪುಟಶಬಲಪ್ರಕಾಶದೊದವಂ ತಳೆಯಲ್ ಮೆಱೆಗುಂ ನೃಪಾಲಯಂ ೭೩೯

ನೋಡುವೊಡಿಲ್ಲ ತತ್ಪುರದೊಳೋದದ ಕೀರಕುಳಂ ನವಿಲ್ಗಳಿಂ
ದಾಡದನಂದನಂ ಸುಱಿವ ಹಂಸಗಳಿಲ್ಲದ ರಾಜಖೇಡಕಂ
ಪಾಡದ ಚಂಚರೀಕವನಮಿಲ್ಲದ ಮಲ್ಲಿಗೆ ಗಾಳಿಯಿಂದೆ ತೂ
ಗಾಡದ ಮಾಧವೀಲತೆಯ ಮಂಟಪಮಿಲ್ಲದ ಗೇಹಸಂಕುಳಂ ೭೪೦

ವಿಲಸತ್ಸೇವಾಪುರಂಧ್ರೀನಿಕರಚರಣಮಂಜೀರತನ್ಮುದ್ರಿಕಾಮಂ
ಜುಳನಾದಂ ರಾಜಪುತ್ರಪ್ರಕರಪರಿವೃತಾಶೇಷಗೀತಪ್ರಣಾದಂ
ಜಲಪಾನಾಸಕ್ತಮುಕ್ತದ್ವಿಪಕುಲನಿಕರವ್ರಾತಸಂಭೂತನೂತ್ನೋ
ಜ್ವಳನಾದಂ ಪೊಣ್ಮುತಿರ್ಕುಂ ನರಪತಿನುತಕವೀಂದ್ರಾಸ್ಯಸಂಪ್ರೋಕ್ತನಾದಂ ೭೪೧

---

[1] ಪುಲೋಮಜಾ ಖಂಡತಿ ಲಕ್ಷ್ಮಿ ಹೈಮವತಿಯೆಂಬೊಡೆಯಾರತಿಗಿಲ್ಲನೇಮಃ (ಪ)

ಪಲತೆಱದ ವೀಣೆಗಳುಮಂ
ಪಲತೆಱದಾಳಾಪದಿಂದೆ ಬಾಜಿಸೆ ಕರ್ಣಂ
ಗಳ್ಗೆ ಸೊಗಸುಗಳ ಬೀಱು
ತ್ತಿಳೆಗಚ್ಚರಿಯೆನಿಪ ಗಾಯಕರ್ ಮೆಱೆದಿರ್ಪರ್ ೭೪೨

ವೇದವನೋದೆ ಕೇಳಿದ ಪರೀಕ್ಷಕರಾಯೆನಲುತ್ತರಂಗಳಂ
ವೇದಿಪ ಶಬ್ದಶಾಸ್ತ್ರ[1]ದಳುಪಂ[1] ಪರಿಭಾವಿಸಿ ತರ್ಕತಂತ್ರದೊಳ್
ವಾದಿಸೆ ವಾದಮಂ ಗೆಲುವ ಸರ್ವಕಲಾಕುಶಲಾಗಮಜ್ಞರುಂ
ಮೇದಿನಿಯೊಳ್ ವಿಶೇಷಮೆನಲೊಪ್ಪುವರಾ ಪುರದೊಳ್ ನಿರಂತರಂ ೭೪೩

ಶರ್ವಾಣೀಶನ ಗೃಹಕೆ ಸು
ಪರ್ವೇಂದ್ರನ ಗೃಹಕೆ ಮೆಱೆಯದಾತ್ಮೀಯ ಕಳಾ
ಸರ್ವಜ್ಞತೆಯಂ ಮೆಱೆದಂ
ಗೀರ್ವಾಣಸ್ಥಪತಿ ನಿಮ್ನಗೃಹವಿರಚನೆಯೊಳ್ ೭೪೪

ಜನಪದಮುಂ ವನಾವಳಿಗಳುಂ ಬೆಳೆಗೆಯ್ಗಳುಮಾಳ್ದ ಗೋಪುರಂ
ತೆನೆ ಬೆಳೆಗಾವ ಪಾಮರಿಯರುಂ ಪ್ರಪೆಯುಂ ಕೊಣನಂ ಪುರೋಪವನಂ
ದನಪರಿಭಾವನಪ್ರತತಿಯಾಪಣ ಪಣ್ಯಕಾಗೃಹ ದೇವತಾ
ಜನಪಗೃಹಂಗಳುಂ ಪುರವರೋಚಿತವರ್ಣನಕಪ್ಪುದಾಸ್ಪದಂ ೭೪೫
(ಸೂಕ್ತಿಸುಧಾರ್ಣವಂ ೪–೨)

ಓರಂತೆ ಮೆಚ್ಚಿದಂ ಕೃತಿ
ಸಾರಂ ಪುರವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ಡೋರಸಮುದ್ರಾಧಿನಾಯಕಂ ಸೋಮನೃಪಂ ೭೪೬

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣ
ಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಪುರವರ್ಣನಂ ಚತುರ್ಥಾಶ್ವಾಸಂ

---

[1] ದೊಳುಪಿಂ (ಸ)

# ನಾಯಕಾಭ್ಯುದಯವರ್ಣನಂ

ಮುನಿಸಿಂದಾಂತರನಿಕ್ಕಿ ಭೂವಳೆಯಮಂ ನಿಷ್ಕಂಟಕಂ ಮಾಡಿ ಕೀ
ರ್ತಿನಿಜಾಜ್ಞಾಸಹಿತಂ ದಿಶಾವಳಿಯುಮಂ [೧]ತ್ರಳ್ತೊಪ್ಪೆ[೧] ಸಂಗೀತಮಂ
ಜನನಾಥಂ ಮುದದಿಂದಮೋಲಗದೊಳಿರ್ತ್ತಂ [೨]ಕೇಳ್ವುತಂ[೨] ತ್ಯಾಗವ
ರ್ಧನಮಂ ಮಾಳ್ಪುದು ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೧

(ಸೂಕ್ತಿಸುಧಾರ್ಣವಂ ೫-೧)

ಗೆಲವಿಂ ಭೂಮಿಜೆ ಕೈಗೆ[೩]ವಂದುದೆ[೩] ಫಲಂ ರಾಮಂಗೆ ಮುಂಪೋದ ಭೂ
ತಳರಾಜ್ಯಂ ಕ್ರಮದಿಂದೆ [೪]ಬಂದುದೆ[೪] ಫಲಂ ಧರ್ಮಾತ್ಮಜಂಗಾರ್ಪಿನಿಂ
ಸಲೆ ರಾಗೋತ್ಸವಸಿದ್ಧಿ ಸಾರ್ವುದೆ ಫಲಂ ಶ್ರೀಖೇಚರಂ[೫]ಗಾ ತೆಱಂ[೫]
ಫಲಯೋಗಸ್ಥಿತಿ ನಾಯಕಾಭ್ಯುದಯಮೆಂಬಂಗಂ ಮಹಾಕಾವ್ಯದೊಳ್ ೨

(ಸೂಕ್ತಿಸುಧಾರ್ಣವಂ ೫–೨)

ಸಿರಿವಕ್ಷೋರಂಗದೊಳ್ ನರ್ತಿಸೆ ವಿಜಯಭುಜಾಟೋಪದೊಳ್ ವಿಕ್ರಮಶ್ರೀ
ಯಿರೆ ವಕ್ತ್ರಾಂಭೋಜದೊಳ್ ವಾಗ್ವನಿತೆ ನೆಲಸೆ ತನ್ನಾಜ್ಞೆ [೬]ವಿದ್ವಿಷ್ಟ[೬] ಭೂಪಾ
ಲರ ಕೋಟೀರಂಗಳೊಳ್ ನರ್ತಿಸೆ ವಿ[೭]ಶದಯಶಂ[೭]ಪೆರ್ಜೆ ವಾರಾಶಿ[೮]ಯೇಱಂ[೮]
ಬರವಾಳ್ದಂ ವಿಶ್ವಧಾತ್ರೀತಳಮನತಿಬಳಂ ರಾಯರೊಳ್ ಸೋಯಿದೇವಂ ೩

(ಮಂಡ್ಯ- ೭೭; ನಾಗಮಂಗಲ–೨೫ ; ಸೂಕ್ತಿಸುಧಾರ್ಣವಂ ೫–೬)

ಅದಟಿನಳು[೯]ರ್ಕೆಯಿಂ[೯] ಮೆಱೆವ ಚೋೞನ ಪಂದಲೆಯೊಂದೆ ಕೈಗೆ ವಂ
ದುದು ಕರಿಕೋಟಿ ಬಂದುದು ಹಯಾವಳಿ ಬಂದುದು ರತ್ನರಾಶಿ ಬಂ
ದುದು ಬಗೆದಂತೆ ಚೇರಮನ ಚೋೞನ ಪಾಂಡ್ಯನ[೧೦]ನಾಡೆ[೧೦]ಕೈಗೆ ವಂ
ದುದು ಕಡಿತಕ್ಕಮುಂ[೧೧]ಡಿಗೆಗ[೧೧]ವೋಲೆಗವೀ ಶುಭತುಂಗದೇವನಾ ೪

(ಸೂಕ್ತಿಸುಧಾರ್ಣವಂ ೫–೭)

---

[೧]ತಳ್ತಪ್ಪಿ(ಸೂ) [೨]ಕೇಳ್ದುತಾಂ(ಸೂ) [೩]ವರ್ಪುದೆ(ಸೂ) [೪]ಬರ್ಪುದೆ(ಸೂ) [೫]ಗಂತಱ(ಸೂ) [೬]ದಿಗ್ದಷ್ಟ(ಸ) [೭]ವಿಷಯಮುಂ(ಸ) [೮]ಯಂತಂ(ಸ) [೯]ಕಿನಿಂ(ಸ) [೧೦]ಕೈಗೆ(ಸ) [೧೧]ಜಯಕಂ(ಸ)

ರನ್ನದ ಕಂಭ ನೀಲಮಯ ಬೋದಿಗೆ ಪಚ್ಚೆಯ ಚೆಲ್ವದೂಲಗಳ್
ಚಿನ್ನದ ಮೇಲುಮುಚ್ಚಳ ಸುಮೌಕ್ತಿಕ ಲೋವೆಯ ಚುಂಚು ವಜ್ರದಿಂ
ಚೆನ್ನೆಸೆದೊಪ್ಪುತಿರ್ಪ ಕಲಶಂ ಮೃಗನಾಭಿಯ ಸುತ್ತುಭಿತ್ತಿ ಬಾ
ವನ್ನದಿನರ್ಥಿಯಿಂದೆ ಮೆಱೆಗುಂ ಧರಣೀಶನ ಮಂತಣಾಗೃಹಂ ೫

ಸ್ಫುರಿತ ಸ್ವರ್ಣವಿಚಿತ್ರ[1]ತುಂಗವಿಟಪಂ ರಮ್ಯೇಂದ್ರನೀಲಾಳಿ[1] ಷ
ಟ್ಚರಣಾಲಂಕೃತಮೆಂಬ ಕಲ್ಪತರುವೃಂದಾರಾಮಮೀ ಬಂದುದು
ರ್ವರೆಗೆಂಬಂತೆ ಸುವರ್ಣವಸ್ತ್ರರಚನಾ ಕಿಮ್ಮೀರಿತಂ ಬಂದುದಂ
ಬರದಿಂ ಭೋಂಕನೆ ವಿಶ್ವಕರ್ಮರಚಿತಂ ದಿವ್ಯಂ ಮಹಾಮಂಟಪಂ ೬
(ಜಗನ್ನಾಥವಿಜಯಂ ೮-೧೧೧)

ಗಿರಿಗಳ ಮಧ್ಯದೊಳ್ ವಸುನಗಂ ಖಗಮಧ್ಯದೊಳಂಡಜೇಶ್ವರಂ
ಕರಿಗಳ ಮಧ್ಯದೊಳ್ ದಿವಿಜಗಜಂ ಗೃಹಮಧ್ಯದೊಳರ್ಕಮಂಡಲಂ
ತರುಗಳ ಮಧ್ಯದೊಳ್ ಸುರಕುಜಂ ಹಯಮಧ್ಯದೊಳುಚ್ಚೆಯಿಶ್ರವಂ
ಪಿರಿದೆನಿಸಿರ್ಪವೊಲ್ ನೃಪಸಮೂಹದ ಮಧ್ಯದೊಳಿರ್ದನಾನೃಪಂ ೭

ಉದಯ ನಗೇಂದ್ರಮುಂ ತರಣಿ ಬಾಲರಸಾಲಮನಿಂದ್ರಕೀರನು
ರ್ವಿದ ಕರುಮಾಡಮುಂ ನವಿಲು ಸೈಕತದೊಟ್ಟಿಲ ರಾಜಹಂಸೆ ಕೊ
ರ್ವಿದ ಸುರಪಾದ್ರಿಯಂ ಶಶಿ ಶಿತಾಭ್ರಮು[2]ಮುಂ ಕುಡಿಮಿಂಚು[2] ಸಾರ್ವವೊಲ್
ಮುದದಿ ಸಭಾನಿಕೇತನದೊಳೋಲಗದೊಳ್ ಕುಳಿತಂ ನರೇಶ್ವರಂ ೮

ಮೆಯ್ಗೆ ದುಕೂಲದಿಂ ಪಣೆಗೆ ಕತ್ತುರಿಯಿಂ ಕಿವಿಗಾವತಂಸದಿಂ
ಕಯ್ಗೆ ಕಡಂಗದಿಂ ಬೆರಳಿಗುಂಗುರದಿಂ ಕೊರಳಿಂಗೆ ಹಾರದಿಂ
ಮುಯ್ಗೆ ಸುಗಂಧದಿಂ ಮುಡಿಗೆ ಪುಷ್ಪಗಳಿಂ ಚರಣಕ್ಕೆ ಪೆಂಡ್ಯದಿಂ
ಬಾಯ್ಗೆ ನಿವೀಳ್ಯದಿಂ ಪಡೆದ ಸಿಂಗರದಿಂ ಸಭೆಗೆಯ್ದಿದಂ ನೃಪಂ ೯

ಅಗಲಂಬೆತ್ತುರುವಕ್ಷದಿಂದುರುಲಸದ್ರಕ್ತಾಂಬುಜಾತಾಕ್ಷದಿಂ
ಪೊಗರಿಂ ರಂಜಿಪ ವಕ್ತ್ರದಿಂ ಮಹಿಮೆಯಂ ತಾಳ್ದೊಪ್ಪುವಾಜಾನುಬಾ
ಹುಗಳಿಂದುನ್ನತ ಕಂಠದಿಂ ಕರಿರಿಪೂ ಹೃನ್ಮಧ್ಯದಿಂ ನೋಟ್ಪಿರ
ಕ್ಷಿಗೆ ಚೆಲ್ವಂ ಕಱೆಯುತ್ತಿಳಾಧಿಪತಿತಾಂ ಬಂದಿರ್ದನಾಸ್ಥಾನದೊಳ್ ೧೦

---

[1]ರತ್ನಮಯಶಾಖಾಪಲ್ಲವೋತ್ಫುಲ್ಲ(ಅ)  [2]ದಂ ತಳೆವಂತೆ(ಸ)

ಅವನೀದೇವಸಮೂಹವೇದನಿನದಂ ಮಾಂಗಲ್ಯಗೀತಾಳಿಸ್ಥಿತೋ
ತ್ಸವತೂರ್ಯಧ್ವನಿ ವಂದಿವೃಂದಜಯಜಯಾನಂದನಾದಂ [1]ಸುಹೃ
ನ್ನಿವಹಾಶೀ[1]ರವವೊಂದಸೊಂದು ಗೆಲವಂಡೆಕ್ಕೆಕ್ಕೆಯಿಂ[2]ದುರ್ವಿ[2] ಪ
ರ್ವವಿನಂ ಘೂರ್ಣಿಸುತಿರ್ದುದೀ ನೃಪಗೃಹಂ ಕ್ಷುಭ್ಯತ್ಸುಧಾಂಬೋಧಿಯೋಲ್
(ಜಗನ್ನಾಥವಿಜಯಂ ೧೫-೭೮)

ಪರಿಕರಿಸಿರೆಯುಂ ಕರ್ಪೂ
ರರಜಂ ಕುಂಕುಮರಜಂ ಮಗೋದ್ಭವರಜವೇಂ
ತೆರೆತೆರೆಗೊಂಡವೋಲಾ ಚಾ
ಮರ ಮರುದಾಹತಿಯಿಂದೆ ಸಭಾಕುಟ್ಟಿಮದೊಳ್ ೧೧

ಕೆದ[3]ಱಿಂದಿರ್ದು[3]ತ್ತಮಪುಷ್ಪಮೊಕ್ಕ ಘುಸೃಣಂ ಚೆಲ್ಲಿರ್ದ ಕಸ್ತೂರಿ ಸೂ
ಸಿದ ಶ್ರೀಷಾರ್ಯತ ಕರ್ಪುರಂ ನೆಗೆವ ಧೂಪೋ[4]ದ್ಧೂತ[4]ಧೂಮಂ ವಧೂ
ವದನಾಂಭೋರುಹಗಂಧಮುಂ ಕದಡುವುದ್ಯತ್ ಚಾಮರೌಘಾನಿಲಂ
ಮುದಮಂ ಮಾಡೆ ಸರಾಜಲೋಕಸಭೆ ಚೆಲ್ವಾಗಿರ್ದುದಬ್ಜಾಕ್ಷನಾ ೧೩
(ಜಗನ್ನಾಥವಿಜಯಂ ೧೨-೧೬)

ನತನಾನಾಮರಮೌಳಿರತ್ನಕಿರಣಂ ನಾನಾಪ್ಸರೀ ಕೇಕರ
ದ್ಯುತಿ ನಾನಾಚಮರೀಜವಾಯು ಸಭೆಯಂ ತಳ್ಪೊಯ್ಯಲಿರ್ದಂ ಜಗ
ತ್ಪತಿಯೊಡ್ಡೋಲಗದೊಳ್ ಚತುರ್ಮುಖನತರ್ಕ್ಯಂ ಬ್ರಹ್ಮತೇಜಃಶಿಖಂ
ಶ್ರುತಿಗಾನೈಕಸುಖಂ ನಮಶ್ಯತಮಖಂ ವಾಣೀವಧೂಟೀಸಖಂ ೧೪

ನಿಮಿರ್ದೊಳ್ಗಣ್ಬೊಣರಿಂ ಕುರುಳ್ಗಿಡುಗಲಿಂ ವಕ್ಷೋಜದಿಂ ವಕ್ತ್ರವಿ
ಭ್ರಮದಿಂ ಕೆಂದಳದಿಂ ಸ್ಮಿತೋತ್ಪಳಮಯಂ ಭೃಂಗೀಮಯಂ ಚಕ್ರವಾ
ಕಮಯಂ ಚಂದ್ರಮಯಂ ಪ್ರವಾಳಮಯಮಾಯ್ತ್ತೀಲೋಕಮೆಂಬಂತದೇಂ
ಸಮಸಂದಿರ್ದುದೊ ಬಂದು ಗೊಂದಣಿಸಿ ತದ್ರಾಜನ್ಯಕಾಂತಾಜನಂ ೧೫
(ಪುಷ್ಪದಂತಪುರಾಣಂ ೧೨-೧೦೬)

ನಿರುಪಮ ರೂಪಮಪ್ರತಿಮ ಯವ್ವನಮೂರ್ಜಿತವಿಭ್ರಮಂ ಮನೋ
ಹರದರಹಾಸಮುತ್ಕಟಕಟಾಕ್ಷ[5]ನಿರೀಕ್ಷಣಕಾಂತಿ ಮಂಗಳಾ[5]
ಭರಣಮೊಡರ್ಚೆ ಕಂತುಭುಜಶಕ್ತಿಯೆ ಕಾಂತೆಯರಾಗಿ ನಿಂದವೊಲ್
ಸರಸಿಜನಾಭನೋಲಗದೊಳಿರ್ದುದು ವಾರವಿಳಾಸಿನೀಜನಂ ೧೬
(ಜಗನ್ನಾಥವಿಜಯಂ ೧೧-೬೫)

———

[1] ಸಮುದ್ಭವಹಾಶೀ(ಸ) [2] ಮೌರ್ವಿ(ಸ) [3] ರುತ್ತ(ಸ) [4] ದ್ವಾಮ(ಅ) [5] ನಿಶಾಸಮುಕಂ ತಿಮಿಂಗಿಳಾ(ಸ)

ಮುಗುಳ್ನಗೆ ಚೆಲ್ಲನೋಟ ಸವಿಮಾತು ಬೆಡಂಗಿನ ಬಿಂಕಬಿನ್ನಣಂ
ಬಿಗುಹಿನ ಚೇಟವಲೆದುಬ್ಬುವ ಪ್ಪೆಸಿರಿ ಮೇಕು ಜೋಕೆ ಕೊ
ರುಗುರಿನ ಕೂರ್ಪುನೇರ್ಪು ಬೆಡಗೊಂದಿದ ಮೆಲ್ನುಡಿ ಜಾತಿನೀತಿ ಜಾ
ಣ್ಮೆಗೆ ಮೊದಲಪ್ಪ ಪಣ್ಯಸತಿಯರ್ಕಳಿನೊಪ್ಪುಗು ಭೂಪನೋಲಗಂ ೧೭

ಕೊಂಕಿದ ಪುರ್ಬುಂ ತೆಳ್ವಸಿ
ಱುಂ ಕೋಮಲತನುವುಮೆಸೆಯೆ ನಡೆತಂದುದು ಚೆ
ಲ್ವಿಂ ಕದಳೀಪತ್ರದ ದೂ
ರ್ವಾಂಕುರಪೆಳೆವಿದಿರ ಬಣ್ಣದಬಲಾನೀಕಂ ೧೮
(ಜಗನ್ನಾಥವಿಜಯಂ ೪-೧೧೬)

ವದನೇಂದುವ ಕಾಂತಿ ಕಟಾ
ಕ್ಷದ ರುಚಿ ದರಹಾಸದಂಶು ತಳ್ತಿರೆ ನಡೆತಂ
ದುದು ಹಂಸಯಾನದಿಭಯಾ
ನದ ಮಂದರಯಾನದಂಗನಾ ನಿಕುರುಂಬಂ ೧೯
(ಜಗನ್ನಾಥವಿಜಯಂ ೪-೧೧೭)

ಕಣ್ದಾವರೆಗಳ ಪೊಳಪುಗ
ಳೆಣ್ದೆಸೆಯುಂ ಪುದಿಯೆ ಬಂದುದತಿಮೃದುಗತಿಯಿಂ
ಪೂಣ್ದೆಸೆವ ತೋರತೊಡೆಗಳ
ನುಣ್ದೊಡೆಗಳ ಬಟ್ಟೆದೊಡೆಗಳಬಲಾನೀಕಂ ೨೦

ನಡು ಸೆಡೆಯೆ ಪೊಳೆಯೆ ಕಣ್ಗಳ್
ಪೊಡರೆ ಕುಚಂ ಮಿಳಿರೆ ಮೇಲುದೆಸೆಯೆ ವಿಲಾಸಂ
ನಡೆದರ್ ಕೇಸಡಿಗಳ ತಳಿ
ರಡಿಗಳ ಮೆಲ್ಲಡಿಗಳತನುಶರಸನ್ನಿಭೆಯರ್ ೨೧

ಉಡಿನೂಲು ಸಡಿಲೆ ಮೆಲ್ಲುಲಿ
ಪೊಡರೆ ನಿಜಾವಯವದ ಶೋಭೆ ರಂಜಿಸೆ ಬಂದರ್
ಗಡಣದಿ ನಲ್ನಡುವಿನ ಬಡ
ನಡುವಿನ ಸೆಳೆನಡುವಿನಸಿಯನಡುವಿನ ಸತಿಯರ್ ೨೨

ಲಲಿತ ನಿಜರೂಪು ವಿಭ್ರಮ
ವಿಲಾಸಮನುಮರ್ದಿಸೆಯೆ ಬಂದರಾಮಳಕಕುಚಂ
ಗಳ ನಾರಂಗಕುಚಂಗಳ
ನಳಿನೀಕುಟ್ಮಳಕುಚಂಗಳೆಳೆಜವ್ವನೆಯರ್ ೨೩

ಸ್ತನವುಂ ಮಾಡುತೆ ಮಾಡಿ ಶಂಕಿಪನವಂ ತನ್ಮಧ್ಯಮಂ ತೇಣಲೋ
ಚನಮುಂ ಮಾಡುತೆ ಮಾಡಿ ಶಂಕಿಪನವಂ ಧಮ್ಮಿಲ್ಲಮಂ ಬಂಧುರಾ
ನನಮುಂ ಮಾಡುತೆ ಮಾಡಿ ಶಂಕಿಪನವಂ ಹಸ್ತಂಗಳಂ ಸಂತತಂ
ವನಜಾತೋದ್ಭವನೆಂದನಲ್ ಪೊಗೞ್ವರಾರ್ ಪಂಚಾಯುಧಾರ್ಧಾಂಗಿಯಂ ೧೦೦

ಮೊಗಮಂ ರೋಮಾವಳೀವಲ್ಲಿಯನತಿಮುದದಿಂ ಮಾಡಿ ವಕ್ಷೋಜಮಂ ಕೈ
ಮಿಗೆ ಭಾಸ್ವನ್ಮಧ್ಯಮಂ ಯಾನಮನತಿಮುದದಿಂ ಮಾಡಿ ನೈತಂಬಮಂ ಕಾಂ
ತೆಗೆ ಚಂಚದ್ವಾಳಮಂ ಕಂಗಳನತಿಮುದದಿಂ ಮಾಡಿ ಸದ್ಭ್ರೂಗಳಿಂ ನೆ
ಟ್ಟಗೆ ಕಾಣಲ್ಬಾರದಂತಿಟ್ಟ ಜನಱುತಕೆ ಕೊಂಡಾಡುವಂ ಪಂಚಬಾಣಂ ೧೦೧

ಸ್ತನಮಂ ಮಾಡಿ ಕಪೋಲಮಂಡಲಮನಾಕರ್ಣಾಂತವಿಶ್ರಾಂತಲೋ
ಚನಮಂ ಮಾಡಿ ತದಾಸ್ಯಮಂ ಪ್ರವಿಲಸತ್ಪಾದಂಗಳಂ ಮಾಡಿ ತ
ಧ್ವನಿತಾರತ್ನಕೆ ಯಾನಮಂ ಪಡೆಪಿನಿಂದಂ ಮಾಡಿ ಕೊಡಿಟ್ಟ ಜೀ
ವನಜಾತೋದ್ಭವಯುಕ್ತಿಗಾರ್ದನವರಂ ಪಂಚಾಯುಧಂ ಮೆಚ್ಚುವಂ ೧೦೨

ಮೊಗಕೆ ಕಚಂ ಕಚಕ್ಕೆ ಮೊಗವಾ ಮೊಗಕಂ ಕಚಕಂ ಸಮಂತು ನೆ
ಟ್ಟಗೆ ಕುಚಮಾ ಕುಚಕ್ಕೆ ಮಗುೞ್ದಾ ಮೊಗಮಂ ಕಚಮಂ ಕುಚಕ್ಕೆ ತಾಂ
ಮೊಗಕಮಡರ್ತುಮಾ ಕಚಕಮಾಕೆಯ ಶೋಣಕರಂ ಕರಕ್ಕೆಯುಂ
ಬಗೆವಡೆದಂಜುತಿಪ್ಪುವೆನಲಾರ್ ಪೊಗೞ್ವರ್ ಕವಿಪಂಚಮಾರ್ಗಣಾ ೧೦೩

ಅದನೇನೆಂಬೆನಜಂ ಸಮಂತವಳ ಭಾಸ್ವದ್ರೂಪನಿರ್ಮಾಣಕ
ರ್ಮದೊಳಾರ್ಪಿಂದಿರದೆಯ್ದಿ ನಿಂದ ಪರಮಾಣುಶ್ರೇಣಿಯಿಂ ನಾಡೆ ಕೌ
ಮುದಿಯಂ ಚಂದ್ರನನಬ್ಜಮಂ ಕುಮುದಮಂ ಬಂಧೂಕಮಂ ನೋಡಿ ಮಾ
ಡಿದನೆಂದುೞಿ ಬಣ್ಣಿಸಲ್ಕಱುವರಾರ್ ಪಂಚಾಯುಧಾರ್ಧಾಂಗಿಯಂ ೧೦೪

ಅಲರಂಬೈದೊಂದೆಬಿಲ್ಲಿಂತಿವಱೊಳೆ ನೆಗೞ್ದೀ ದ್ವೀಪವೇೞುಂ ತ್ರಿಲೋಕಂ
ಗಳನೆಂತಾಂ ಗೆಲ್ವೆನೆಂದಂಜುವೆನೆಲೆಯೆನಗಿಂದೀಕೆಯಕ್ಷಿದ್ವಯಾಸ್ತ್ರಂ
ಗಳಿನೇೞಿಂತೀಕೆಯುದ್ಯದ್ಭ್ರುಕುಟಿಧನುಗಳಿಂತೀ ತ್ರಿಚಾಪಂ ಕಣಾ ಕೋ
ಮಲೆಯಿಂದೆಂದಾರ್ದು ಕಾಮಂ ರತಿಯುವತಿಯ ಕೈವೊಯ್ದು ಮಾತಾಡುತಿರ್ಪಂ ೧೦೫

ಮುಡಿ ಮದನಂಗೆ ಮುಂಗುಡಿ ನೊಸಲ್ ಸಸಿಯಿಂದ ಹಸಂ ಕದಂಪು ಕ
ನ್ನಡಿಗಳ ಸೊಂಪು ತೋಳಸಮಬಾಣನ ಬಾಳ್ ಬೆರಲಾತನೈಸರಲ್
ನಡೆಯೆ ಕರೀಂದ್ರನಿಂಗೆಡೆ ನಿತಂಬವನಂಗಕುಭೃನ್ನಿತಂಬವೊ
ಳ್ದೊಡೆ ಪೊಸಬಾೞಿಯೋೞ್ಗಿಡೆ ಪದಂ ಚತುಸಂಪದಮಂಬುಜಾಕ್ಷಿಯಾ ೧೦೬

ಅಳಿಗೆ ತಳಿರ್ಗೆ ನೋಡೆ ಪಡಿ ಕುಂತಳಮುಂ ತಳಮುಂ ಸಮಾನನು
ತ್ಪಳಕೆ ಸರೋರುಹಕ್ಕೆ ಪಡಿ ಕೇಕರಮುಂ ಕರಮುಂ ಭುಜಂಗಳು
ಜ್ವಳವಳಿಗಳೆ ಪಾಸಟಿ ಕಚಾವಳಿಯುಂ ವಳಿಯುಂ ಸುವಜ್ರಕು
ಜ್ವಲತೆಯ ವಂಶಕಾಳಿ ನಖಸಂಕುಳಮುಂ ಕುಳಮುಂ ಲತಾಂಗಿಯಾ ೧೦೭

ಮುಡಿ ಮದನಂಗೆ ಮುಂಗುಡಿ ಸರೋಜದಳಂ ಸರಿಬಾರದೆಂದು ಕ
ಣ್ಗಡುಪತಿ ವಕ್ತ್ರಬಿಂಬಕೆಣೆಯಾಗನೆನುತ್ತಮೆ ಕಂದಿ ಕುಂದುವಂ
ನುಡಿ ಫಲವೇನೋ ಸಂಪಗೆಯುರಲ್ತನುವಿಂಗೆಣೆಯಾಗೆನೆಂದು ನೇ
ರ್ಪಡುವಳಿಯಾಸೆಯಿಂದುಱಿದುದೆಂದೊಡೆ ಕಾಂತೆಯನಾರು ಬಣ್ಣಿಪರ್ ೧೦೮

ಹರಿನೀಲೋಪಮುಧ್ಯಕೇಶ ಶಶಿಬಿಂಬಾಸ್ಯೋಷ್ಠ ಸದ್ಭದ್ರಸಿಂ
ಧುರಕುಂಭೋಪಮಯಾನ ತುಂಗಕುಚ ಶೈವಾಲೋಲ್ಲತಾರೋಮರಾ
ಜಿ ರಟದ್ಬಾಹುವಿಲಾಸ ಚಂಚದರುಣಾಂಭೋಜದ್ವಯಾಪಾಂಗಿನೀ
ತರುಣೀನಾಮೆಗೆ ಪಂಚಬಾಣಕವಿಯೆಂಬೀ ವ್ಯೈಮೆಯಂ ನೋೞ್ಪುದೇ ೧೦೯

ತರುಣೀರೂಪನೆ ಬಣ್ಣಿಸಲ್ಕಳುಕಿ ಪುಷ್ಪಾಸ್ತ್ರೇಕ್ಷುಕೋದಂಡದಿಂ
ಧುರದೊಳ್ ಸೋತೆನೆನುತ್ತಮಂ ಬಿಸುಡುತಂ ಸ್ತ್ರೀಭ್ರೂಲತಾಚಾಪದು
ತ್ಕರವಕ್ಷೋರುಹಚಕ್ರದಂತಕುಲಿಶೋದ್ಯತ್ಕೇಶಪಾಶಂಗಳಿಂ
ಹರನಂ ಗೆಲ್ವೆನೆನುತ್ತ ಕಂತು ಬಲವಾನ್ ದೋರ್ದಂಡಮಂ ತೂಗುವಂ ೧೧೦

ನೆಲೆಮೊಲೆ ಕೊತ್ತಳಂ ಜಘನವಟ್ಟಳೆ ಮೇಲುದು ಪೊನ್ನಕೋಂಟೆ ಮೇ
ಖಲೆ ಪರಿಖಾಳಿ ನಾಭಿ ನಡುವೀಧಿ ಮುಖಂ ರಣಮಂಡಲಂ ಕಚಂ
ಲಲಿತಪತಾಕೆ ಕಾಂತಿ ಜಲಸಂಪದವಕ್ಷಿಮರೀಚಿ ಶಸ್ತ್ರಸಂ
ಕುಳಮೆನೆ ನೀೞಿತ ತೋಱಿದಳನಂಗನ ಜಂಗಮದುರ್ಗಲಕ್ಷ್ಮಿಯೋಲ್ ೧೧೧

ಆನೇಂ ಕಾಂತೆಯ ರೂಪನೇನುಸುರಬಲ್ಲೆಂ ಬಣ್ಣಿಸಲ್ಮಾಧವಂ
ತಾನುದ್ಯೋಗಿಸಿ ಭಾನುವಿಂಗೆ ಮುಳಿದಾ ಸ್ವರ್ಭಾನುವಂ ಬೈದುವಂ
ತೇನಂ ಮಾಣದೆ ಪಂಚಬಾಣನಜನಂ ಬೈದಾತ್ಮಹಸ್ತಸ್ಥಸ
ದ್ಭಾನುದ್ಯನ್ನವರತ್ನದಾ ಮುಕುರಮಂ ಚೂರ್ಣೀಕೃತಂ ಮಾಡಿದಂ ೧೧೨

ತರುವನಡರ್ದುದಾ ಚಂಪಕ ಕಾನನಕೆಯ್ದಿತ್ತೇಣ ಪಂ
ಜರದೊಳಗಿರ್ದುದಾ ಶುಕನು ಗಹ್ವರವೊಕ್ಕುದು ಸಿಂಹ ನೀರೊಳಂ
ಕಿರಿ ನೆಲಸಿತ್ತು ಪದ್ಮದಳ ಕೋಮಲೆಯ ನಾಸಿಕ ಲೋಚನ ವಾಣಿ ಮಧ್ಯತ
ತ್ಕರತಳಮೆಂಬಿವಕ್ಕೆ ಸರಿಯಪ್ಪೊಡೆ ತೀರದೆನಿಪ್ಪ ಲಜ್ಜೆಯಿಂ ೧೧೩

ಸುದತೀನಿರ್ಮಾಣದೊಳ್ ಜಾಣನೆ ಜಡಜಜನೇವಾಟಿತ್ತಿಯೆಂದಂಗಜನ್ಮಂ
ಪದವಿಲ್ಲಂ ಪೂವಿನಂಬಂ ಬಿಡದೆ ಜಡಿದು ಕಾರ್ಕಶ್ಯಮಂ ತಾಳ್ವ ಕೈಗಳ್
ಪದನಲ್ಲೆಂದೊಲ್ಲದೇಕಾಂತದೊಳೆ ಮನಮೆ ಕೈಯಾಗೆ ಕಣ್ಗೊಳ್ವಿನಂ ಮಾ
ಡಿದನೀ ಮಾದೇವಿಗಂತಲ್ಲದೊಡಿನಿತುವರಂ ಸಾರ್ಗುಮೇ ಸೌಕುಮಾರ್ಯಂ

ಕಡೆಗಂಗಳ್ ತನ್ನ ಚೈತ್ರಧ್ವಜಕೆ ಪೊಳೆಪನೊಲ್ದೀಯದಂದಾಸ್ಯಬಿಂಬಂ
ಬಿಡದಂಭೋಜಾದಿಗೋವಂದಮೃತಕಳೆಗಳಂ ಬೀಱದಂದುರ್ವಿ ಪುರ್ವಿಂ
ಮುಡಿ ಚೆಲ್ವಂ ಕರ್ಬುವಿಲ್ಲೋವದೆ ಕರುಣಿಸದಂದಾವಗಂ ಬಂದು ಚಿತ್ತಂ
ಬಿಡದೆತ್ತಂ ಪೋಗದಿಂತೋಲಗಿಪನೆ ತರುಣೀರೂಪಮಂ ಪುಷ್ಪಚಾಪಂ ೧೧೫

ನೋಡುವ ನೆಯ್ದಿಲೊಯ್ಯನುಸುರಿಕ್ಕುವ ಸಂಪಗೆ ಮುದ್ದುವೀಱಿ ಮಾ
ತಾಡುವ ದರ್ಪಣಂ ನಡೆವ ತಾವರೆ ಪಾಡುವ ಕಂಬುವೋತು ಬಾ
ಯಾಡುವ ವಿದ್ರುಮಂ ಪ್ರಿಯದಿನಪ್ಪುವ ಚಂಪಕಮಾಲೆ ಮಾಲೆಯಂ
ಸೂಡುವ ಸೋಗೆಯೆನ್ನದವಳಂಗದ ಚೆಲ್ವನದೇನನೆಂಬುದೋ ೧೧೬

ಕಱೆಕಱೆಗುಂದಿದಂ ಮೊಗದ ಮೈಸಿರಿಗಂದಮೃತಾಂಶು ಲಜ್ಜೆಯಿಂ
ಕುಱುಕುಱುಗೊಂಡು ಕಾಲ್ವಿಡಿದುದೊಳ್ನಡೆಗಳ್ಕಿ ಮರಾಳನಾವಗಂ
ಪಱಿಪಱಿಯಾಯ್ತು ಪಜ್ಜಳಿಪ ಮೆಯ್ವೆಳಗಿಂಗೆಳೆಮಿಂಚೆನಲ್ಕದಾ
ರಱಿಂದಭಿವರ್ಣಿಪರ್ ಸತಿಯ ರೂಪಿನ ರೂಢಿಸಿದೊಂದು ಗಾಡಿಯಂ ೧೧೭

ಅದು ಕಂದಿಲ್ಲದ ಚಂದ್ರಬಿಂಬಮದು ಮೌರ್ವೀಬಂಧಮಂ ಮಾಣ್ದು ಕೊಂ
ಕಿದ ಕೃಷ್ಣೇಕ್ಷುಧನುರ್ವಿಳಾಸಮದು ಝೇಂಕಾರಕ್ಕೆ ಪಕ್ಕಾಗದು
ನ್ಮದಭೃಂಗಾಳಿಯದಾಗಳಂ ತಳಿಯದೊಪ್ಪಂದೋರ್ಪ ಮಿಂಚೆಂದು ಮಾ
ಣದೆ ಬೇಱೆಂಬುದೆ ಗಾಂಪ ನೀಱೆಯ ಮುಖ ಭ್ರೂ ಕುಂತಳಾಪಾಂಗಮಂ ೧೧೮

ಎಳಮಿಂಚಂಗಱೆವುತ್ಪಲಂ ಪೆಱಗೆ ಪಾಯ್ದೊಳ್ದುಂಬಿ ಬೆಳ್ದಿಂಗಳಂ
ಕೆಳೆಗೊಂಡಂಬುಜಮಿಂಬುವೆತ್ತಮೃತಮಂ ಬೈಶಿಟ್ಟ ಬಂಧೂಕಮು
ಜ್ವಲ ವಜ್ರಾಂಶುವನಪ್ಪಿ ಮಾರ್ಪೊಳೆವ ಕುಂದಂ ಮಂದಯಾನಂ ಮನಂ
ಗೊಳೆ ತಮ್ಮೊಳ್ ಸಲೆ ಸಂದ ಕೆಂದಳಿರ್ಗಳಂದಂಬೆತ್ತವಜ್ಜಾಕ್ಷಿಯಾ ೧೧೯

# ಪಾದಾದಿಕೇಶಪರ್ಯಂತ ಶೃಂಗಾರ ವರ್ಣನಂ

ವಶವರ್ತಿಮಾಟ್ಪಿಮಂಗಜ
ವಿಶಿಖದಿನೀಕ್ಷಿಸಿದ ವಿಟರನವಯವದೊಳಗೆಂ
ಬ ಶಲಾಕೆಯೊಳಂ ಪ್ರತ್ಯೇ
ಕ ಶೋಭೆಯಿಂ ಸೊಗಸು ರಂಜಿಕುಂ ಬಾಲಕಿಯಾ ೧೨೦

ಪಲ್ಲದು ಪೆಣಸಲ್ ತನಗಿನಿ
ಪಲ್ಲದು ಜೆಲ್ವೆನಿಸಿ ಗೆಲ್ದ ಸತಿಯಡಿದಳಿರ್ಗಳ್
ಪಲ್ಲವಕಮನೀಯತೆಯಿಂ
ಪಲ್ಲವಕೆ ಮನಃಪ್ರಮೋದಮಂ ಪೆರ್ಚಿಸುಗುಂ ೧೨೧

ಮದಕಳಮರಾಳಗಮನೆಯ
ಪದಮಂ ಪಲ್ಲವದೆ ಪೋಲ್ವೆನೆಂಬನುರಾಗಂ
ಪುದಿದಿರ್ದಶೋಕವಲ್ಲರಿ
ಸುದತಿಯೊಳೆಡಗಾಲೊಳೊದೆಸಿಕೊಂಡಪುದಿನ್ನುಂ ೧೨೨

ಪೊಸಮುತ್ತನುಗುಟ್ವಿ ನವಶು
ಕ್ತಿಸಸಂಪುಟ ಕಡಲವಿದ್ರುಮಂ ಸೋಂಕಲೊಡಂ
ನಸುಗೆಂಪುವೆತ್ತವೆಂಬಂ
ತೆಸಗುಂ ನಖದೀಪ್ತಿ ಮೆಱೆವ ಪದಯುಗಮವಳ ೧೨೩

ಒಂದನೊಂದೊಂದು ಹಿಂದಿಡು
ವಂದದಿತಾಂ ಕಿನಿಸಿ ಕೆಚ್ಚನಾದವೊಲೆಸೆದುವು
ಸೌಂದರ್ಯದರುಣಚರಣಂ
ಮಂದಸ್ಮಿತವದನ ವಿದಿತ ಮದಮಾನಿನಿಯ ೧೨೪

ಮಿನುಗುವ ನಿಟ್ಟೆಸಳೊಳ್ ನೀ
ರ್ವನಿಗಳನೊಳಕೊಂಡು ತೋರ್ಪ ಕೆಂದಾವರೆಯಂ
ನೆನೆಯಿಸಿದುವು ಕಾಲುಗುರೆನ
ಲೆನಸುಂ ಕಣ್ಗೊಳಿಪ ನಿಡಿಯ ಮೆಲ್ಲಡಿಯವಳಾ ೧೨೫

ಒದೆದಪೆನೆಂದೆತ್ತಲೊಡಂ
ಪುದಿದಸುಗೆಯ ತಳಿರ ಕೆಂಪು ಭೋಂಕನೆ ಪದವಿಡಿ
ದದಱ ಮೃದುಗಂಡು ಮೋಹಿಸಿ
ಕದಲದೆ ನಿಂತಂತೆ ಕಾಂತೆಯಡಿ ಕೆಂಪೆಸೆಗುಂ ೧೨೬

ಅಲರ್ವಿಲ್ಲನೆಂಬ ಬಾಲಂ ಸಲೆ
ಪಳುಕಿನ ಲಗ್ಗೆಯೊಡ್ಡಿ ಹಿಮ್ಮಡಸೆಂಡಿಂ
ದೊಲೆದಿಟ್ಟೊಡನೋರಣದಿಂ
ನಿಲೆ ಬಿರ್ದವೊಲಾದುವವಳ ಪದನಖನಿಕರಂ ೧೨೭

ನುಡಿಯರಸಂ ಕಾಲ್ಬೆರಲೊಳ್
ಪೊಡವಿಯ ಲಲನೆಯರ ಚೆಲ್ವ ನಿಲಿಸೆಡೆಯಾಡಿದೊ
ಡೆಡಹದವೋಲ್ ಸೋಲಂಗಳ
ಪಡೆದಂದದೊಳಾದುದವಳ ನಖಪದದೊಳ್ಪಿಂ ೧೨೮

ತತ್ತರುಣಿಯ ಮೆಲ್ನಡೆಗಳ
ಬಿತ್ತರಮಂ ನೋಡಿ ನೋಡಿ ಸಂತಸದಿಂದಂ
ಪತ್ತುವೊಗವಾಗಿ ಮೆಲ್ಲಡಿ
ಮುತ್ತಂ ಮುಕ್ಕುಳಿಸಿದಂತೆ ಸೊಗಯಿಪುವುಗುರ್ಗಳ್ ೧೨೯

ಸ್ತನಸಂಗಮಿರಲ್ ಸದ್ಯ
ಸ್ತನಸಂಗಂ ನೆಗೞ್ಗೆ ಮೆಮ್ಮೊಳಧಿಪತಿಗೆ ಕುಚ
ಕ್ಕೆನಿಸುನ್ನತಿಯೇಕೆನುತಂ
ಕಿನಿಸುವವೋಲ್ ನಿಮಿರ್ದು ಕನ್ನೆಯುಂಗುಟಮೆಸಗುಂ ೧೩೦

ಕುಂದದ ರಶ್ಮಿತೆಯ ಮಡಂ
ಕುಂದದ ಚೆಲ್ವಿಂ ಮನೋಜರಾಜಕ್ರೀಡಾ
ಕಂದುಕಮೆನೆ ಜನದ ಮನ
ಕ್ಕಂದು ಕರಂ ಮುದವನೊದವಿಕುಂ ಮೃದುಗತಿಯಿಂ ೧೩೧

ಕಾಮನ ತಿಳಿಗೊಳನೆನಿಪ ನಿ
ಕಾಮನಖದ್ಯುತಿಜಲಪ್ರವಾಹದೊಳೆಸೆವಾ
ವಾಮೆಯ ಮೇಗಾಲ್ ಸೊಗಯಿಸು
ವಾಮೆಯನನುಕೊಳಿಸಿ ಮನವನಿೞ್ಕುಳಿಗೊಳ್ಗುಂ ೧೩೨

ನಡೆನೋಡಿ ನಾಣ್ಚಿ ಕೈಕಾ
ಲೊಡಲಂ ಪುಗೆ ತಲೆಯನೆತ್ತಲಣ್ಮದೆ ಕೂರ್ಮಂ
ಮಡುವಂ ಬಿಟ್ದಿನೆನಲ್ಕಾ
ಮಡದಿಯ ಮೇಗಾಲ ಪಾಂಗನದು ಪೋಲ್ತಪುದೇ ೧೩೩

ಮುನಿಸಿನೊಳೀ ಕಣೆಕಾಲ್ಗಳ
ನಿನಿಯಂ ಬಿಗಿಯಪ್ಪಿಕೊಂಡೊಡಾ ಮುನಿಸಂ ಮೇಣ್
ಘನವಂ ಮಾಡುವೆನೆಂಬುದ
ನನುಕರಿಸುತೆ ಬಿಡದೆ ಚರಣನೂಪುರವೆಸಗುಂ ೧೩೪

ಮದದಾನೆ ಸೋಲ್ವುದೆನ್ನಯ
ಮೃದುಗತಿಗೇವಾೞ್ತೆ ನೀವೆನುತ್ತಂಚೆಗಳಂ
ಪದಲಕ್ಷ್ಮಿ ಜಱಿವ ತೆಱದಿಂ
ಸುದತಿಯ ನೂಪುರದ ನುಣ್ಚರಂ ಸೊಗಯಿಸುಗುಂ ೧೩೫

ಪೊಣರದು ಮದನನ ಡೊಣೆಗಳ್
ಪೊಣರದೆನಲ್ ನಂಬಿ ಕೇಳ್ವುದಾ ಯುವತಿಶಿಖಾ
ಮಣಿಯ ಕಿಱುದೊಡೆಯನೀಕ್ಷಿಸಿ
ಮಣಿಯದರಾರ್ ಮದನನಿಸುವ ಮೋಹಿನಿಶರಮಂ ೧೩೬

ಕಡುಪೞೀವನಂಗನಂ ಬೆಂ
ಬಿಡದುಪಜೀವಿಸುವ ಕೊರತೆಗಳ್ಕದೆ ತನ್ಮೊಳ್
ತೊಡರ್ದೊಡೆ ಮಡದಿಯ ಕಿಱುದೊಡೆ
ತೊಡೆಯದೆ ಪೂಗಣೆಯ ದೊಣೆಯ ಪಣೆಯಕ್ಕರಮಂ ೧೩೭

ಮದನನ ಬಾಣನಿಷಂಗಂ
ಸುದತಿಯ ಕಾಲ್ವಿಡಿದು ಪೆಂಪುಪಡೆಯಲ್ ಬಂದಿ
ರ್ದುದೊ ಪೇೞಿತಂಬ ವಿಳಾಸಾ
ಸ್ಪದದಿಂ ಮೆಱೆದಿರ್ಪುದವಳ ಜಂಘಾಕಾಂಡಂ ೧೩೮

ಕಾಮನ ಪದ್ಮಾದ್ಯಶರ
ಕ್ಕಾವಗಮೊಳಗಾದ ದೊಣೆಯನೆರಡಂ ಬ್ರಹ್ಮಂ
ಜೀವವನಿಟ್ಟೆಡೆಗೆಯ್ಯದೆ
ಭಾವಿಸಿ ಮಾಡಿದವೊಲವಳ ಕಣೆಗಾಲೆಸೆಗುಂ ೧೩೯

ರಂಭಾವಿಭವದಿನಧಿಕತ
ರಂ ಭಾವಿಸೆ ಪತಿಮನೋವಮದೇಭಾಲಾನ
ಸ್ತಂಭಮೆನಲ್ ನೋಡೆ ಸುಗತಿ
ಸ್ತಂಭನನೊಡರಿಪುವು ಬಟ್ಟದೊಡೆ ಬಾಲಕಿಯಾ ೧೪೦

ಕಣ್ಣಣಿಯೆ ನೋಡಿ ಕಾಂತೆಯ
ನುಣ್ಣೊಡೆಗಗ್ಗಳದ ಗೆಲವನಿತ್ತಂಗಭವಂ
ಪೂಣ್ದಡಿಯನಾರನಟ್ಟದೆ
ಮಾಣ್ದನೆ ಪೇಟಿವಕೆ ಕನಕಕದಳಿಯನಿಳೆಯೊಳ್ ೧೪೧

ಕಾಮನನಿಳಯಕ್ಕೊಲವಿಂ
ಸೋಮಂ ಶುಭಲಗ್ನದೊಳ್ ಪ್ರತಿಷ್ಠಿಸಿದ ಲಸತ್
ಕೋಮಲ ರಂಭಾಸ್ತಂಭನಿ
ಕಾಮವೆನಲ್ ಮೆಱೆವುವಾಕೆಯೂರುದ್ವಯಗಳ್ ೧೪೨

ಆ ಲಲಿತದ ರಂಭಾಳಿಯ
ನೇಳಿಸುತಂ ನಲ್ಲಮಲ್ಲನಭ್ಯಾಸಿಸುವಾ
ಜೋಳೀಗಂಬಗಳೆಂದೆನ
ಲಾ ಲಲನೆಯ ತೋರದೂರು ಸಾರದೊಳೆಸೆಗುಂ ೧೪೩

ಸೇರದೆ ಬಾೞೆಯ ಕಂಬನ
ನೋರಂತಿರೆ ನುಣ್ಪುವೆತ್ತು ಸೋಲಿಪ ಚೆಲ್ವಿಂ
ಬಾರಿಸಿ ಸೊಬಗಿಂದೆತ್ತಿದ
ತೋರಣಗಂಬಂಬೊಲಿರ್ದುವಾಕೆಯ ತೊಡೆಗಳ್ ೧೪೪

ಸ್ಮರನೆಂಬ ತೋಂಟವಾಳಿಗ
ನುರುತರದಿಂ ಬಿತ್ತಲೆಂದು ಚಿನ್ನದ ಬಟ್ಟಲೊ
ಳಿರಿದಾದ ಶಾಕಿಬೀಜವ
ನಿರದೆತ್ತಿದೊಲವಳ ಮದನಮಂದಿರಮೆಸೆಗುಂ ೧೪೫

ವಿಶ್ವಜಯಕೆಂದು ಮದನಂ
ವಿಶ್ವಾಸದೊಳರ್ಚಿಸುತ್ತೆ ಬಳಸುತಲಿರ್ಪಾ
ಅಶ್ವತ್ಥದ ಕಿಱುದಳಿರೆನೆ
ಭಾಸ್ವತ್ಕೋಮಲೆಯ ಮದನಮಂದಿರವೆಸೆಗುಂ ೧೪೬

ಕುಂದಣದ ತಗಡನುಬ್ಬಿಸಿ
ಹೊಂದಿಸಿ ಸಂಪಗೆಯ ಮೊಗ್ಗ ಹರವೇ ಬೀಜವ
ತಂದು ಚೆಲ್ಲಿದನೋ ಮನ್ಮಥ
ನೆಂದೆಂಬೊಲು ಕಂತುನಿಲಯ ಕಂಗೊಳಿಸಿರ್ಕುಂ ೧೪೭

ಅರುಣಿಮರೋಮದಿಂ ಕಡುರಸಿಕ್ತ ಶುಭಾಕೃತಿ ಕೋಮಲಂ ನಯಂ
ಸರಸ ಶರೀರಕಾಂತಿ ಸಮಧಾತು ನಿರೋಗತೆ ನಿರ್ಮಲಂ ಕರಂ
ಸುರುಧಿರಮಿಂದ್ರಿಯಂ ತ್ರಸಹರಂ ಸಫಲಂ ನರಮಿಲ್ಲದೊಪ್ಪಮುಂ
ಸುರಭಿಸುಯೋನಿಯಲ್ಲಿ ಪದಿನೆಂಟುಗುಣಂ ಗಡ ದಿವ್ಯಕಾಂತೆಯಾ ೧೪೮

ಕಾಂತನ ಹೃತ್ಕೇಕಿದಱಿಂ೩ೊಳ್
ಕಾಂತನವತಿಮುದಮನಲ್ಲಿಯಱಿವುದರಿಂದಂ
ಕಂತುವಕೃತಕಾದ್ರಿಯೆನ
ಲ್ಕಿಂತು ವನಜಾಕ್ಷಿಗೆಸೆಗುವುದತಿಘನಜಘನಂ ೧೪೯

ಅಚ್ಚರಿಯಿದು ಪೊಗಟ್ವರ ಬಗೆ
ಯಚ್ಚಿಡದಿರಲೊಡನೆ ಬಿಡದೆ ನೋಟ್ಪರ ಕಣ್ಗಂ
ದಚ್ಚಿರದ ಚಿತ್ತಜನ್ಮನ
ನಚ್ಚಿನ ರಥಚರಣವೆನಿಸುವಾಕೆಯ ಜಘನಂ ೧೫೦

ಮದನಶಬರಾಸ್ತ್ರತತಿಗ
ಳ್ಕಿದ ವಿಟಮೃಗಸಮಿತಿಗಡರ್ದು ಬರ್ದುಕುವ ಶೈಲಾ
ಗ್ರದ ತೆಱದಿನೊಪ್ಪುತಿರ್ಕುಂ
ಸುದತಿಯ ಗುರುತರ ನಿತಂಬವತ್ಯುನ್ನತಿಯಿಂ ೧೫೧

ಎಳೆಯಳ ಮೊಗದ ನೆಟಿಲ್ ತ
ಮ್ಮೊಳಗಿರೆ ಸಂತಸದೆ ಬೀಗಿ ಬೆಳೆದಿರ್ದ ಕುಚಂ
ಗಳ ಮಱೆ೩ಯೊಳ್ ಕಾಣದೆ ಮೊಗ
ದಳವಂ ನಡು ನೆನೆದು ಕಡುಬಡವನಾಂತಿರ್ಕುಂ ೧೫೨

ತುಂಗಕುಚಭರೆಯ ನಡುವಂ
ಭಂಗುರದೆವ್ವನದ ವಿಕಲತೆಯದೆನ್ನದೆ ನೀಂ
ಸಿಂಗದ ನಡುವೆಂದರೆ ಪೆಱ
ಸಿಂಗದೆ ಕರಿಕುಂಭಮೆಂತು ಮೇಲಿರ್ದಪುದೊ ೧೫೩

ಮಡದಿಯ ಸೆಳೆನಡು ತನ್ನಯ
ಬಡತನದಿಂ ಹರಿಯ ಮಧ್ಯಮಂ ನಯದಿಂ ಕೀ
ಲ್ಪಿಡಿಸುತ್ತಿರ್ಪುದನಱಿದುಂ
ಪಿಡಿಯೊಳಗಾಗಿರ್ಪುದೆಂಬುದದು ಪುಸಿಯಲ್ತೆ ೧೫೪

ಬಾಸೆಯ ತನಗದು ನೆರವೆಂ
ಬಾಸೆಯ ಪಿಡಿದಡರಿ ನೋಟ್ಪವೋಲ್ ನಡುವೆಂಬೀ
ದೆಸೆಗೆ ತಂದಂಗಜನುಂ
ದೇಸಿಗೆ ಸಲಲಬ್ಜದಳದ ತೆಳ್ಪಸುರೆಸುಗುಂ ೧೫೫

ಎಲ್ಲರ್ ಕಂಡವೊಲಿದು ನನೆ
ವಿಲ್ಲೊಳ್ಪಿಡಿಗಾಳಿಗಲುಗುವೆಳೆಲತೆಯೆಂದ
ಲ್ಲಲ್ಲುಱಿ ಪೊಗಟ್ಪಿರಂತಾ
ಚೆಲ್ವಿನ ಸೆಳೆನಡುವನಱಿಯೆನಾ ಕೋಮಳೆಯಾ ೧೫೬

ಬಿಟ್ಟು ಬೆಳಸಿದರೆ ಬಾನೆಡೆ
ಗೆಟ್ಟಪುದೆಂದಡರಿ ನೋಡಿ ಜಘನಸ್ಥಳಮಂ
ನೆಟ್ಟನೆ ಬಿದಿ ಬಿಗಿದಂ ಪೊಂ
ಗಟ್ಟನೊಳೆನೆ ಕಾಂಚಿ ಕಣ್ಗೆವಂದುದು ಸತಿಯಾ ೧೫೭

ವನಿತೆಯ ತೆಳ್ಪಸಿಱಿಳತೆಯ
ವನಿತೆಯದೇಂ ತನುವನಿಟ್ಟ ಕುಳಿಯೆನೆ ಚಂದ್ರಾ
ನನೆಯ ಸುೞಿವೊಕ್ಕಳೆಸೆದುದು
ನನೆಯ ಶರಂ ನಾಂಟೆ ತನ್ನನೀಕ್ಷಿಸಿದವರಂ ೧೫೮

ಕಡುಚೆಲ್ವಿನವಯವಂ ಸ್ಮರ
ನಡರಿ ಕರಂ ಗುಣಿಸಿ ನೋಡಿ ನಡುವಿಲ್ಲೆಂದು
ಗ್ಗಡಿಸಿಟ್ಟ ಸೊನ್ನೆ[ಯಂದದಿ
ನೊ]ಡರಿಸಿದುದು ಕಣ್ಗೆ ಗವಳ ನಾಭೀವಲಯಂ ೧೫೯

ವಿಟರ ಚಳನಯನ ಶಫರಂ
ಚಟುಳತೆಯಿಂ ತಿರುಗುತಿರ್ಪ ಲಾವಣ್ಯರಸೋ
ತ್ಕಟಕೂಪವೆಂಬ ತೆಱದಿಂ
ಕುಟಿಲಾಳಕಿಗೆಸೆದುದಲ್ತೆ ನಾಭೀವಲಯಂ ೧೬೦

ಸ್ಮರರಾಮಂ ಲಾವಣ್ಯದ
ಶರಧಿಯು ರೋಮಾಳಿಸೇತುವೊಡೆಯುತೆ ತನ್ನಯ
ವರಧನುವಿಂ ತಿರುಪಿದವೋಲ್
ತರುಣಿಯ ಸುೞಿನಾಭಿ ಸುಗಮದಿಂ ರಂಜಿಸುಗುಂ ೧೬೧

ಮೊಗರಸಮೆ ಬಲಿದು ತೊಟ್ಟಿ
ಟ್ಟುಗೆವುಗೆಳಡುವೆಂಬ (?)ಭೂಜಕೞಿಯಾದವೊಲೇಂ
ಬಗೆಗೊಳಿಸಿತೊ ಸುೞಿಪೊಕ್ಕುಳ್
ಸೊಗಸುವ ಕಾಂತಾಕದಂಬತಲೆಮಾಣಿಕದಾ ೧೬೨

ಹಿಂದುಮುಂಗಡಸಿ ನಾಲ್ವರ
ತಂಡೆಯೆ ಮಧ್ಯಸ್ತ್ರಡೊಡವೆಯುಂ ಹಱಹಱೆಹಱ
ದಂತಾದವೆಂಬಂತೆ ಮಧ್ಯಂ
ಸಂದೇಹಕ್ಕೊಳಗಾದುದಾ ಕೋಮಳೆಯಾ (?) ೧೬೩

ನಳನಳಿಸಿ ಬೆಳೆದು ವಿರಹಾ
ವಳಿ ನಳನಳಿಸುಗು ವಿಳಾಸರಸದ ತರಂಗಾ
ವಳಿಗಳನೞಿಸುವ ಮಧ್ಯದ
ವಳಿಗಳನೀಕ್ಷಿಸಿದ ನೀಱರುಂ ಬಾಲಕಿಯಾ ೧೬೪

ಇನ್ನೆಲೆ ಬಡವಾದೊಡೆ ನಿನ
ಗೆನ್ನಾಣೆ ವಸಂತನಾಣೆ ರತಿಯಾಣೆಯೆನು
ತ್ತ್ರಂ ನಡುವಿಂಗಂಗಜನಿ
ಟ್ಟಂ ನಿಯಮದ ಗೆರೆಯನೆನಿಪುವಾಕೆಯ ವಳಿಗಳ್ ೧೬೫

ಮೂಲೋಕದ ಸೊಗವೀಗಳ್
ಲೀಲೆಯೊಳಡಿಯಿಟ್ಟು ಬಂದು ತೆಳ್ಪಸಿಱೊಳಗನು
ಕೂಲದೊಳೆ ಪೊಕ್ಕ ದಾರಿಯ
ವೋಲೆಸೆದುವು ಜೆಲ್ಪನಪ್ಪ ತಿವಳಿಗಳವಳಾ ೧೬೬

ಮಿಱುಪ ಸುೞಿವಡೆದ ಸಿಂಗರ
ಡೊಱೆಯೊಳ್ ಪ್ಪೈರ್ದೋರ್ಪ ತೆಱೆಗಳೆಂದೆಂಬಿನಮೇಂ
ನೆಱೆದವೊ ಪೊಕ್ಕಟಿ ಗಾಡಿಯೊ
ೞಱುಪುವ ತೆಳುನಸಿಱೊಳೊಸೆವ ತಿವಳಿಗಳವಳಾ ೧೬೭

ಬಾಲಕಿಗಳೆ ನಿಚಯಾಲಂ
ಬಾಲಕಿಗಾ ರೋಮರಾಜಿ ರಂಜಿಸುತಿರ್ಕುಂ
ನೀಲದ ಕಾಂಚೀಮಧ್ಯದ
ನೀಲದೊಳೆಸವುನ್ಮುಖಪ್ರಭಾಲೇಖೆಯವೋಲ್ ೧೬೮

ನೆಲೆವೊಲೆಯೆರಡಱ ಸಂದಂ
ಸಲೆ ಭೇದಿಪೆನೆಂದು ಮದನನತಿಸಾಹಸದಿಂ
ನಿಲಿಸಿದ ನೀಲದ ಸಲುಗೆಯ
ನಿಲವೆನಿಸಿತ್ತಮಮ ರೋಮರಾಜಿಯುವಳ್ಗಂ ೧೬೯

ಸಾರನನೆವಿಲ್ಲ ನುಣ್ಪಿನ
ನಾರಿಯುನೊಲ್ದೀಗಳಿಂತು ಪಡೆದಪಳೆನೆ ಭೃಂ
ಗಾರೋಚಿರುಚಿಯೊಲಲೆಗುಂ
ನಾರಿಯ ನಿಡು ಬಾಸೆ ಕೋಮಳಚ್ಛವಿಯಿಂದಂ ೧೭೦

ನುಣ್ಣನೆಯ ಸಣ್ಣ ಬಾಸೆಯ
ಬಣ್ಣಂ ಬಳಿದಮಲದೇಹಗೌರಚ್ಛವಿಯಂ
ಪಣ್ಣಂ ನುಂಗಲು ಶಾಮದ
ಹೆಣ್ಣಿಂದಿಂದಾದವವಳ ಬಾಸೆಯದೆಂತೊ ೧೭೧

ಸಮನೆ ಪೊಣರ್ವಕ್ಕಿ ವಿಳಾ
ಸಮನೆನಸುಂ ತಳೆದ ಘನಕುಚಂ ನಿಬಿಡತೆಯಿಂ
ರಮಣಿಗೆ ಸೊಗಯಿಸುಗುಂ ಹಾ
ರಮಣಿಗೆ ನುಸಳಲ್ಕೆ ತೆಱಪುಗುಡದನವರತಂ ೧೭೨

ನಿಡುದೋಳಿಂದಮರ್ದಪ್ಪುವ
ಕಡುನೇಹದ ಕಾಂತನೆರ್ದೆಯನೊಡನಪ್ಪುಗೆಯಂ
ಬಿಡದೊಡನೆ ಬೆಳೆವ ನೆಲೆವೊಲೆ
ಸಡಿಸಿಯೆ ಬಳಲಿದವಸಿಯಳೆಯೆಳಜವ್ವನದೊಳ್ ೧೭೩

ಶಶಿಕಿರಣಮನಾಯ್ದಾಯ್ದೊಲ್
ಬೆಸೆಯಲ್ ಪವಣಿಸಿದ ತೆಱದಿ ಮುಕ್ತಾಹಾರಂ
ನಸುಸೋಂಕಿ ಮುಗಿದವೆಂಬಂ
ತೆಸೆಗುಂ ಕುಚಕಮಲಕುಟ್ಮಲಂ ಕೋಮಳೆಯಾ ೧೭೪

ಕೆಲನಿಸಿಸುಗಂಡ ಕಣ್ಸವಿ
ನೆಲಸಲ್ ನೆಲೆದೆಱಪು ಸಾಲದೆನೆ ಕೈಸೋಂಕಿನ
ಗೆಲವಂ ಬಣ್ಣಿಪೆನೆಂಬವ
ತಲೆ ಬೞಲಿತ್ತೆಂತೊ ತರುಣಿಯಾ ನೆಲೆಮೊಲೆಯಾ ೧೭೫

ಆಱಡಿಯಂತೆ ಸುಹೃತ್ಕಲ
ದಾಱಡಿಯಂತಚಲಭಾವಮುಗ್ನಸ್ಥಾನಂ
ಆಱಡಿಯಂತಾಱಡಿಯಂ
ತಾಱಡಿಯಂ ಪೋಲ್ತವವಳ ವೃತ್ತಕುಚಂಗಳ್ ೧೭೬

ಚಿತ್ರಭವಚಕ್ರವರ್ತಿಯ
ತತ್ತರುಣಿಯ ಚಕ್ರಮೆಸೆಯೆ ದಿಗ್ವಿಜಯಕ್ಕೆಂ
ದೆತ್ತಿದನುಳ್ಗೊಡಾರದ
ಬಿತ್ತರಮಂ ಪೋಲ್ತಪವಳ ವೃತ್ತಕುಚಂಗಳ್ ೧೭೭

ಪರಿವೃತ್ತತೆಯಿಂ ನುಣ್ಪಿಂ
ಶರಕಂದಪ್ರತಿಮ ಚಾರು ಗೌರಚ್ಛವಿಯಿಂ
ಪರಿಪಕ್ವತಾಳಫಲಕೊಂ
ದೊರೆಯೆನಿಸುಗುಮವಳ ಘನ ಪಯೋಧರಯುಗಳಂ ೧೭೮

ಮದನೇಂದ್ರಜಾಲಿಗಂ ಲೋ
ಕದ ಬಗೆ ಸೆಂಡುಗಳನಗಲದಿಟ್ಟಳವಡೆ ಮು
ಚ್ಚಿದ ಮಿಸುನಿವೆಸದ ಕಣ್ಮಾ
ಯದ ಠೌಳಿಯವೆನಿಪುವವಳ ವೃತ್ತಕುಚಂಗಳ್ ೧೭೯

ಒಡನಡುವೆಂಬುದಂ ಮುಱಿಯದೇ ಭರದಿಂ ನಳಿತೋಳ ಮೂಲಮುಂ
ಕೆಡಿಸದೆ ತಮ್ಮೊಳಿಟ್ಟಣಿಸಿ ಪೊಂಪುೞಿಯೋಗವೆ ವಕ್ತ್ರಪಂಕಜಂ
ಸೆಡೆದು ಮರಲ್ವಿನಂ ಚುಬುಕಗಂಡಮನೆತ್ತಪೆ ಮಧ್ಯಲಿಂಗಮೀ
ನಡುವಿನ ಕಪ್ಪುರಕ್ಕೆ ಮಣಿಯಾಗದೊಡೀಕೆಯ ಕರ್ಕಶಸ್ತನಂ ೧೮೧

ವಶಕೊಳಗಾಗದಿರ್ಪ ನವಯುವ್ವನೆಯಂ ಗೆಲಲೆಂದು ಮನ್ಮಥಂ
ಬಿಸಜದ ಮೊಗ್ಗೆಯಿಂದೆರಡು ಬಾಣಗಳಂ ತಿರುವಿಂಗೆ ಪೂಡಿ ತಾ
ನೆಸುತಿರೆ ಮುಗ್ಧೆ ಕಂಡು ಭಯದಿಂ ತಿರುಗಲ್ಕವು ಬೆನ್ನ ನಟ್ಟು ಪಾ
ಯ್ದೆಸೆದವೊಲೊಪ್ಪುಗುಂ ತರುಣಿಗಾ ಸರಸೀರುಹಕುಟ್ಮಳಸ್ತನಂ ೧೮೨

ರತಿಕಾಂತನಸಿಯ ನುಣ್ಬೊಗ
ರತಿಕಾಂತದ್ಯುತಿಯನಾಂತು ಚೆಲ್ವಿನೊಳಧಿಕಂ
ಲತೆಯು ಮೊದಲ್ಗೆನೆ ರತಿಲೋ
ಲತೆಯಂ ನಿನಗೀವುದವಳ ತೋಳ್ಮೊದಲ್ಗಳ್ ೧೮೨

ತಾಮರಸಮುಖಿಯ ನಳಿತೋಳ್
ತಾಮರಸಂ ಬೆಡಗುವೆತ್ತ ಸಿರಿಪದ ಸುಮನೋ
ದ್ದಾಮಕಮಂ ಗೆಲೆವಂದೆಸೆ
ದಾ ಮಕರಧ್ವಜನ ಪಾಶಮನೆ ಸೊಗಯಿಸುಗುಂ ೧೮೩

ಮೃಗನಯನೆಯ ಮೊಲೆ ಪೊಣರ್ವ
ಕ್ಕಿಗಳೆಡೆಯಾದಂದು ಜಗದೊಳಗಲದೆ ತಲೆಯಂ
ನೆಗಪಿ ನಗೆಜೊನ್ನವೆಳಗಿಂ
ಗಗಿಯದೆ ಮೊಗಸಸಿಯನಿಂತು ನಡೆನೋಡುಗುಮೇ ೧೮೪

ಅಣಿಯರದಿನತನು ತನುಲತೆ
ಗೆಣೆಸದೆ ಲಾವಣ್ಯರಸಮನೆತ್ತುವ ಪೊಸರಾ
ಟಣಮಾಲೆಯಂತಿರೆಸೆದಿರೆ
ಮಣಿಹಾರಂ ನಾಭಿಸರಸಿವರಮಂಗನೆಯಾ ೧೮೫

ಬಾಳದ ಪೊಗರದು ಸೆಣಸಲ್
ಬಾಳದು ತಾನಿದಱಿಕೂಳೆಂದು ಮೋದರಿಕೆಯನು
ಣ್ದೋಳೆ ಮನೋಭವಭೂಪನ
ಬಾಳದು ಬಾಱಿತಂದು ಪೊಗಱಿರಾರಱುಂದೆನ್ನ( ?) ೧೮೬

ಸಲ್ಲಲಿತ ವಿಮಳ ಸುಮನೋ
ವಲ್ಲರಿಯಂ ತಳೆದು ಪದೆಪಿನಿಂ ಮೆಲ್ಲಲರಿಂ
ದಲ್ಲಾಡುವ ಲತೆಗಳಿವೆನೆ
ಸೆಳ್ಳುಗುರಿಂದೆಸೆವುವವಳ ನಿಡು ನಳಿತೋಳ್ಗಳ್ ೧೮೭

ರನ್ನಕೆ ಪೊಳೆರ್ಪು ಮಿಸುನಿಯ
ಚಿನ್ನಕ್ಕೊಳ್ವಣ್ಣಮೆಸೆವ ಮುತ್ತಿಗೆ ಥಾಳಂ
ಕನ್ನೆಯ್ದಿಲ್ಗೆ ಮೃದುತ್ವಂ
ಚೆನ್ನೆಯ ನಳಿತೋಳ ದಯವಲಾದುವು ಮುನ್ನಂ ೧೮೮

ತರುಣ ಮೃಗಾಕ್ಷಿಯ ದೊರೆವೆ
ತ್ತರುಣತಳಂ ಬಾಹುಲತೆಯ ಪಲ್ಲವಮೆನೆ ಭಾ
ಸುರತರಮಾಗಿರೆಯಿನನೊಳ್
ಸುರತಮನಿಮ್ಮಡಿಸುಗುಂ ಕರಸ್ಪರ್ಶನದಿಂ ೧೮೯

ಕೆಂದಾವರೆಯೆಸಳ್ಗಳೊ ಪೊಸ
ಕೆಂದಳಿರ್ಗಳೊ ಮೇಣೆಪೆಂದು ಬಗೆವರ ಮನದೊಳ್
ಸಂದೆಗಮಂ ಮಾಣಿಸಿದುದು
ಕೆಂದಳದಂಗುಲಿಗಳುಗುರ ಬೆಳಗಂಗನೆಯಾ ೧೯೦

ಕದನಮನೊಡರ್ಚೆ ಮೂಲೋ
ಕದ ನವಯುವ್ವನರನಲೆವ ನನೆಗಣೆಗಳೆನಲ್
ಮದನಭುಜವಿಜಯಮಂ ತಾ
ಮದನಭಿವರ್ಣಿಸುವುವವಳ ಹಸ್ತಾಂಗುಲಿಗಳ್ ೧೯೧

ಸೊಗಯಿಪ ಮೃಗನಯನೆಯ ಸೆ
ಳ್ಳುಗುರ್ಗಳ್ ಮೂವಳಿಸಿ ಮುತ್ತಿ ಮುಸುಕಿದ ಮುಳ್ಳಿಂ
ಬಗಿದೆಂತು ಪೊಕ್ಕು ಚದುರಿಂ
ತೆಗೆದುವೊ ಕೇದಗೆಯ ಮಿಸುಪ ಗಱಿಗಳ ಚೆಲ್ವಂ ೧೯೨

ಮನಮಂ ಸಲೆಸೋಲಿಸಿ ಕಾ
ಮನ ಮಂಗಳಶಂಖದಂತೆಯೆಸೆವವಳ ಕೊರಳ್
ಜನವಾದಮೆನಿಸಿ ವರಭಾ
ಜನಮಾದತ್ತುಪಮೆಗಾಸ್ಯಮುಕುರದ ಪಿಡಿಯೋಲ್ ೧೯೩

ಪರಿಕಿಸೆ ಕಳಾವಿಳಾಸದ
ಪರಿರಂಭಕ್ಕಮರ್ದು ಚುಂಬನಕ್ಕಿಂಬಾಗಿ
ರ್ದರಸಿಯ ಕೊರಲ್ಗೆಕ್ಕಟ ಕೆಂ
ಗುರುಡರ ಕೈಬಾಯ್ಗೆ ಬಂದ ಶಂಖಂ ದೊರೆಯೇ ೧೯೪

ಇಂಬಿನ ಕಂಬುಗ್ರೀವಮಿ
ದೆಂಬರ ಮಾತಿರ್ಕೆ ಮೌಕ್ತಿಕಗ್ರೀವಂ ತಾ
ನೆಂಬುಹಮೆವೆತ್ತು ಶೋಭಾ
ಡಂಬರಮಂ ಪಡೆದುದವಳ ಕೋಮಲ ಕಂಠಂ ೧೯೫

ಇವಳ ಮೊಗದಂತೆ ಕಾಂತಿಯು
ಪವನಿಸದೆನಗೆಂದು ಕಂದನೆರ್ದೆಯೊಳೆ ತಳೆದಂ
ಹಿಮಗದಿರನೆಂದೊಡಿನ್ನುೞಿ
ದವರೇನಂ ಪೊಗೞಲಾರ್ಪರಾಕೆಯ ಮೊಗಮಂ ೧೯೬

ಮಿಳಿರ್ದಾಡುವ ಮಱಿದುಂಬಿಯ
ನೊಳಕೊಂಡೆಸೆದಿರ್ಪ ತಾವರೆಯವೋಲ್ಪೊಳೆಪಂ
ತಳೆದು ಕುರುಳೋಳಿಯಿಂ ಬಗೆ
ಗೊಳಿಸಿದುದೋರಂತೆ ಮಿಸುಪ ನಗೆಮೊಗಮವಳಾ ೧೯೭

ಪದೆದು ಸರೋಜಜಂ ಸುದತಿಯಾನನಮಂ ಸಮೆವಲ್ಲಿ ಚಂದ್ರಬಿಂ
ಬದ ನಡುವಿರ್ದ ಕೋಮಲ ಕಳಾವಳಿಯಂ ತವೆ ತೋಡಿಕೊಂಡೊಡಂ
ತದು ಬಯಲಾಗೆ ತದ್ಗಗನ ಕಾರ್ಷ್ಣ್ಯಮಿದಾಲಮಿದೆಂದು ಪುತ್ತಮೆಂ
ದಿದು ಮೃಗಮೆಂದು ಭಾವಿಸುತಲಿರ್ಪುದು ಸಂಶಯಭಾಜನಂ ಜನಂ ೧೯೮

ಸುದತೀವಕ್ತ್ರದ ಕೂಡೆ ಪೂರ್ಣಶಶಿಯಂ ತೂಗಲ್ಕೆ ತಂದಿಟ್ಟಜಂ
ಪದೆಪೆತ್ತಲ್ ಸರಿಬಾರದಿರ್ದೊಡದು ನೇತ್ರಕ್ಕೇಣನಂ ಮೋಷ್ಮಕಾ
ಲದಪಣ್ಣಂ ಬೆಳುದಿಂಗಳಂ ಹಸಿತಕಂ ತಾಂ ಕೂಡುತಂ ತೂಗಲಂ
ತದು ನೋಡಲ್ಲಘುವಾಗಿ ಪೋಯ್ತು ಗಗನಕ್ಕೇನೆಂಬೆನಾಶ್ಚರ್ಯಮಂ ೧೯೯

ಎರಡುಂ ಕರ್ಣಂ ಚಕ್ರಂ
ಸರಿಸದ ಮುಂಕುಣಿಯೆ ಮೂಗು ಕಂಗಳೆ ತುರಗಂ
ವರ ಧಮ್ಮಿಲ್ಲಮೆ ಧ್ವಜಮಾ
ಗಿರೆ ಮದನನ ರಥದೊಲೊಪ್ಪಿತಾಕೆಯ ವದನಂ ೨೦೦

ಮೃಗಶಿಶುನಯನೆಯ ನಚ್ಚಿನ
ನಗೆಮೊಗಮಂ ಕಂಡು ಕಂಡು ಸೈರಿಸದೆಸೆದಂ
ತೊಗೆದ ಕಳಂಕದ ನೆವದಿಂ
ಮೃಗಧರನೆದೆ ಪೊತ್ತಿ ಪೊಗೆವುತಿರ್ದಪುದಿನ್ನುಂ ೨೦೧

ತವದಿಂಪಿಂ ನಲ್ಲಂಗವ್ಬು
ತವದಂ ಪೆಱತಿಲ್ಲವೆನಿಸಿ ಬಂದುಗೆಯರಲಂ
ಪವಳದ ಬೊಟ್ಟಂ ಗೆಲ್ದುತಿ
ಪ್ಪವಳಧರಂ ಮಾಣದಧರಿಕುಂ ವಿಟಜನಮಂ ೨೦೨

ಅನುರಾಗರಸವಿಳಾಸಿನಿ
ಯಿನಿಯನ ಮೇಲ್ವಾಯಲೆಂದು ತದ್ವದನನಿಕೇ
ತನದ ಪೊಸಂತಿಲೊಳಿರ್ದಪ
ಳೆನೆ ಸತಿಯೊಳ್ದುಟಿಯ ಕೆಂಪು ರಂಜಿಸುತಿರ್ಕುಂ ೨೦೩

ಬಿಂಬಫಳಮುಂ ಕಳಾಧರ
ಬಿಂಬದ ನಡುವಿರಿಸಿ ಮದನನಮೃತದ ರಸಮುಂ
ತುಂಬಿದನೆನ್ನದೆ ಪೆಱತೇ
ನೆಂಬುದೊ ವಿಧುಮುಖಿಯ ವಿಲಸದರುಣಾಧರಮುಂ ೨೦೪

ತಳಿರೊಳ್ ಮಧುರಂ ವಿದ್ರುಮ
ದೊಳು ಮೃದು ಸುಧೆಯೊಡನೆ ಕೆಂಪು ಕಾಣಿಸದಿನೆ ಕೋ
ಮಳೆಯಧರಕೀಡುಮಾಳ್ಪಿವ
ನಿಳೆಯೊಳಗವ ಗಾಂಪನೆಂಬುದಿದು ಸಿದ್ಧಾಂತಂ ೨೦೫

ರದನಾಳಿಯನಾರ್ ಬಣ್ಣಿಪ
ರದನಾಳಿಗೊಳುತ್ತಮಿರ್ದು ಮುತ್ತಿನ ಚೆಲ್ವಂ
ಪುದು ತನ್ನ ಕಾಂತಿಪವಿಗೆಸಿ
ಪುದು ತನ್ನವಪಲ್ಲವೋಪಮಾನಾಧರೆಯಾ ೨೦೬

ಮಿಱುಗುವ ಮಿಂಚಿನ ಮೊಳೆಗಳ
ಮಱುಂಗಳೆನಿಪ್ಪವಳ ಧವಳ ದಶನಾವಳಿಯೆ
ಚ್ಚಱಿಸಿದುದು ವದನಸದನದೊ
ಳುಱುವ ಸರಸ್ವತಿಯ ಕೊರಲ ಹೀರಾವಳಿಯುಂ ೨೦೭

ವದನಸಿತಾಂಬುಜದೊಳ್ [ತೋ
ಱಿದ ದಂತಾಂಕುರದ] ಶೋಭೆಯಿಂದೊಪ್ಪುವ ವ
ಜ್ರದ ಕೇಸರಮೆಂಬುಪಮೆಗೆ
ಸದನಮೆನಲ್ ಮೆಱೆದುದವಳ ದಂತದ್ಯುತಿಗಳ್ ೨೦೮

ಮೊಗಮೆಂಬಂಬುಜಸೌರಭಕ್ಕೆಳಸಿ ನಾಸಾಚಂಪಕಾಶಂಕೆಯಿಂ
ಸುಗಿದೀಗಳ್ ಪಣೆಗೊಂಡು ಸುತ್ತಿ ಸುೞಿವುತ್ತಿರ್ದಪ್ಪುವೀ ಕುಂತಳಾ
ಳಿಗಳೆಂಬಲ್ಲಿಯ ವಾರ್ತೆಯಂ ಕಿವಿಗೆ ಕಂಗಳ್ ಪರ್ಚುಪೇೞ್ದಿಂದಮುಂ
ನಗುವಂತಿರ್ದುವು ದಂತಿಪಂಕ್ತಿನಿಚಯಂ ರೂಪ್ರಂ ವಿಚಿತ್ರಾಂಗಿಯಾ ೨೦೯

ಪಿರಿದುಮನುರಾಗದಿಂ ಬಿಂ
ದಿರೆ ಸೊಗಯಿಪ ಸೊಬಗುಗಂಡು ನಿಜಪರಿಮಳದಿಂ
ಪೊರೆದು ಮುಖಲಕ್ಷ್ಮಿ ಬಂದುಗೆ
ಯರಲಂ ಪೂಡಿದವೊಲಾಯ್ತು ಬಾಯ್ದೆಱೆ ಸತಿಯಾ ೨೧೦

ಪಿಂಗದೆ ಲಾವಣ್ಯದ ಸೊಂ
ಪಿಂಗದೆ ತಾ ನಿಲಯಮೆನಿಸಿ ಯವ್ವನಲಕ್ಷ್ಮಿಯ
ಮಂಗಳಮಣಿದರ್ಪಣಯು
ಗ್ಮಂಗಳವೆಂದೆನೆ ಕಪೋಲವಂಗನೆಗೆಸೆಗುಂ ೨೧೧

ತೊಲಗದೆ ನೋಡುವ ಮನ್ಮಥ
ಲಲನೆಯ ಮಣಿಮುಕುರದಳವನದಟಲೆವಾ ಕೋ
ಮಲೆಯ ಕದಪಿಂಗೆ ತಂಬುಲ
ದೆಲೆ ಸೆಣೆಸುವುದಾವ ಮೂಗನೊಳಕೊಂಡಿಳೆಯೊಳ್ ೨೧೨

ಕ್ಷೋಣಿಯನಲೆಯಲ್ ಸುಮನೋ
ಬಾಣಂ ಕುಸುಮಾಸ್ತ್ರವಿತತಿಯಂ ಮಸೆವ ಲಸತ್
ಸಾಣಮೆನಲೆಸೆವುತಿರ್ಕುಂ
ಮಾಣಿಕ್ಯಾಧರೆಯ ನುಣ್ಪುವೆತ್ತ ಕಪೋಲಂ ೨೧೩

ರಾಜಿಪ ಮುಖಲಕ್ಷ್ಮಿಗೆ ನೀ
ರಾಜಿತ ಮಣಿಪಾತ್ರಯುಗಳಮೆನೆ ಸೊಗಯಿಸುಗುಂ
ರಾಜೀವಮುಖಿಯ ತನುರುಚಿ
ರಾಜೀವಜಿತಾಕಲಾಪ ಕರ್ಣಯುಗಂಗಳ್ ೨೧೪

ತೊಳಗುವ ನಗೆಗಣ್ ನೆಯ್ದಿ
ಲ್ಗಳೆ ಕಾವಮೃತಾಂಶುಬಿಂಬಮಂ ಬಗಿದವೊಲು
ಜ್ವಳಿಸಿದುವು ಕರ್ಣಪಾಳಿಕೆ
ಯೊಳಕೆಯ್ದೆಳಮುತ್ತಿನೋಲೆಯಿಂ ಬಾಲಕಿಯಾ ೨೧೫

ಕಿವಿಯೆಂದು ಬರೆಯುತಂ
ಮೊದಲವರ್ಣಮಂ ಮಱೆದು ಕಡೆಯವರ್ಣಮನಂಗೋ
ದ್ಭವನಲ್ತೆ ಬರೆದನೆಂದೆನೆ
ಸುವಿಚಾರಂಬೆತ್ತವವಳ ವರ್ಣಿತ ಕರ್ಣಂ ೨೧೬

ಸಂಪಗೆಯರಲೊಳ್ ತನಗಿನಿ
ಸಂ ಪಗೆ ಚೆಲ್ವಿಂದಮೆನಿಪ ನಾಸಾಮುಕುಳಂ
ಕಂಪನವ ಪೊಯ್ಸಿ ತುಂಬಿಗೆ
ಕಂಪನಮಂ ವಿಟಜನಕ್ಕೆ ಮಾಟ್ಪುದು ಸತಿಯಾ ೨೧೭

ಮುಂ ಪಡೆದುದವಳ ನಾಸಿಕ
ಕಂಪಿನ ಕಣ್ಮಿಂಗಳೆಂಬವುಳ್ಪಱಿವಿಗೆಯಂ
ತಾಂ ಪೊತ್ತು ನಿಂದ ಮದನನ
ಸಂಪಗೆಯೊಳ್ನೆಯ ಕೇತುದಂಡಶ್ರೀಯೊಲ್ ೨೧೮

ಪಱಿಪೆಗಳೆಂಜಲಿಸದ ಮು
ನ್ನಱಿದು ವಸಂತಂ ಸುಗಂಧಮಂ ಬೈಚಿಟ್ಟಾ
ನಱುಗಂಪಿನ ಕುಪ್ಪಿಗೆಯೆಂ
ಬೆಱಕಮನೊಡರಿಸುವುದವಳ ನಾಸಾಮುಕುಳಂ ೨೧೯

ಕೈದುವನಿೞ್ಕೈದು ದಿಟ
ಕ್ಕೈದುವನಲರಂಬನತನು ಜಗಮಂ ಗೆಲ್ವಂ
ನೈದಿಲನೆ ಜಱೆವ ಚೆನ್ನೆ
ಯ್ದಿಲಣಂ ಸಾಲದೆನಿಸುವವಳಕ್ಷಿಗಳಿಂ ೨೨೦

ಲಾವಣ್ಯರಸದೆ ತೆಕ್ಕನೆ
ತೀವಿದ ಮುಖಸರಸಿಯೊಳಗಣೆಳೆಮೀನೆನಿಸಿ
ದಾವಗಮಲರ್ಗಣ್ಣಗ್ಗದ
ಧೀವರರಂ ಬೆಱಗೊಳುಱೆ ತೊಡರ್ಚುವುದವಳಾ ೨೨೧

ಲಲನಾರತ್ನವಿದೆನಿಸಿ
ರ್ಪೆಳೆಯಳ ಕಣ್ಬೊಗುವುದಕ್ಕೆ ಸಮಯಂ ಬಡೆಯಲ್
ನೆಲಸಿರ್ಪಂಜನಲೇಖಾ
ವಿಲಸತೆಯಂ ಪಡೆದವವಳ ಕೀಱೆವೆದುಱುಗಲ್ ೨೨೨

ಅಂಬುಜಪತ್ರಕ್ಕೆಱಗಿದ
ಎಂಬಿಯ ಮುೞಿಯೆಂಬ ತೆಱದಿನಬ್ಜಾಕ್ಷಿಯ ಕ
ಣ್ಣಿಂಬಾಗಿರ್ದುವು ಸರ್ವರ
ಕಂಬುಗೆ ಕರಿಯಾಲಿ ನೀಲಮಣಿಸನ್ನಿಭದಿಂ ೨೨೩

ತಿಂಗಳ ಬೆಳಗಿನ ರಸದಿನ
ನಂಗಂ ಪೂಗಣೆಯನುರ್ದಿ ಚಿತ್ರಿಸಿದನೊ ಕ
ರ್ಣಂಗಳ ಸೀಮೆಯೆನಲ್ ನಿಡು
ಗಂಗಳ ಬಿಳಿಯಾಲಿ ರಂಜಿಕುಂ ಕೋಮಳೆಯಾ ೨೨೪

ನಡುವಣ ಕಪ್ಪುಂ ಕಡೆಯಣ
ಕಡುವೆಳ್ಪುಂ ತುದಿಯ ಕೂರ್ಪುಮೆಸೆದಿರೆ ವಿಟರಂ
ಬಿಡದಿಸಲ್ ತೆಗೆದ ಮದನನ
ನಿಡಿಯಲರ್ಗಣೆಗಳನೆ ಪೋಲ್ತುವಾಕೆಯ ಕಣ್ಗಳ್ ೨೨೫
(ಕಾವ್ಯಾವಲೋಕನಂ -೧೫೦-)

ಮೊರೆಯುದಳಿ ಮುಗಿಯುದಬ್ಜಂ
ಕೊರಗದ ನನೆಯಂಬು ನೀರೊಳಾಡದ ಮೀನುಂ
ಚಿರಮೆನೆ ಮೊಟಗದ ಮಿಂಚಂ
ಬರಚರಮಲ್ಲದ ಚಕೋರನುಲರ್ಗಣ್ ಸತಿಯಾ ೨೨೬
(ಚಂದ್ರಪ್ರಭಪುರಾಣಂ, ೧೧-೯೭)

ಆಕೆಯ ವಕ್ತ್ರಚಂದ್ರಮನನಾಗ್ರಹದಿಂ ಗ್ರಹಿಸಲ್ಕೆ ನಾಭಿಯೊಳ್
ಭೀಕರ ರೋಮರಾಜಿಭುಜಗಂ ಪೊಱಮಟ್ಟುದ ಕಂಡು ಬಟ್ಟೆಯಂ
ತಾ ಕುಡದಡ್ಡಮಿರ್ದಪುವು ವೃತ್ತಕುಚದ್ವಯಮೆಂಬ ಮಾತ ಮ
ತ್ತಾ ಕಿವಿಗಳ್ಗೆ ನೇತ್ರಯುಗಮುಪ್ಪಿ ನಿರೂಪಿಸುತಿರ್ದವಾಗಳುಂ ೨೨೭

ಇರದೆ ನಿತಂಬಮೆಂಬಹಿನಿವಾಸದಿನೀಕೆಯ ರೋಮರಾಜಿಯೆಂ
ಬುರುಗನಣುರ್ಕೆಯಿಂ ಮೊಗಮನೊಪ್ಪುವ ಚಂದ್ರನೆ ಗೆತ್ತು ಕೋಪದಿಂ
ಬರೆ ಬರಲೀಯದತ್ತ ಮೊಲೆಗಳ್ ತಡೆದಿರ್ದುವಿವೆಂದು ಪರ್ಚುವಂ
ತಿರೆ ಕಿವಿಯೊಳ್ ಬೆಡಂಗಿಡಿದು ತೋರ್ಕುಮಪಾಂಗದ ನೋಟವಾಕೆಗಂ ೨೨೮

ವದನಾಬ್ಜಾಸವಗಂಧಲಂಪಟರಟದ್ಭೃಂಗಂಗಳಂ ಸೋಯಲೆ
ತ್ತಿದ ನೀಳೋತ್ಪಳಮಾಲೆಯಂ ದ್ವಿಗುಣಿಸಲ್ಕಾತ್ತರ್ತು ಕರ್ಣಾಂತಗಾ
ಮಿ ದಳನ್ನೀಳಸರೋಜರೋಚಿ ಕುಮುದಜ್ಯೋತ್ಸ್ನಾವದಾತಪ್ರಭಂ
ಮದನೋತ್ತೇಜಿತಬಾಣವಿಭ್ರಮಮಪಾಂಗಾಳೋಕನಂ ನಲ್ಲಳಾ ೨೨೯
(ಅಜಿತಪುರಾಣಂ ೯-೩೯, ಕಾವ್ಯಾವಲೋಕನಂ, ೯೩೦)

ಮೀಂಗಳನೊರ್ವಳ್ ಕೈರವಮನೊರ್ವಳ್ ಚಕೋರಮನೊರ್ವಳ್ ಚಂಚರೀ
ಕಂಗಳನೊರ್ವಳ್ ಮೋಹನಶರಂಗಳನೊರ್ವಳ್ ಬಸಂತದಚ್ಚ ಬೆ
ಳ್ದಿಂಗಳನೊರ್ವಳ್ ಬಾಲೆಯ ಮದಾಲಸತ್ ಸಂಚಲ ಮುಗ್ಧ ಸಸ್ಮಿತಾ
ಪಾಂಗಮನೊಲ್ದು ಬಣ್ಣಿಸುವರಾಕೆಯ ಚೆಲ್ವಿನ ಕಣ್ಣ ಮಾಲೆಯಂ ೨೩೦
(ಮಲ್ಲಿನಾಥ ಪುರಾಣಂ ೭–೭೦)

ಕಮನೀಯಂ ಸ್ಮರಧನು ಕೊಂ
ಕಮನೀಯಂದದೊಳೆ ಪಡೆಯದೆನೆ ನಿಡುಪುರ್ವಾ
ರಮಣೀಮುಖೇಂದುಬಿಂಬದ
ರಮಣೀಯ ಕಲಂಕಲೇಖೆವೋಲ್ ಸೊಗಯಿಸುಗುಂ ೨೩೧
(ಜಗನ್ನಾಥವಿಜಯಂ ೧೦–೪೨)

ಭಾವಭವನವಳ ಚೆಲ್ವಂ
ಭಾವಿಸೆ ಕಾಲಕ್ಕೆ ಕೈಪೆಯಾಗಿರಲಸಿತೋಳ್
ಜೀವಿನೆಸಳಿಟ್ಟ ಗಾಡಿಯ
ನಾವರಿಸಿದುದೆಸೆವ ಪುರ್ವು ಬಿಸಜಾನನೆಯಾ ೨೩೨

ಎಲೆ ಚಂದ್ರವದನೆ ನಿನ್ನಯ
ಕೆಳೆಯನ ಬಲ್ವಗೆಯ ಮಱುಗಳಿಂದಬ್ಜಭವಂ
ಮುಳಿದೊಪ್ಪುಗೊಟ್ಟ ರಾಹುವಿ
ನೆಳವಱಿಯೆನಲಡರ್ದು ಪುರ್ವು ರಂಜಿಪುವವಳಾ ೨೩೩

ಚಕ್ಕನೆ ಚಕೋರವಕ್ಕಿಗ
ಳಕ್ಕೆಕ್ಕೆಯೊಳುಂಡು ದಣಿದು ತಿಂಗಳ ಬೆಳಗಂ
ಮುಕ್ಕುಳಿಸಿ ಮುಗುಱಿ ಮುಗುಱ್ದುಗು
ಬ್ಬಿಕ್ಕಜಮುಂ ಪಡೆದವವಳ ಧವಳಾಪಾಂಗಂ ೨೩೪

ಸಕಳಂಕಮಾಪ ಪೆಱತಿಯೆನೆ
ಸಕಳಂ ಜನಮೆಯ್ದೆ ಪೊಗೞಲಳಕದ್ಯುತಿ ಮೇಣ್
ಚಕಿತವತಿಕಾಂತರಾಂತಂ
ಚಕಿತ ಮೃಗೇಕ್ಷಣಿಯ ಪೆಱತನೊಸಲ್ ಬಗೆಗೊಳಿಕುಂ(?) ೨೩೫

ಜನವಿನುತೆಯ ನೊಸಲೆಸೆದುದು
ನಿನಗೆಣೆಯಿಲ್ಲಖಿಳ ರಾಜಮಂಡಲವೆಂದಾ
ನನಕಧಿರಾಜತೆ ಸಲೆ ನಿಲೆ
ಮನಸಿಜನೆಳೆವೆಱತಿಯ ಪಟ್ಟಮಂ ಕಟ್ಟಿದವೋಲ್ ೨೩೬

ಕಮಲಕ್ಕೆಱಪಳಿಗಳಿನಲ್
ಕಮಲಕ್ಕೆ ಮುಖಾಂಬುಜಕ್ಕೆ ನಿಟಿಲಾಗ್ರಚಳತ್
ಭ್ರಮರಕ್ಕತಿಶಯಮೆಸೆಗುಂ
ಭ್ರಮರಕಂದಬಾಂಶುರುಚಿರ ಗುರುಕುಚಭರೆಯಾ ೨೩೭

ತೋರಣದಿನೆಸೆದುವಿಳೆಯಂ
ಕೂರಿಸಿ ನಗೆಗಣ್ಣ ಮಿಂಚು ಮಿಱುಗುವಿನಂ ಶೃಂ
ಗಾರರಸಮಂ ನಿಮಿರ್ಚುವ
ಕಾರಮುಗಿಲ್ಮಾಲೆಯಂತೆ ಕುಂತಳಮವಳ ೨೩೮

ಪೋಲಿಸೆ ತಮ್ಮಯ ಕಣ್ಣ
ಕ್ಕಾಲಿಗಳಾಗಿರ್ದು ಬರ್ದುವಲ್ಲದೆ ದಿಟಮಾ
ಗಾಲಿಸಿ ಕಂಡೊಡೆ ನಾಣ್ಚಿದ
ಪೀಲಿಯ ಗಱಿಯವಳ ಜಡಿವ ಮುಡಿಯ ಬೆಡಂಗಂ ೨೩೯

ನಾಸಾಸಂಪಗೆ ಗಂಧ
ಕ್ಕಾಸುರದಿಂದಱಿಯದೆಱಗಿದೆಳೆದುಂಬಿಗಳೊ
ಲ್ದಾ ಸೊಕ್ಕಿ ನೆಲಸಿದಪವೆನೆ
ದೇಸಿಯನಾಂತವಳ ಕುಟಿಲಕುಂತಳಮೆಸೆಗುಂ ೨೪೦

ಕಡಲೊಳ್ ಪುಟ್ಟಿದೊಡೇನವಂ ಕೊಳದೊಳಾನುಂ ಪುಟ್ಟಿನೇ ವೈರಮುಂ
ಬಿಡನೆಂದುಂ ಖಳನಬ್ಜನೆನ್ನೊಳವನಂ ನೀಂ ಗೆಲ್ದು ಸರ್ವಸ್ವಮುಂ
ಪಿಡಿದೆನ್ನಿಂಬರಮಾರೊ ಮಿತ್ರರೆನಗೆಂದಂಭೋರುಹಂ ಕೂರ್ತು ಕಾ
ಲ್ವಿಡಿದಂತಂತಿರೆ ತನ್ನ ಚೆಲ್ವನೆಸೆದತ್ತಾಸ್ಯಂ ಸರೋಜಾಸ್ಯೆಯಾ ೨೪೧

ಪ್ರಣುತ ಸುಧಾಗರ್ಭಮೆ ಕಾ
ರಣಮೀ ಕೋಮಳೆಯ ಮುಖಸುಧಾರುಚಿಗಳಿದಂ
ತೆಣೆಗೊಂಡು ತೊಳಗುತಿರ್ಪಾ
ಭಣಶಶಿಬಿಂಬಕ್ಕೆ ಕೃಶತೆಯೆತ್ತಣಿನಾಯ್ತೋ ೨೪೨

ನೀರವನತನುಗೆ ನಿಜಮಾ
ನೀರವಮಿದಱಿಂತು ಕುಡುದು ಕೋಕಿಲನಾದಂ
ಸಾರಮಿನಿತಿಲ್ಲದಮೃತದ
ಸಾರಮೆನಲ್ ಕಿವಿಗೆ ಸೊಗೆಯಿಕುಂ ದನಿ ಸತಿಯಾ ೨೪೩

ನಿರವಧಿ ಸೌಷ್ಟವದಿಂದಂ
ನಿರವಧಿಕಂ ಚೆಲ್ವುವೀಱು ಕಬರೀಭರದಿಂ
ಪರಭಾಗಂಬೆತ್ತಾಕೆಯ
ಪರಭಾಗಂ ಪತಿಯ ಮನಮನುರೆ ಸೆಱೆವಿಡಿಗುಂ ೨೪೪

ದೊರೆಗಡ ಚೆಂಬೊನ್ನಿದಱಿಂ
ದೊರೆಗಮಣಂ ಬಾರದೆನಿಸುವಾ ಪೀನಪಯೋ
ಧರೆಯ ತನುಕಾಂತಿ ಸತತಂ
ಧರೆಯನನನ್ಯಜನತೇಜದಂತಂಡೆಲೆಗುಂ ೨೪೫

ಕಾಂಚನದ ಬೊಂಬೆಗಳವಡೆ
ಮಿಂಚಿನ ಪೊಳಪಿಟ್ಟು ತಾನೆ ಜೀವಂಬೊಯ್ದಂ
ಪಂಚಶರನಕಟ ಪಱಿಯು ವಿ
ಪಂಚನ ಕೈಚಳಕದಳವು ನಾನಱಿಯದುಬೇ ೨೪೬

ನಿಲ್ಲದೆ ಕಣ್ಗಳೊಳ್ ಪೊಳೆದು ಪೋಪಱಿಮಿಂಚನೊಱಿಲ್ದು ಸೋಂಕೆ ಮೇಲ್
ನಿಲ್ಲದೆ ಬೆಂದ ಪೊನ್ನನೆಳೆಗಂಪಿನ ಗಾಳಿಗೆ ಬೆಚ್ಚಿ ತುಂಬಿವಿಂ
ಡೊಲ್ಲದೆ ಪೋಪ ಸಂಪಗೆಯನೇಂ ಪಗೆಯೆನ್ನದೆ ಪಾಟಿಯೆಂದಣಂ
ಸೊಲ್ಲಿಸಲಕ್ಕುಮೆ ಮಱಿದುಮಾಕೆಯ ಮೆಯ್ವೆಳಗಿಂಗೆ ಬಲ್ಲವಂ ೨೪೭

ವಳಯುದ ನೂಪುರದುಲಿ ಭೂ
ವಳಯುದ ಕಿವಿಗಮುರ್ದುಗಱಿಯಲತನುಗೆ ವಿಟರೊಳ್
ಕಳಹಂಸಮನಿಸೆ ಮುದವತ್
ಕಳಹಂಸಮನಿಱುಪುವಲಸಗತಿ ಕೋಮಲೆಯ ೨೪೮

ನವಿಲೋಟಂ ಹಂಸೆಯನಡೆ
ತವೆ ಮುಂದಾನಿಲನ ಸುಗತಿ ಮದಗಜಗಮನಂ
ತವತವಗೆ ಬೆಱಗುವಟ್ಟವು
ನವಿನಂ (?) ಬಾಲಕಿಯದೊಂದುಮೃದುಪದಗತಿಗಂ ೨೪೯

ಮದವತಿಯ ರೂಪುಗಂಡಳಿ
ಪಿ ದಿಟಂ ಪೆಱಗಱಿಯುದಂತೆ ನೆರೆದಪನೆಂದೋ
ವದೆ ಮನಸಿಜ ನೆನಿಸಿದನ
ಲ್ಲದೊಡಂಗಜನಂತೆ ದೇಹಮಂ ತೊಱೆದಪನೇ ೨೫೦

ಬಂಬಲ್ನಿಱಿ ಮದನನ ನನೆ
ಯಂಬಿನ ಪೊಡೆಯೆನಿಸಿ ಕಣೆಯುವುಳವಟ್ಟಿರೆ ಮು
ಯ್ವಂ ಬಳಸಿದ ಮೇಲುದು ಕುಚ
ಮಂ ಬಿಗಿದಿರೆ ಗುರುನಿತಂಬೆ ದುಗುಲಮನುಟ್ಟಳ್ ೨೫೧
(ಜಗನ್ನಾಥವಿಜಯಂ ೧೦-೧೦೬, ಸೂಕ್ತಿ ೬-೪೭)

ಗೆಲೆವಂದಮೃತಾರ್ಣವ ಫೇ
ನಲಕ್ಷ್ಮಿಯಂ ಮಿಸುಪ ದುಗುಲದುಳ್ಳುಡೆ ಪಿರಿದುಂ
ಲಲಿತಾಂಗಿಗೆ ಸೊಗಯಿಸಿದ
ತ್ತ್ರಲದೊಂಗಲ್ ಕಲ್ಪಲತೆಗೆ ಸೊಗಯಿಪ ತೆಱದಿಂ ೨೫೨
(ಜಗನ್ನಾಥವಿಜಯಂ ೧೦-೧೦೭)

ಘುಸೃಣರಸದಿಂದಮೆಸೆದಳ್
ಕಿಸಲಯದಿನಶೋಕಲತಿಕೆ ಕೇಸರರಜದಿಂ
ಬಿಸಜಿನಿ ಕೆಂಗವಸಣಿಗೆಯಿ
ನಸವಾಯುಧಚಾಪಲೇಖೆಯೆಸೆ[1]ವಂತೆಸೆದಳ್[1] ೨೫೩
(ಜಗನ್ನಾಥವಿಜಯಂ ೧೦-೧೦೫)

ತರುಣಿಯ ಪದ[2]ಯುಗದ[2]ಲತೆಗೆ
ಪೊರೆದೆಸೆದುದು ತಮ್ಮ[3] ನಾಯಕಂ[3] ಮೂರ್ಧ್ನದೊಳಾಂ
ತಿರೆ ತನ್ಮಣಿಮುಕುಟದ್ಯುತಿ
ಪೊರೆದಪ್ಪುದೀ ಕ್ರಮದೊಳೆಂದು ಸೂಚಿಪ ತೆಱದಿಂ ೨೫೪
(ಜಗನ್ನಾಥವಿಜಯಂ ೧೦-೧೦೯)

ವಿರುವನ್ಮಣಿನೂಪುರಯುತ
ಚರಣಾಬ್ಜದಿನೆಸೆದಳಸಿಯಳಬ್ಜಪರಾಗಂ
ಬೊರೆದು ಮೊಱೆವಳಿಗಳಂ ತಳೆ
ದರುಣಾಬ್ಜದಿನೆಸೆದು ತೋಱುತಿರ್ಪಬ್ಜನಿಯೋಲ್ ೨೫೫
(ಜಗನ್ನಾಥವಿಜಯಂ ೧೦-೧೧೧)

ಕನ್ನೆಯ ಸಿರಿಚರಣದ ಸೊಬ
ಗಿಂ ನೆಱೆ ಮುಕುಟಕ್ಕೆ ಸಾರ್ವುದೆಂದುಲಿವಂತ
ತ್ಯುನ್ನತ ಪದದೊಳ್ ಮೆಱೆಗುಂ
ರನ್ನದ ನೇವುರದ ದನಿ ಸರೋಜಾನನೆಯಾ ೨೫೬

---

[1] ಯಿಂತರವಳ್(ಅ) [2] ತಳವಲ(ಅ) [3] ನಚ್ಯುತಂ(ಅ)

ಧರಿಸಿದ ಮಣಿಮೇಖಲೆಯಿಂ
ಕರಮೆಸೆದತ್ತಲಘುಜಘನೆಯತಿಘನಜಘನಂ
ಸ್ಮರಕರಿಯ ಕುಂಭವಾಂತುದು
ಸುರತ್ನನಕ್ಷತ್ರಮಾಲಿಕೆಯನೆಂಬಿನೆಗಂ ೨೫೭

ಮಾರನರಮನೆಯ ರತ್ನದ
ತೋರಣಮೆಂಬಂತೆ ಮೆಱೆವ ನವರತ್ನದ ಕಿ
ರ್ಮ್ಮೀರರುಚಿ ಮೆಱೆಯೆ ಮೇಖಲೆ
ನಾರಿಯ ಸೆಳೆನಡುವಿನೊಳ್ ಮನಂಗೊಳಿಸಿರ್ಕುಂ ೨೫೮

ಸ್ತನಪುಳಿನದಲ್ಲಿ ಸೂಸಿದ
ತನುಲಾವಣ್ಯಪಗಾ ಪಯಃಕಣಗಣಮೆಂ
ಬಿನೆಗಂ ಕುಚದೊಳ್ ನೀಹಾ
ರನಿಜೋಜ್ವಳಹಾರಮೆಸೆಯೆ ಬಾಲಕಿಯೆಸೆದಳ್ ೨೫೯

ನಿಡುಗಣ್ಬೆಳಗಿನ ಭಾರಂ
ಕಡುಪಿಂ ಕಡೆಗೋಡಿವರಿಯೆ ಕಾಂಚೀಧಾಮಂ
ತಡೆಯಲ್ಕಿದಿರಡರ್ದುದೆನಲ್
ಮಡದಿಗೆ ಚೆಲ್ವಾಯ್ತು ತೋರಮುತ್ತಿನಹಾರಂ ೨೬೦

ಸ್ಮರಕರಿಣೀಹಸ್ತಾಗ್ರಂ
ಸುರುಚಿರ ಬಿಸಕಾಂಡವಳಯವೇಲ್ಲಿತವಾದಂ
ತಿರೆ ನಳಿತೋಳ್ಗಳ್ ಮುತ್ತಿನ
ಸರಿಗೆಯನಾಂತೆಸೆಯೆ ಕಾಂತೆ ಬಿಂಕಮನಾಂತಳ್ ೨೬೧

ಈ ಲಲಿತ ಬಾಹುಯುಗದ ಸು
ಖಾಲಿಂಗದಿಂ ಮೃದುತ್ವಮಂ ಪಡೆದಪೆನಾನೆಂ
ದಾಲಿಂಗಿಸಿರ್ಪ ಮಣಿಯೆನೆ
ಬಾಲೆಯ ನವರತ್ನದಂಕವಂಗದೊಳಿರ್ಕುಂ ೨೬೨

ಕರೆಯ ನಿಪುಣೇಕ್ಷ್ಣೆಗೆ ಮುದಂ
ಜೊರೆದಾನೆಯ ಕಯ್ಯ ನಳಿನಮಾವರಿಸಿದವೋಲ್
ಮರಕತ ಕಂಕಣಮೆಸೆದವು
ತಿರುವ್ರೊಯ್ಯುದ್ದರೆ ಕರ್ಪುವೆತ್ತ ತತ್ಕರಯುಗಗಳ್ ೨೬೩

ಇರುಳಿನಿತುಂ ತಿಮಿರಮುಂ ಸಂ
ಹರಿಸಂ ಸಾಹಸ್ರಕರಮನಾಂತಿರ್ಪ ಭಾ
ಸ್ಕರನೆಂದು ನಗುವವೋಲ್ ಭಾ
ಸುರ ಕಾಂತಿಯೊಳೆಸೆದವವಳ ಮಣಿಕಟಕಂಗಳ್ ೨೬೪

ಉಡಿಸಿದ ನನಗಣೆಯಂತಿರೆ
ತುಡಿಸಿದ ಮುದ್ರಿಕೆಯಿನೆಸೆವ ಬೆರಳಿಂ [೧]ಬೆರಳಿ
ಮ್ಮಡಿಯಿಸಿದ ಕೋಮಲೆ [೧]ಜಗಮುಂ
ಮೃಡರಿಪು ಬೆರಲೆತ್ತಿ ಗೆಲ್ವಿನಂ ಬಗೆಗೊಂಡಳ್ ೨೬೫

(ಜಗನ್ನಾಥವಿಜಯಂ ೧೦-೧೧೯)

ಅರುಣತಳದ್ಯುತಿತತಿಯೆಡೆ
[೨]ಬೆರಲ್ಗಳಿಂ[೨]ದುಣ್ಮುವಂದದಿಂ ಕೆಂಬೆರಲುಂ
ಗರದಿ[೩]ನೆಡೆ ಕಿರಣತತಿ[೩]ಮುಂ
ಜರಿ ತಳಿರೇಱಿಸಿದುದೆಯ್ದೆ ಕರಶಾಖೆಗಳೊಳ್ ೨೬೬

(ಚಂದ್ರಪ್ರಭಪುರಾಣಂ ೬-೬೧; ಸೂಕ್ತಿಸುಧಾರ್ಣವಂ ೬-೩೮)

ಅಲರಂಬಿಂಗಣಸಂ ಮಣಿ
ಕುಲದಿಂ ಸಮೆದಂಗಜಂ ಪದಂಗೊಳಿಸಿದವೋಲ್
ತಳತಳಿಸಿ ಪೊಳೆಯುತಿರ್ಕುಂ
ಲಲನೆಯ ಪೆಂಪೆಸೆವ ಬೆರಲ ಮಣಿಮುದ್ರಿಕೆಗಳ್ ೨೬೭

ಮಂಡಳಿಸೆ ನಿಂದುದೀಕೆಯ
ಪಾಂಡುರಲೋಲತ್ಕಟಾಕ್ಷಕಿರಣಚ್ಛವಿಗಳ್
ಗಂಡಸ್ಥಳದೊಳೆನಲ್ ಬಗೆ
ಗೊಂಡವು ಪೊಸಮುತ್ತಿನೋಲೆಗಳ್ ಶಶಿಮುಖಿಯಾ ೨೬೮

ಸಕಲಾಭರಣದ್ಯುತಿ ಕ
ರ್ಣಿಕೆಯಾದುದನಱಿಯಲಾಯ್ತು ವದನಸರೋಜಂ
ವಿಕಸಿತಮಾದುದಱಿಂದೆಂ
ಬ ಕೂರ್ಮೆಯಿಂ ಮುತ್ತಿನೋಲೆಯೊಪ್ಪಿದುವವಳಾ ೨೬೯

---

[೧]ಬೆರಳಂಮಿಡಿಯಿಸಿ ರುಕ್ಮಿಣಿ(ಅ) [೨]ದೆರಪುಗಳಿಂ(ಸೂ) [೩]ಪೊಗೆವರುಣ ರುಚಿ(ಸೂ)

ವದನಾಮೋದಕ್ಕೆಱಗುವ
ಮದಭೃಂಗದ ಕರ್ಣಪೂರಕ್ಕೆರವದ ನೇಱಲ್
ಪುದಿದತ್ತು ಕಪೋಲದೊಳೆನೆ
ಸುದತಿಗೆ ಮೃಗಮದದ ಪತ್ರಲೇಖೆಗಳೆಸೆಗುಂ ೨೬೦

ತಿಲಕಂ ತಮಾಲಪತ್ರಾ
ವಳಿ ಚಿತ್ರಕಮೆಸೆವ ಬನದೊಳಿರಲೊಲ್ಲದೆ ಕೇಳ್
ತಿಲಕಂ ತಮಾಲಪತ್ರಾ
ವಳಿ ಚಿತ್ರಕಮವಳ್ಗೆ ಮೆಱೆವುದಚ್ಚರಿಯಲ್ತೆ ೨೬೧

ಶಶಿಮೊಗದೊಳ್ ನಕ್ಷತ್ರಂ
ಮಿಸುಪುದು ಮರ್ಯಾದೆಯೆಂದು ಸಕಲಜನಂ ಭಾ
ವಿಸುತಿರೆ ಮುತ್ತಿನ ಬೆಳಗಿಂ ರಂ
ಜಿಸುಗುಂ ನಾಸಾಗ್ರದಲ್ಲಿ ಮೂಗುತಿಯವಳಾ ೨೬೨

ಬಗೆಗೊಳಿಸಿದುದಚ್ಚರಿಯೆನೆ
ಸೊಗಯಿಪ ತಾವರೆಯ ನಡುವೆ ನಳನಳಿಸುವ ಸಂ
ಪಗೆಯ ನನೆಯಲ್ಲಿ ಪೊಸಮ
ಲ್ಲಿಗೆಯ ಮುಗುಳ್ ಮೂಡಿದಂತೆ ಮೂಗುತಿಯವಳಾ ೨೬೩

ಫುಲ್ಲಶರ ತನಗೆ ಸಿಲ್ಕಿದ
ಕಲ್ಲೆದೆಯರನೆಸೆಯಲೆಂದು ಕಡೆಯಂಬಿನ ತುದಿ
ಯಲ್ಲಿ ಬಾಷ್ಪಗಳನೂಡಿದು
ದಲ್ಲಹುದೆನೆ ಕಣ್ಣ ಕಪ್ಪು ರಂಜಿಪುದವಳಾ ೨೬೪

ಬಿರಿದ ಸರೋರುಹಗಂಧಕೆ
ಚರಿಸುತ ಬಂದೆಱಗುತಿಪ್ಪ ಷಟ್ಪದಮೆಂಬೋ
ಲೆರಡುಂ ಪುರ್ಬಿನ ನಡು ಕ
ಸ್ತುರಿತಿಲಕಂ ಪೆಱೆನೊಸಲ್ಗೆ ರಂಜಿಪುದವಳಾ ೨೬೫

ಎಳೆವಿಸಿಲ ತಮದ ಮಱಿಗಳ್
ಕೆಳೆಗೊಂಡಿರ್ದಪುವು ಮುಗ್ಧ ಶಶಿಯುಸಮೀಪ
ಸ್ಥಳದೊಳೆನೆ ಚೆನ್ನಪೂಗಳು
ಮಳಕಂಗಳು ನಿಟಿಲತಟದೊಳೆಸೆದುವು ಸತಿಯಾ ೨೬೬

ಲೇಸೆನಿಸಿಯಾಲಿವರಲಂ
ಸೂಸುವ ನವಮೇಘದಂತೆ ಕುಸುಮಾವಳಿಯಿಂ
ಬಾಸಣಿಸಿ ಮೆಱೆವ ಸೋರ್ಮುಡಿ
ಭಾಸುರಮೆನಿಸಿರ್ದುದೆಯ್ದೆ ಕಮಳಾನನೆಯಾ ೨೭೮

ವಿಲಸಿತಮಪ್ಪ ಪೊಂದು ಪೊಳೆಪಂ ತಳೆದಿರ್ಪುದನಿಂದುಲೇಖೆಯಂ
[1]ಪೊಳೆಯಲೆ ವೇೞ್ಪುದೇ ಸಹಜಸುಂದರರೂಪೆಯನೀ ಮೃಣಾಳಕೋ
ಮಳೆಯನದೇನಲಂಕರಿಸವೇೞ್ಪುದೆ ಮಂಗಳವರ್ಧನಾರ್ಥಮೀ
ಲಲನೆ[2]ಯನಿಂದಲಂಕರಿಸುವರ್[2] ವಿವಿಧಾಭರಣಪ್ರತಾನದಿಂ ೨೭೯
(ಜಗನ್ನಾಥವಿಜಯಂ ೧೦-೧೦೨, ಸೂಕ್ತಿಸುಧಾರ್ಣವಂ ೬-೪೨)

ಸ್ಮಿತಮಧುರಂ ಮುಖಂ ವಿಮುಖವೃತ್ತಿಯನಾರ್ಗೆ ಕಟಿಲ್ಬದುತ್ಕುಚ
ದ್ವಿತಯಭರಾವಲಂಬಿಯೆರ್ದೆಯಾರೆರ್ದೆಗೀಯದೊ ಚೋದ್ಯಮಂ ಸ್ಮಿತಾ
ಯತ ನಯನಂಗಳಾರ ನಯನಂಗಳನಾಱಿಸವುನ್ಮದಾಲಸಂ
ಗತಿ ಗತಿಭಂಗಮಂ ಪಡೆಯದಾರ್ಗೆ ತದಂಗಜರಾಜ್ಯಲಕ್ಷ್ಮಿಯಾ ೨೮೦
(ಚಂದ್ರಪ್ರಭಪುರಾಣಂ ೧೧-೯೩)

ನೆಲೆಯುಂ ಗಾಡಿಯು[3]ಮಮರ್ದಿರೆ
ವಿಳಸಮಮರ್ದಂತು ಮುಡಿದ ಮುಡಿ ಮೆಱೆದುದು ಕೋ[3]
ಮಳೆಗೆ ಜಗಮೆಲ್ಲಮಂ ಸಲೆ
ಗೆಲೆವಂದಸಮೇಷು ಪೂಣ್ದು ಮುಡಿಗಿಕ್ಕುವಿನಂ ೨೮೧
(ಜಗನ್ನಾಥವಿಜಯಂ ೧೦-೧೨೭)

ಎನ್ನ ಮೊಗಸುಚಿಗೆ ಸರಿಯಿಡೆ
ನಿನ್ನೆಸಕಂ ಸಮನುಗಾಣದೆನುತಂ ಕಿನಿಸಿಂ
ಕನ್ನೆ ನಡೆನೋಟ್ಟಿ ತೆಱದಿಂ
ಕನ್ನಡಿಯುಂ ಕರದೊಳೆತ್ತಿ ನೋಡಿದವಳೊರ್ವಳ್ ೨೮೨

ಜಿತಚಂದ್ರಮಂಡಲಕ್ಕ
ಪ್ರತಿಮಕ್ಕೀಕೆಯ ಮುಖಕ್ಕೆ ಕಂಡೆವಿದೊಂದಂ
ಪ್ರತಿಮಾನಮನೆನೆ ವದನಪ್ರತಿ
ಕೃತಿ ಚೆಲ್ವಾಯ್ತು ಮುಕುರದೊಳ್ ಬಾಲಕಿಯಾ ೨೮೩
(ಜಗನ್ನಾಥವಿಜಯಂ ೧೦-೧೨೯)

---

[1]ಪೊಳೆಪಿಡ(ಸೂ) [2]ಗೆನುತ್ತಲಂಕರಿಸಿದರ್(ಸೂ) [3]ಕುಳವಡೆ ಲಲನೆ ಪೆಱಳ್ ದಿವ್ಯ ಮಾಲೆಯುಂ ಮುಡಿಯಿಸಿದಳ್ ಮಲೆವ(ಅ)

# ವಿವಾಹವರ್ಣನಂ

ನವರತ್ನಸ್ತಂಭಗಳಿಂ
ನವಚಾಮರ ಪಟ್ಟನಿಚಯ ಮೇಲ್ಕಟ್ಟುಗಳಿಂ
ನವಮೌಕ್ತಿಕ ಲಂಬಣದಿಂ
ವಿವಾಹಮಂಟಪದ ನಡುವೆ ಪಸೆ ರಂಜಿಸುಗುಂ ೨೮೪

ಜಂತದ ಪಾವೆಗಳ್ ತಳಿರ ತುಂತುರನೋಸರಿಸುತ್ತೆ ಕೈಗಳಿಂ
ದಂ ತರುಣೀಸಮೂಹದ ವಿಳಾಸರಸಾಬ್ಧಿಯೊಳಾಗಳೀಸಿ ಬ
ರ್ಪಂತಿರೆ ಪರ್ಬಿದಾಕೆಗೆಳ ಕಣ್ಬೆಳಗಂ ಬಗೆದೊತ್ತಿ ನೂಂಕಿ ಬ
ರ್ಪಂತಿರೆ ಬರ್ಪ ಭೂಮಿಪತಿ ಪೂಗೊಳದೊಳ್ ಬರುತಿರ್ಪ ಹಂಸನಂ ೨೮೫
(ಲೀಲಾವತಿ ೧೨-೧೪)

ಮುರಜದ ಮೊಱಗಿನ ಪಟಹದ
ಕರಡೆಯ ಬೊಂಬುಳಿಯ ಪಕ್ಕವಾದ್ಯಮುಮಂ ಕಂ
ಕರಿಯ ವಿಪಂಚಿಯ ಬಂಚದ
ಪರಿಕರಮುಮನಾಂತ ರೂಪುಗಳ್ ರಂಜಿಸುಗುಂ ೨೮೬
(ಲೀಲಾವತಿ ೧೧-೬೩)

ಮದನನ ರಾಜ್ಯಲಕ್ಷ್ಮಿಯೊದವಿಂತಿದು ಕಾಮನ ಪೆಂಡವಾಸಮಿಂ
ತಿದು ಕುಸುಮಾಸ್ತ್ರಚಕ್ರಿಯ ಜಗತ್ರಯಜೈತ್ರವಧೂನಿಕಾಯಮಿಂ
ತಿದು ಮಧುಮಿತ್ರತಾಪತಪದಿಂ ಪಡೆವಗ್ಗದ ಸಗ್ಗಮಿಂತಿದೆಂ
ಬುದನೆನಿಸಿತ್ತು ಸುತ್ತಿಱಿದು ಸಂದಣಿಗೊಳ್ವಬಲಾಕದಂಬಕಂ ೨೮೭
(ಲೀಲಾವತಿ ೧೨-೧೫)

ಜಲಕನೆ ಕೆಂಪು ಬಾಯ್ದೆಱೆಯಿನೊಕ್ಕವೊಲೊಪ್ಪಿದುವಲ್ಲಿಗಲ್ಲಿಗಾ
ದಲತೆಗೆಪಜ್ಜೆಗಳ್ ತಳಿರ ಚಂದನದೊದ್ದೆಗಳಾ ಮೃಣಾಳಕೋ
ಮಲೆಯರ ಕಣ್ಣ ಬೆಳ್ಪೆಳಗೆ ತೀವಿ ತುಱುಂಕಿದವೋಲ್ ವಿಳಾಸಮ
ಗ್ಗಲಿಸುವಿನಂ ಬೆಳರ್ತೆಸೆವುದಾ ಪಸುರ್ವಂದರ ಭೂಮಿಭಾಗದೊಳ್ ೨೮೮
(ಲೀಲಾವತಿ, ೧೨-೧೩)

ಎಳೆವಿಂ[1]ಚಂ[1] ಪೊಟ್ಟಿವೋಲೆಣ್ದೆಸೆಗಳನೆಳೆಯುಂ ನೈದಿಲಿಂ ತೀವುವಂತಾ
ಗಳೆ ಬಾನಂ ಮೀನ್ಗಳಿಂದಂ ಮುಸುಕುವ ತೆಱದಿಂ ಕಾಂತೆಯರ್ ನೋಟ್ಪಿದುಂ ಕ
ಣ್ಬೆಳಗಾಶಾದಂತಿದಂತದ್ಯುತಿ ಬಳಸಿದುದೆಂಬಂತೆ ದುಗ್ಧಾಬ್ಧಿಪೂರಂ
ಬಳೆದತ್ತೆಂಬಂತೆ ಮಂದಾಕಿನಿಯೆ ಕವಿದುದೆಂಬಂತೆ ಪರ್ವಿತ್ತಗುರ್ವಿಂ ೨೮೯

(ಲೀಲಾವತಿ ೧೨-೧೧)

ತಾಳ ಮದ್ದಳೆ ಮೃದಂಗಂ
ಡೋಳುಂ ತಂಬಟವು ಭೇರಿ ಮುರಜಂ ಬೊಂಬುಳಿ
ಕಾಳೆಯು ತಿತ್ತಿರಿ ಶಂಖಂ
ಪೇಳುವೊಡಂ ಬಹಳವಾದ್ಯಮುಣ್ಮಿದುವಾಗಳ್ ೨೯೦

ಧವಳಂ ಶೋಭನ ವಿಪ್ರರ
ವಿವಿಧಾಶೀರ್ವಚನ ಭಟ್ಟ ಕೈವಾರಿಗಳುಂ
ಭುವನಂ ಬಾಯ್ದೆಗೆದಂದದಿಂ
ವಿವಾಹಮಂಟಪದಿ ಭೋರ್ಗರೆದುದಾಯೆಡೆಯೊಳ್ ೨೯೧

ನನೆಯ ಸರಳ್ಗಳಂತೆ ನೆಱೆದಿಂಗಳ ತಣ್ಗದಿರಂತೆ ಕಂತುರಾ
ಜನ ಕರವಾಳ ಮೆಯ್ಪೊಳಪಿನಂತೆ ನವೋತ್ಪಲದಾಮದಂತೆ ಪೂ
ವಿನ ಮಱೆಯಂತೆ ತುಂಬಿಗಳ ಮಾಲೆ ತೆಱಂಬೊಳೆವಂತೆ ಲೋಲಲೋ
ಚನರುಚಿ ಸುತ್ತಿಮುತ್ತಿದುವಶೇಷನೃಪಾಲಸಭಾಂತರಾಳಮಂ ೨೯೨

(ಪಂಪರಾಮಾಯಣಂ ೫-೭೦, ಸೂಕ್ತಿಸುಧಾರ್ಣವಂ ೬-೬೭)

ನಲ್ಲರ ನಡುವುಪಚಾರಂ
ಸಲ್ಲಲಿತೇಕ್ಷಣದ ನಡುವೆ ಪಕ್ಷ್ಮಪುಟಂ ಸಂ
ಫುಲ್ಲಧರಮಧ್ಯದೊಳ್ ಮಿಗೆ
ಸೊಲ್ಲಿರ್ಪಂತಿರ್ದುದಲ್ಲಿ ತೆಱೆ[2]ವರ[2]ನಿದಿರೊಳ್ ೨೯೩

(ಗಿರಿಜಾಕಲ್ಯಾಣಂ ೧೦-೮೧)

ಪಾಸಿದ ದಣಿಂಬಮುಗುರ್ಗಳ
ಕೇಸಡಿಗಳ ಚರಣಭೂಷಣಂಗಳ ರುಚಿಗಳ್
ಬಾಸಣಿಸಿ ಚಿತ್ರಪಟಮಂ
ಪಾಸಿದವೊಲಿರೆ ವಧೂವರರ್ ನಡೆತಂದರ್ ೨೯೪

(ಅನಂತನಾಥಪುರಾಣಂ ೬-೫೪)

---

[1] ಚಂ(ಅ) [2] ಹ(ಅ)

ಉರದೊಳ್ ಹಾರಾಂಶು ಗಂಡಸ್ಥಳಿಯೊಳಮುಳಕರ್ಣಾವತಂಸಾಂಶು ಮತ್ತಂ
ಶಿರದೊಳ್ ರತ್ನಾವಳೀಶೇಖರಶಿಖರಸಮು[1]ಕ್ತಾಂ[1]ಶುಗಳ್[2] ನೃತ್ಯಮುಂ[2] ಬಿ
ತ್ತರಿಪನ್ನಂ ಸಿದ್ಧ ವಿದ್ಯಾಧರ ದಿವಿಜಕುಮಾರರ್ಕಳಂ ಜೆಲ್ವಿನಂ ಮಾಂ
ಕರಿಸುತ್ತುಂ ಬಂದನಾಸಾದಿತ ನಿರುಪಮ ಶೃಂಗಾರಸಾರಂ ಕುಮಾರಂ ೨೯೬

(ಚಂದ್ರಪ್ರಭಪುರಾಣಂ ೬-೭೦; ಸೂಕ್ತಿಸುಧಾರ್ಣವಂ ೬-೬೦)

ಕಯ್ಯೊಳ್ ಕರ್ಬಿನಚಾಪಮಿಲ್ಲದ[3]ಸಮುಂ[3] ಪುಷ್ಪಾಯುಧಂ ಬರ್ಪವೋಲ್
ಮೆಯ್ಯೊಳ್ ಲೋಚನಮೊಂದುಮಿಲ್ಲದಮರಂ ವಜ್ರಾಯುಧಂ ಬರ್ಪುವೋಲ್
ರಯ್ಯಂ ಬಂಬಳಿಬಾಡೆಯುಂ ವಿರಹದಿಂ ಕಾಂತಾಜನಸ್ವಾಂತದೊಳ್
ಪೊಯ್ಯುತ್ತುಂ ಪೊಸತೊಂದು ರಾಗರಸಮಂ ಬಂದಂ ಮನೋಜಾಯುಧಂ ೩೯೭

(ಲೀಲಾವತಿ ೧೨-೨೫)

ನಭಮುಂ ಸಂಜೆ ಮುಗಿಲ್ ಪಗಿಲ್ತ ತೆಱದಿಂ ತಳ್ಪೊಯ್ಯೆ ಭೂಷಾಮಣಿ
ಪ್ರಭೆ ದಿಕ್ಚಕ್ರಮನಚ್ಚಜೊನ್ನಮೆಳಸಿತ್ತೆಂಬನ್ನೆಗಂ ತೀವೆ ದೃ
ಕ್ಪ್ರಭೆ ಭೂಭಾಗಮನೆಯ್ದೆ ಬೆಳ್ಪಮರ್ದ ಪಾಂಗಿಂ ಪೆರ್ಚೆ ಪಾಡೋಲ್ಲಸ
ತ್ಪ್ರಭೆ ಬಂದಳ್ ಕುಡುತಂ ಶಶಿಪ್ರಭೆ ಜನಾಕ್ಷೀಂದೀವರಾನಂದಮಂ ೨೯೮

(ಚಂದ್ರಪ್ರಭಪುರಾಣಂ, ೬-೭೯, ಸೂಕ್ತಿಸುಧಾರ್ಣವಂ ೬-೫೮)

ರತಿಗಳ್ ಶೃಂಗಾರಮಂ ಶೋಭೆಗಳತಿಶಯಮಂ ಜಾತಿಗಳ್ ರಾಗಮಂ ದೇ
ವತೆಗಳ್ ಕಾಮ್ಯಾರ್ಥಮಂ ನೀತಿಗಳುದಯಮನಾಕ್ಷೇಪದಿಂ ತರ್ಪವೋಲು
ದ್ಧತೆಯರ್ ತತ್ಕಾಂತೆಯರ್ಕಳ್ ತರೆ ಮಧುಸಹಿತಂ ಕಂತು ಬರ್ಪಂತೆ ಬಂದಂ
ಚತುರಾಮಾತ್ಯಪ್ರಯುಕ್ತಂ ಸರಸಕೃತಿಕಳಾನರ್ತಕೀನಾಟ್ಯರಂಗಂ ೨೯೯

(ಲೀಲಾವತಿ ೧೧-೧೦೨)

ಕುಡುಪುರ್ವಿಂ ಕರ್ವುವಿಲ್ಲಂ ಪರಪುವ ಕಡೆಗಣ್ಣಿಂ ಮನೋಜಾಸ್ತ್ರಮಂ ಸಾ
ಲಿಡುವುದ್ಯನ್ಮೇಖಲಾಕೂಜತದಿನತನುಕೋದಂಡಟಂಕಾರಮಂ ಕ
ನ್ನಡಿಪಂಘ್ರಿನ್ಯಾಸದಿಂ ತಾವರೆಗೆದಱುವ ಮಂದಸ್ಮಿತೋದ್ಯೋತದಿಂದಿಂ
ಗಡಲಂ ಬೇಱಕೊಂದನುತ್ಪಾದಿಸುವ ತೆಱದಿನಾನಂದದಿಂ ದೇವಿ ಬಂದಳ್ ೩೦೦

(ಜಗನ್ನಾಥವಿಜಯಂ ೧೩-೩ ಸೂಕ್ತಿಸುಧಾರ್ಣವಂ ೭-೫೯)

---

[1]ತ್ಥಾಂ(ಅ) [2]ಮೊತ್ತಮುಂ(ಅ) [3]ರಸಂ(ಅ)

ಶ್ರೀ ಶುಭ್ರಾಂಭೋಜದೊಳ್ ಭಾರತಿ ಕವಿಧವಳಾಸ್ಯೇಂದುವೊಳ್ ಗಂಗೆ ಹರ್ಮ್ಯಾ
ದ್ರೀಶಾಗ್ರಗ್ರಾವದೊಳ್ ಭೂವಧು ಫಣಿಪಫಣಾಪೀಠದೊಳ್ ಪೊರ್ದಿ ನಿಲ್ವಂ
ತಾ ಶೋಭಾಭೂಷೆ ವಿದ್ಯಾಧರೆ ಮಧುರುಮೃದುಚ್ಛಾಯೆ ಸಾಮೋದಶೋಭಾ
ವೈಶದ್ಯೋತ್ತುಂಗದೊಳ್ ತಂದಣಿಪಿದ ಪಸೆಯೊಳ್ ದೇವಿ ಕುಳ್ಳಿರ್ದಳಾಗಳ್ ೩೦೧

(ಲೀಲಾವತಿ ೧೧-೫೯)

ಪೊಂಬಟ್ಟೆಯ ಬೋರೆಯದೊಳ್
ತುಂಬಿದ ಬಿಡುಮುತ್ತಿನಕ್ಕಿಯುಂ ಮೆಟ್ಟಿರ್ದಂ
ದೇಂ ಬಗೆವುಗಿಸಿದುದೋ ಹೇ
ಮಾಂಬುಜದ ಮರಾಳಮಿಥುನಮುಂ ತನ್ಮಿಥುನಂ ೩೦೨

(ಅನಂತನಾಥಪುರಾಣಂ ೬-೫೫; ಸೂಕ್ತಿ ೬-೬೩)

ಕಿವಿವೇಟಮನಿಱುಸುತ್ತಿರೆ
ನವವರನಂ ನೋಡುವಪ್ಪುವುತ್ಕಳಿಕೆಯಿನೇಂ
ಯುವತಿಯ ಕಣ್ಣುಂ ಮನಮುಂ
ಜವನಿಕೆಯುಂ ಕನ್ನಮಿಕ್ಕಲಟಕಟಿಸುದುದೋ ೩೦೩

(ಅನಂತನಾಥಪುರಾಣಂ ೬-೫೬, ಸೂಕ್ತಿ ೬-೬೪)

ಕೋಮಳ[೧]ಮಾದ ಪೂಗ[೧]ಫಲದಿಂ ಬಲಗೈ ಕಳಮಾಕ್ಷ[೨]ಪತ್ರ[೨]ಪೂ
ರ್ಣಾಮಳಶಂಖದಿಂದಮೆಡಗೈಯೆಸೆಯುತ್ತಿರೆ ಬಂದನುತ್ಕಟ
ಪ್ರೇಮನುದಾತ್ತವೇದಮತಿ ಕೃಷ್ಣಸಭಾವಳಿಯಕ್ಕೆ ವಿಶ್ವವಿ
ದ್ಯಾಮಹಿತಂ ದ್ವಿಜೌಘಸಹಿತಂ [೩]ಜಯಪೂರರತಂ[೩] ಪುರೋಹಿತಂ ೩೦೪

(ಜಗನ್ನಾಥವಿಜಯಂ, ೧೦-೧೩೦)

ಶಂಕುಸಲಾಕೆಯುಂ ಗೞಿಗೆವಟ್ಟಲುಮೊಪ್ಪಿರೆ ವೇದನಾದದೊಳ್
ಸಂಕರಮಾಗಿ ಪಾಠಕಪಟುಸ್ವನಮುಂಗಳಗೀತತೂರ್ಯಘೋ
ಷಂ ಕಡಲೂರ್ಮಿಯಂತುಲಿಯೆ ನರ್ತಿಸೆ ನಾರಿಯರಾಯ್ತು ಸಾರ್ಕೆ ಲ
ಗ್ನಂ ಕರೆಯಾ ವಧೂವರರನೆಂದುಸಿರ್ದಂ ಹಿತದೊಳ್ ಪುರೋಹಿತಂ ೩೦೫

(ಸೂಕ್ತಿಸುಧಾರ್ಣವಂ ೬-೫೭)

---

[೧] ಮಾತುಳಂಗ(ಅ) [೨] ತಪ್ಪ(ಅ) [೩] ಯುಸುಮಂಶಹಿತಂ(ಅ)

ಕಳಕಳಮಂ ನಿವಾರಿಸುತಲಾಯತಮೋ ಯೆನಲಾಯತಂ ಲಸ
ದ್ಗಳ ಬಳಮಂ ವಿಸರ್ಜಿಸುತಮಾಯತಮೋಯೆನಲಾಯತಂ ಮನಂ
ಗೊಳಿಪಮುಹೂರ್ತದೊಳಗಾಯತಮೋಯೆನಲಾಯತಂ ನಿರಾ
ಕುಳಿತಮನಂ ಪುರೋಹಿತರೆಯಾಯತಮೋಯೆನೆ ತಪ್ಪದಾಯತಂ ೩೦೬

(ಗಿರಿಜಾಕಲ್ಯಾಣಂ ೧೦-೮೬)

ಬಳ[1]ವಿಗೆಯಪ್ಪ[1] ವೇದರುತಿಗೇಯರವಂ ಪಟಹಸ್ವನಂ ಪುರೀ
ಕಳಕಳದಿಂ ದಳಂಬಡೆದು ವಿಶ್ವಜಗಜ್ಜನಕೀರ್ತನಾರವಂ
ಗಳಗಿನಿಸೇಟಿಕ್ಕಿವೆತ್ತು ದಿಗಿಭಪ್ರಜಭೃಂಹಿತ ಭೂರಿನಾದದಿಂ
ದಳವಿಯನಾಂತು ಘೂರ್ಣಿಪಿನಮಾ ಗೃಹಮಂ ಪುಗುತಂದ[2]ನುರ್ವಿಪಂ[2] ೩೦೭

(ಜಗನ್ನಾಥವಿಜಯಂ ೧೦-೧೩೧)

ತೊಲಗೆ ದುಕೂಲಕಾಂಡಪಟಮುತ್ತಮಲಗ್ನದೊಳೊರ್ವರೊರ್ವರಂ
ನಲಿದೊಲವಿಂದೆ ದಂಪತಿಗಳೀಕ್ಷಿಸೆ ನೋಟದ ಬಳ್ಳಿವಳ್ಳಿ ನೆ
ಯ್ದಿಲ ಮಟಿಕೆಯೊಲ್ ಸುಧಾರಸದ ಸೋನೆಯೊಲಂಗಜಬಾಣವೃಷ್ಟಿಯೊಲ್
ಸಲೆ ನಿಲೆ ಕೊರ್ವಿ ಪರ್ವಿದುದು ಕೂಡೆ ವಿವಾಹಗೃಹಾಂತರಾಳದೊಳ್ ೩೦೮

(ಜಗನ್ನಾಥವಿಜಯಂ ೧೦-೧೩೨, ಸೂಕ್ತಿಸುಧಾರ್ಣವಂ ೬-೬೬)

ಸ್ತನಕಲಶಂಗಳಿಂ ಪದೆದ ಪಲ್ಲವದಿಂ ಪುಳಕಾಕ್ಷತಂಗಳಿಂ
ವಿನುತಕಪೋಳದರ್ಪಣದಿನೂರ್ಜಿತನೂಪುರಶಬ್ದವಾದ್ಯದಿಂ
ಮನದಸುರಾಗದಿಂ ವದನದೀಧಿತಿಮಂಗಳರತ್ನದೀಪ್ತಿಯಿಂ
ವನಿತೆ ವಿಳಾಸವೊಪ್ಪೆ ಯುವರಾಜನನಂದಿರ್ಗೊಂಡಳಟ್ರ್ತಿಯಿಂ ೩೦೯

ಲೋಲಕಟಾಕ್ಷಮಾಲೆ ವನಮಾಲೆಗೆ ಚಂದ್ರಿಕೆವೀಱೆ ಕಯ್ಯ ಪೂ
ಮಾಲೆಗೆ ಭೃಂಗಮಾಲೆ ಮೋಱೆದೆಯ್ದೆ ಶಿರೀಷದಪುಷ್ಪಮಾಲೆಯಂ
ಸೋಲಿಸುತೇಟಿಸುತ್ತಿರೆ ಭುಜಂ ನಖಮಾಲೆ ಮಯೂಖಮಾಲೆಯಂ
ಸಾಲಿಡೆ ಬಂದು ಬಾಲೆ ವನಮಾಲಿಗೆ ಮಾಲೆಯನೊಲ್ದು ಸೂಡಿದಳ್ ೩೧೦

(ಜಗನ್ನಾಥವಿಜಯಂ ೧೦-೮೬, ಸೂಕ್ತಿ ೬-೭೩)

---

[1] ಪದಪಾಠ(ಅ) [2] ನಚ್ಯುತಂ(ಅ)

ಸುದತಿಯರನುನಯದಿಂದಂ
ಪ್ರದಕ್ಷಿಣಂ ಬಂದು ದಕ್ಷಿಣಾವರ್ತಶಿಖಾ
ಸ್ಪದನಂ ಹೋಮಾನಲನಂ
ಮದುವಕ್ಕಳ್ ಮಿಸುಪ ಲಾಜೆಯಂ ಪೂಜಿಸಿದರ್ ೩೧೧

ಪರಿಕರಿಸಿ ಸುರಿವ ಪಟವಾ
ಸರಜ ಸುರಿದಮಳಮೌಕ್ತಿಕಾಕ್ಷತನಿಕರಂ
ಕರಮೆಸೆದತ್ತು ಬಿಸಿಲ್ ಮಱ
ಸುರಿವಂತೆವೊಲಾ ವಿವಾಹಸಮನಂತರದೊಳ್ ೩೧೨

(ಜಗನ್ನಾಥವಿಜಯಂ ೧೦-೧೩೪)

ಲಲಿತಾವಯವದ ಚೆಲ್ವಂ
ತೊಳಗುವ ಲಾವಣ್ಯರಸದಿನಬಲಾವಳಿ ತ
ನ್ನಿಳಯಮಣಿಪುತ್ರಿಕಾಸಂ
ಕುಳದೊಳ್ ಸಲೆ ಮೆಱೆಯುತಿರ್ದರಾ ದಂಪತಿಗಳ್ ೩೧೩

(ಜಗನ್ನಾಥವಿಜಯಂ ೧೦-೧೩೫)

ಶೀತಕರೋದಯದೊಳಂಬುಧಿ ಘೂರ್ಣಿಸುವಂದದಿಂ ಜಗತ್
ಖ್ಯಾತವಿವಾಹದುತ್ಸವದೆ ಘೂರ್ಣಿಸುತಿರ್ಪ ರಸಪ್ರಸಂಗ ಸಂ
ಗೀತನಿನಾದದಿಂ ದೆಸೆಯೊಳುಣ್ಮುವ ಮಾರ್ದನಿಗಳ್ ದಿಶಾಧಿಪ
ವ್ರಾತಮೆ ರಾಗದಿಂ ಪರಸುವಂತೆವೊಲೊಪ್ಪಿದುದಾ ನೃಪಾಲನಾ ೩೧೪

(ಜಗನ್ನಾಥವಿಜಯಂ ೧೦-೧೩೬)

ಮುಸುಕಿದುದು ದುಂದುಭಿಧ್ವನಿ
ದೆಸೆಯಂ ಮಂಗಳದ ಗೀತ ತುಂಬಿದುದಂದಾ
ಗಸಮಂ ಶಂಖಧ್ವನಿ ಪೂ
ರಿಸಿದುದು ತಳ್ಪೊಯ್ದು ರೋದಿಸೀ ಮಂಡಲಮಂ ೩೧೫

(ಚಂದ್ರಪ್ರಭಪುರಾಣಂ ೬-೭೨; ಸೂಕ್ತಿ ೬-೭೪)

ಪ್ರಿಯತರಲವಂಗಲತಿಕಾ
ದ್ವಯಕ್ಕಮೇಕೈಕ[೧]ಲತಿಕ[೧]ಶಾಖಾಯೋಗಂ
ನಯದೆ ಸಮನಿಪ[೨]ವೊಲಂತಾ
ಪ್ರಿಯಂಗಮಾ ಪ್ರಿಯೆಗಮಾಯ್ತು ಪಾಣಿಗ್ರಹಣಂ ೩೧೬

(ಚಂದ್ರಪ್ರಭಪುರಾಣಂ ೬-೭೩; ಸೂಕ್ತಿಸುಧಾರ್ಣವಂ ೬-೭೫)

---

[೧]ಲಲಿತ(ಸೂ, ಅ) [೨]ವೋಲಾ(ಅ)

ನೆಱೆದತ್ತೆತ್ತಾನುಮೀ ದಂಪತಿಯ ಬಯಕೆ ಸಂಪೂರ್ಣಮಾಯ್ತುತ್ಸವಂ ಕಣ್
ತೆಱೆದಂತಾಯ್ತೆನ್ನ ಸಾಮ್ರಾಜ್ಯದ ಫಲಮೆನುತಂ ರಾಗಮಂ ಬೀಱಲಾದ
ಟ್ಕಿಱಿ ಪೆಂಪಿಂ[೧] ಬೀಱುತಾ[೧]ಗಳ್ ಕನಕಕಲಶಮಂ ತಾನೆ [೨]ತಂ[೨]ದೆತ್ತಿ ಕೈನೀ
ರೆಱೆದಂ ಶ್ರೀವಜ್ರದಂತಕ್ಷಿತಿಪತಿ ಸತತೋತ್ಸಾಹಸಂದೋಹದಿಂದಂ ೩೧೭
(ಆದಿಪುರಾಣಂ ೪-೪೮; ಸೂಕ್ತಿಸುಧಾರ್ಣವಂ ೬-೬೯)

ಕುಲವೃದ್ಧರ್ ನಲಿದಾಡೆ ಬಂಧುನಿವಹಂ ಕೊಂಡಾಡೆ ಸಾಮಂತಮಂ
ಡಳಿ ಹಾರೈಸೆ ನಯಂ ಪೊದಟ್ದಿ ಜಸಮುಂ ತಕ್ಕೈಸೆ ವಾದಿತ್ರಕಾ
ಹಳಗೇಯಂ [೩]ಜವ[೩]ಮುಣ್ಮೆ ವೇದನಿನದಂ ಕೈಗಣ್ಮೆ ವೈವಾಹಮಂ
ಗಳಮಂ ಮಾಡಿದನಟ್ಕಿಱಿಂದವರ್ಗೆ ಸತ್ರಾಜಿನ್ಮಹೀಪಾಲಕಂ ೩೧೮
(ಜಗನ್ನಾಥವಿಜಯಂ ೧೧-೫೩)

ಓರಂತೆ ಮೆಚ್ಚಿದಂ ಕೃತಿ
ಸಾರೋದ್ವಹವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೩೧೯

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ ಪ್ರಮಾಣಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್ ವಿವಾಹವರ್ಣನಂ ಷಷ್ಠಮಾಶ್ವಾಸಂ

---

[೧]ತೋಱಲಾ(ಸೂ,ಅ) [೨]ಬಂ(ಸೂ.ಅ) [೩]ಸ್ವನ(ಅ)

# ಕುಮಾರೋದಯ ವರ್ಣನಂ

ತನುಭವಲಾಭ ದೌಹದ ನಿಮಿತ್ತದ ಸ[೧]ಂಗ[೧]ತಿ ತಕ್ಕ ನೋಂಪಿ ಮುಂ
ಗನಸು ಬಯಕ್ಕೆ[೨]ಯುಟ್ಟಿದ[೨] ದೃಗುತ್ಸವಕಾರಣಗರ್ಭಚಿಹ್ನಮೊ
ಳ್ಪಿನ ದಿವಸಂ ಶುಭೋದಯು[೩]ವಿಳಾಸ[೩] ಮನೋಹರ ಭೂತಲಕ್ಷಣಂ
ಜನನುತ ಜಾತಕರ್ಮಮಿನಿತುಂ ಸುತಶೋಭನ ವರ್ಣನಸ್ಥಳಂ ೧

(ಸೂಕ್ತಿಸುಧಾರ್ಣವಂ, ೭–೧)

ಪಡೆದರುದಗ್ರ ಕುಲವುಂ [೪]ಕುಲವುಂ ಪಡೆದಂತೆ[೪] ಮೂರ್ತಿಯುಂ
ಪಡೆದವರೇಂ ಸಮುಂತು [೫]ಪಡೆಗುಂ ಪೊಸಮಾನ[೫]ಮೆನಿಪ್ಪ ನಲ್ಮೆಯುಂ
ಪಡೆದ ನಿಳೇಶ[೬]ನುಂ ವಧುವುಮುಂ[೬] ಪೆಱತಾವುದು ಮತ್ತೆ ಮಕ್ಕಳಂ
ಪಡೆದೊಡೆ ಸಾಲ್ಗುಮೆಂದವರೊಳಟ್ಟಿಱನಾಳ್ದುದು ಬಂಧುಸಂಕುಲಂ ೨

(ಸೂಕ್ತಿಸುಧಾರ್ಣವಂ, ೭–೨)

ಭವದೊಳ್ ಸಂಸಾರಸೌಖ್ಯಕ್ಕಿದುವೆ ಮೊದಲೆನಿಪ್ಪಾತ್ಮಜಾಲಿಂಗನಂ ಪೊ
ರ್ದುವದತ್ತೇಂದೆಂದನೆಂದುಂ ತವದ ತರುಣಿಮುಂ ಬೇಟ್ಪುದುಂ ಮಾಟ್ಪ ಕೃತ್ಯಾ
ದಿ ವಿತಾನಂ ನೀತ ವಿಶ್ವಾಮಯತೆ ಯುಚಿತ ಪಲ್ಯೋಪಮುಂ ಜೀವನಂ ವ್ಯೋ
ಮವಿಭಾಗವ್ಯಾಪ್ತಿಯುಪ್ಪುನ್ನತತನುವಿನುತುಂ ನಿಶ್ಚಯಂ ವ್ಯರ್ಥಮಲ್ತೇ ೩

ಬೇಟಕ್ಕೆ ತವದ ಕೂಟಂ
ಕೂಟಕ್ಕೆ ತನೂಜರಾ ತನೂಜರೊಳಂ ಮು
ದ್ದಾಟಂ ಫಲಮದೆ ತನ್ಮೊಳ್
ನಾಟದು ಗಡ ಪೆಱವು ಸುಖಲವಂಗಳೊಳೇನೋ ೪

(ಚಂದ್ರಪ್ರಭಪುರಾಣಂ, ೩–೪೨)

ಸುತರಿಲ್ಲದ ಸಿರಿ ತುಹಿನೋ
ದ್ಗತಿಯಿಲ್ಲದ ವಾರಿ ಬೇಟಮಿಲ್ಲದ ಕೂಟಂ
ವ್ರತಮಿಲ್ಲದಱಿವು ಮೃದುಪದ
ಗತಿಯಿಲ್ಲದ [೭]ಲಾಸ್ಯಲೀಲೆಯೇಂ[೭] ರಂಜಿಸುಗುಮೇ ೫

(ಚಂದ್ರಪ್ರಭಪುರಾಣಂ, ೩–೪೩)

---

[೧]ತ(ಸ) [೨]ಲಟ್ಟಿದ(ನ) ಗೆಂಟುಗೆ(ಸೂ) [೩]ಮಿಳಾದಿ(ಸೂ) [೪]ಪಡೆದಂತಿರೆ ರೂಪು(ಸೂ) [೫]ಪಡೆದಂತು ಸಮಾನ(ಸೂ) [೬]ನಿಂ ಪಡೆಪುದಿಂ(ಸೂ) [೭]ಸೌಖ್ಯಮೇಂ(ಸ) ಲಾಸ್ಯಮಿಂತಿವೇಂ(ಅ)

ಕಳಹಂಸಂ ಸುಳಿಯದ ಪೂ
ಗೊಳನಮೃತಮರೀಚಿಯಿಲ್ಲದಂಬರಚಕ್ರಂ
ಕಳಭಂ ಸಂಚರಿಸದ ವನ
ವಳೆಯುಂ ಸುತರಾಡದಂಗಳಂ ರಂಜಿಕುಮೇ ೬

(ಜಗನ್ನಾಥವಿಜಯಂ, ೨-೬೬)

ಕೃಪೆಯನಗಲ್ದ ಭೂಪತಿಯ ಪಟ್ಟಣದಿಂ ವನವಾಸ ಲೇಸು ಮರಣಂ ವೆಗ್ಗಳಂ
ಕಪಟೆಯ ಸಂಗದಿಂ ಪುಲಿಯ ಸಂಗಮತೀವ ಸುಖಂ ದರಿದ್ರದಿಂ
ಕ್ಷಪಿಪುದಱಿಂದ ಲೇಸು ಮರಣಂ ಸುತರಿಲ್ಲದ ಬಾೞ್ಕೆಯಿಂ ಮಹಾ
ತಪದೊಳನಾರತಂ ತಪವನಾಂಪುದು [೧]ಪ[೧]ಥ್ಯಮಿದಲ್ಲವೆ ಲೋಕದೊಳ್ ೭

ಧನಧಾನ್ಯಂ ಬಂಧುಮಿತ್ರರ್
ವನಿತಾತತಿ ರಾಜ್ಯಮೆಂಬುದೇವುದೊ ಮುದ್ದಿಂ
ಬಿನದವನೊಡರ್ಚಿಯಾಡುವ
ತನಯಂ ಸಂಸಾರಸುಖದ ಸೀಮೆಯದಲ್ತೇ ೮

ಕನಸಿನ ಸಿರಿ ಕಾಮುರ್ಗಿಲೊ
ಡ್ಡಿನ ಚಿತ್ರಂ ಸತಿಯರೊಲ್ಮೆ ಮಿಂಚಿನಥಾಳಂ
ಜನಪತಿಯ ಕೂರ್ಮೆಯೆನಲಾ
ತನೊಳಾಯಾತ್ಮಜನ ಸೌಖ್ಯಮಿನ್ನೇವೊಗೞ್ವಂ ೯

ಸುತರುಳ್ಳೊಡೆ ಸಂಸಾರ
ಸ್ಥಿತಿ ಸುಖಮುವರಿಲ್ಲದಂದು ಸಂಸಾರಿಗೆ ದು
ರ್ಗತಿದಪ್ಪದಪ್ಪುದದಱಿಂ
ಯತಿಮಾರ್ಗಂ ಸೌಖ್ಯಮಲ್ತೆ ಭಾವಿಪೊಡಿಳೆಯೊಳ್ ೧೦

ಅಪ್ಪೆಪ್ಪೆನುತ್ತ ಪರಿತಂ
ದಪ್ಪುವ ಜೈಮುಂಡೆನುತ್ತೆ ನೊಸಲ್ಗೆಳಸುವ ಕೈ
ಚಪ್ಪಣೆಗುಟ್ಟಲ್ ಕುಣಿಕುಣಿ
ದೊಪ್ಪುವ ಬಾಲಕನ ಪಡೆವುದಂತದು ಭಾಗ್ಯಂ ೧೧

---

[೧] ಸ(ಸ)

ಉಡೆಘಂಟೆ ಮುರುಹು ಮಾಗಾಯ್
ಸೊಡರ್ವಕ್ಕಿನ ಬೊಟ್ಟು ವ್ಯಾಘ್ರನಖ ಜೆಡೆದುಱುಗಲ್
ಸಡಗರದ ಗೆಜ್ಜೆಯಿಂದುಗೆ
ದೊಡವಿನ ಬಾಲಕನ ಪಡೆವನೇನು ಕೃತಾರ್ಥಂ ೧೨

ಚುಂಬಿಸಿ ಲೋಳವಾಯ್ದೆಱೆಯನೀಕ್ಷಿಸಿ ಮಕ್ಕಳ ಮುದ್ದುಗೆಯ್ತ್ತಡೊ
ಳ್ಪಿಂ ಬಿಡದಪ್ಪಿ ಕೋಮಳತರಾಂಗಮನಾಲಿಸಿ ನು[1]ಣ್ಗೊರಲ್[1] ಪೊದ
ಳ್ದಿಂಬಿನ ಮಾತನಕ್ಕಱೊಳೆ ವಾಸಿಸಿ ನೆತ್ತಿಯನಿಂತು ಸೌಖ್ಯಮಂ
ತುಂಬಿ ನಿಜಾಖಿಳೇಂದ್ರಿಯದೊಳಂ ತಣಿವೆಯ್ದುವರೇಂ ಕೃತಾರ್ಥರೋ ೧೩

(ಚಂದ್ರಪ್ರಭಪುರಾಣಂ, ೩-೪೪)

ಮೊಗಮಂ ನೋಡುವ ಲಲ್ಲೆಗೈವ ಮೊಲೆಯುಂಬಬಬ್ಬ ಜೋಯೆಂಬ ಕೆ
ಮ್ಮಗೆ ಕಾಲ್ಪತ್ತುವ ದೂರದಿಂ[2]ದ ಪರಿತಂದಪ್ಪು[2]ಪ್ಪೆನುತ್ತಪ್ಪುವೊ
ಯ್ಯಗೆ ಜೆಯ್ಯಾಡುವ ಮೇಲುದಂ ಮುಸುಕಿಡುತ್ತೋಯೆಂಬ ದಾಯೆಂಬ ಮು
ದ್ದುಗಳಂ [3]ಬೀಱುವ ಕಂದ[3]ನೊಳ್ ನಲಿವ ಪೆಣ್ಣೇಂ ನೋಂಪಿಯಂ ನೋಂತಳೋ ೧೪

(ಜಗನ್ನಾಥವಿಜಯಂ ೨-೬೭: ಸೂಕ್ತಿಸುಧಾರ್ಣವಂ ೨-೬೭)

ಅನಶ ಭೂಮಿಪಾಲಕ ಕುಲಂಗೆ ಹಿಮಾಂಶುಕುಲಂಗೆ ಕೀರ್ತಿಸಂ
ತಾನಕುಲಂಗೆ ಮೈಮೆಯ ಕುಲಾಂಗನೆಯಪ್ಪಿನಿತರ್ಕೆ ನೋಂತೆನಾಂ
ನೋನೆನೆ ನೋಡ ಕಂಸನ ವಿಜೃಂಭಣಮಂ ಜಯಿಸಲ್ ಸಮರ್ಥನಂ
ಭೂನುತನಂ ಯಶೋವಿದಿತನಂ ಸುತನಂ ಪಡೆವೊಂದು ನೋಂಪಿಯಂ ೧೫

(ಜಗನ್ನಾಥವಿಜಯಂ ೨-೬೮)

ಮಱೆಯದೆ ಬೆಚ್ಚನೀರೆಱೆದು ತೊಟ್ಟಿಲೊಳಿಟ್ಟು[4] ಬಸಿರ್ಗೆ ಚೇಲದೊ
ಳ್ಸೆಱಗನೆ ತಂದು ಸೂನುಗೊಲವಿಂ ಸೊಡರ್ವಕ್ಕಿನ ಬೊಟ್ಟನಿಟ್ಟು ತೂ
ಪಿಱಿದು ಪಲರ್ಮೆಯಿಂ ಪರಸಿ [5]ಪಾಡುವ ದಾದಿಗೆ [5]ನಿಚ್ಚನಿಚ್ಚಮು
ಬ್ಬಿಱಿನೊಳೆ ಮೆಚ್ಚನಿತ್ತು ತನಿವೆರ್ಚುವ ಸೈಪಿನಗೆಂದು ಸಾರ್ಗುಮೋ ೧೬

(ಚಂದ್ರಪ್ರಭಪುರಾಣಂ, ೩-೪೫)

---

[1]ಣ್ಗೊದಳ್(ಅ) [2]ಪರಿದು ಬಂ(ಸೂ) [3]ತೋಱುವ ಚಿಣ್ಣ(ಸೂ) [4]ಸೋಂಗಿಲೊಳಿಟ್ಟು ರೆ (ಅ) [5]ಬಱಿಕ್ಕ ಚೀನದೊರ್ಚೆ(ಅ)

ಅರಿಸಿನದಂಜೆಯಂ ಪೊದಿಸಿ ಪೊಕ್ಕುೞಿನೆಣ್ಣೆಯ ಸೋಗಿಲೊಳ್ ಮರ
ಲ್ದಿರಿಸಿ ಲಲಾಟದೊಳ್ ತಿಲಕಮಂ ಸೊಡರ್ವಕ್ಕಿನೊಳಿಟ್ಟು ಮುದ್ದಿಸೀ
ವರ[1]ದುರಮು[1]ಣ್ಮೆ ಕಣ್ದೆಱೆಯದರ್ಭಕನಂ ನಡೆನೋಡಿ[2]ಯೆತ್ತಿ[2] ಪಾಲ್
ದೊರೆದ ಕುಚಂಗಳಂ ಬಿಡದೆ ಸೂಸುವ ಸ್ನೈಪೆನಗೆಂದು ಸಾರ್ಗುರ್ಮೋ ೧೭
(ಮಲ್ಲಿನಾಥಪುರಾಣಂ, ೩-೧೧೩)

ಪಸಿದೞುತಿರ್ಪ ಬಾಲಕನ ನಾದಮನಾಲಿಸಿ ಗೇಯಕೃತ್ಯಮಂ
ಬಿಸುಟತಿವೇಗದಿಂ ಪರಿದು ಯತ್ನದೆ ಸೋಗಿಲೊಳಿಟ್ಟು ಕೂಡೆ ಚಿ
ಮ್ಮಿಸಿ ಮೊಲೆವಾಲ್ಗಳಂ ದೆಸೆಗೆ ನೋ[4]ಡುತ ವಕ್ತ್ರಮನೇಕ ಚಿತ್ರದಿಂ[4]
ಮುಸುಕದೆ ಸಾರ್ಚಿ ಸಾರ್ಚಿ ಮೊಲೆಯೂಡುವ ಸ್ನೈಪೆನಗೆಂದು[5]ಸಾವುರ್ದೊ[5] ೧೮
(ಸೂಕ್ತಿಸುಧಾರ್ಣವಂ ೭-೬)

ಮುದಮುರ್ವೀಶಂಗೆ ಹರ್ಷಂ ಸಕಲಪರಿಜನಕ್ಕುತ್ಸವಂ ಬಂಧುಗಳ್ಗ
ಭ್ಯುದಯಂ ವಂಶಕ್ಕೆ ಚಿಂತಾಭರಮಖಿಳಸಪತ್ನೀಜನಕ್ಕುಮ್ಮಳಂ ದು
ರ್ಮದ ವೀರಾರಾತಿವರ್ಗಕ್ಕಭಿಲಷಿತಫಲಂ ವಿಶ್ವಧಾತ್ರೀಜನಕ್ಕಾ
ದುದೆನಲ್ ಸತ್ಪುತ್ರನಂ ನಾಂ ಪಡೆಯದುದು ವೃಥಾಯಾಸ ಮೀ[6]ಶಾ[6]ವಿಳಾಸಂ ೧೯
(ಮಲ್ಲಿನಾಥಪುರಾಣಂ ೩-೧೦೮; ಸೂಕ್ತಿಸುಧಾರ್ಣವಂ ೭-೧೦)

ಎಳವೆಱೆ ಬೆಳೆಯದ ಗಗನ
ಸ್ಥಳ ಸಸಿ ಬೆಳೆಯದ ಧರಿತ್ರಿ ಮೌಕ್ತಿಕರತ್ನಂ
ಬೆಳೆಯದ ಶುಕ್ತಿಕೆ ಗರ್ಭಂ
ಬೆಳೆಯದ ಬಾಲಕಿಯ ಬಸಿಱನರ್ಥಕಮಲ್ತೆ ೨೦
(ಮಲ್ಲಿನಾಥಪುರಾಣಂ, ೩-೧೧೦; ಸೂಕ್ತಿಸುಧಾರ್ಣವಂ, ೭-೧೭)

ಪೊರೆದು ಪೊದಟ್ದಿ ಧೂಳಿವೆರಸಂಗಭವಂ ನಲಿದಾಡದಂಗಣಂ
ಪೊರಳದ ಸೋಗಿಲುಣ್ಣದ ಕುಚಂ ನಡೆನೋಡದ ವಕ್ತ್ರಮುಟ್ಕಿಱಂ
ತೊರೆದೊಡನೆಚ್ಚು ಪಾಯ್ವ ಮೊಲೆವಾಲೊಳೆ ನಾನದ ಮೇಲುದೆಂತುಮೊ
ಪ್ಪಿರದಿನಿತರ್ಕೆ ಮುನ್ನ ನೆಱೆ ನೋನದರೀಗಳೞಲ್ದೊಡಕ್ಕುಮೇ ೨೧
(ಸೂಕ್ತಿಸುಧಾರ್ಣವಂ ೭-೧೮)

---

[1]ಮೊರಡು(ಸೂ) [2]ನೋಡಿ(ಸೂ) [3]ಹ(ಸೂ) [4]ಡದೆ ವಕ್ತ್ರಮನೊಂದಿ ಚೆಲ್ಲದಿಂ(ಸೂ)
[5]ಸಾಗುರ್ಮೋ(ಸೂ) [6]ಶ್ರೀ(ಸೂ)

ನುಗುವಂ ತೊಟ್ಟಲೊಳಿಟ್ಟು ತೂಗಿ ನಲವಿಂದಂ ಜೋಗುಳಂಬಾಡಿ ಮೆ
ಲ್ನಗೆಯಿಂ ಮುದ್ದುವೊಗಂ ತುಳಂಕೆ ಪರಸುತ್ತುಂ ನೋಡಿ ಬಾ ದೇವ ಬಾ
ಜಗತೀವಲ್ಲಭ ಭಾರ ಮಾಣಿಕವೆ ಬಾರೆನ್ನಾನೆಯೆಂಡೆತ್ತಿ ಮೆ
ಯ್ದೆಗೆವನ್ನಂ ಮೊಲೆಯೂಡಿ ತೂಪಿಱುವ ಸೈಪೇಂ ಸೋನದಳ್ಗಕ್ಕುಮೋ ೨೨
(ಅನಂತನಾಥಪುರಾಣಂ, ೧೨-೫೦, ಸೂಕ್ತಿಸುಧಾರ್ಣವಂ ೭-೧೩)

ತನಯನ ಮಾತುಗೇಳದ ತನೂಜನೊಡನಾಡದ ನಾಡೆಯುಂ ಕುಮಾ
ರನನಮರ್ದಪ್ಪದಾತ್ಮಜನ ಬಾಯ್ಸವಿಯ ನಲಿದುಣ್ಣದೊಲ್ದು ನಂ
ದನನನುಸಿರ್ಗಂಪನಾಲಿಸದೆ ರಂಜಿಪ ಕರ್ಣಯುಗಂ ವಿಲೋಲಲೋ
ಚನ ಭುಜ ಜಿಹ್ವೆ ನಾಸಿಕವೆಯ್ದೆ ನಿರರ್ಥಕಮಾಗದಿರ್ಕುಮೋ ೨೩

ತಳರಡಿಯಿಡುತಂ ಕುಟ್ಟಿಮ
ತಳದೊಳ್ ಮಾರ್ಪೊಳೆಯುತಿರೆ ನಿಜಪ್ರತಿಬಿಂಬಂ
ಗಳನೀಕ್ಷಿಸಿ ಕೌತುಕಸಂ
ಚಳನಯನಂ ತನಯನೆಂದು ಬಱಿಸಂದಪನೋ ೨೪
(ಕಾದಂಬರಿ, ಪೂ. ಭಾ. ೩೬೦; ಸೂಕ್ತಿಸುಧಾರ್ಣವಂ ೭-೧೬)

ಉದಯಗಿರಿಶಿಖರದೊಳ್ ಬಾ
ಲದಿವಾರಕನಂತು ಬರ್ಪ[೧]ವೋಲ್ ಘನಕುಚಕುಂ[೧]
ಭದ ಮೇಲೆ ಬರ್ಪನಂ ಪರಿ
ದಿದಿರ್ಗೊಂಡಾತ್ಮಜನನೆಂದುನಿವಳಿಸಿದಪೆನೋ ೨೫
(ಅನಂತನಾಥಪುರಾಣಂ, ೧೨-೫೭; ಸೂಕ್ತಿಸುಧಾರ್ಣವಂ ೭-೨೩)

ಅರಸಂ ಕರತಳತಾಡನ
ಪುರಸ್ಸರಂ ದೇವ ಬನ್ನಿಮೆಂದೊಡ್ಡಿರೆ ಕೈ
ಗಳನೊಲ್ಲದೊಲವಿನೆನ್ನಯ
ಕೊರಳಂ ತಕ್ಕೈಪ ತನಯನೆಂದಾದಪನೋ ೨೬

ಮೊಲೆಯುಣುತಕ್ಕಱಂ ನಗುವ ನಿಂದಿರುತಪ್ಪುವ ಪಿಂಗಿ ಪೊಂಗುತಂ
ಮಲೆವ ಮರಳ್ವ ಕಂಗಳನಲರ್ಚುವ ಮುಚ್ಚುವ ನೋಡುತಾಡುತುಂ
ನಲಿನಲಿದುರ್ಬುತುಂ ತೊಲೆವುತಂತೆಳೆವಳ್ಳಿಯ ಮುದ್ದಿನೊಪ್ಪಿನೊಳ್
ನೆಲಸಿದ ಪುತ್ರಿಯುಂ ಬಯಸುತ್ತಿರ್ದಪುದೆನ್ನ ಮನಂ ಮನಃ ಪ್ರಿಯಾ ೨೭

---

[೧] ನೆಂತು ಬರ್ಪನಂತಾ ಕರಿಕುಂ(ಸೂ) ನಂತೆತೋಱ್ಪನಂಕದೊಳಿಭಕುಂ(ಅ)

ನಾಡವಾತಿನೊಳೇನೊ ಪುತ್ರನನಟ್ಟಿತ್ತಿಯಿಂದಿರದೆತ್ತಿ ಕೊಂ
ಡಾಡದಾಕೆಯು ಕ್ಕೆ ಮರುಳ್ಗಳ ಕ್ಕೆ ಮನಂಬುಗವಟ್ಟಿಕುಂ
ನೋಡದಿರ್ಪಳ ಕಂಗಳುರ್ಚಿದ ಪೀಲಿಗಣ್ಣುರೆ ಜೋಗುಳಂ
ಪಾಡದಿರ್ಪಳ ಬಾಯಿ ತಾನದು ಪುಣ್ಣುಬಾಯೆನಸಲ್ಲದೇ ೨೮

ಸಾರಕಿಯ ಕೀರದಂಚೆಯ
ಪಾರಾವತದಿಂಚರಂಗಳಿಲ್ಲದ ಕೋಪಾ
ಗಾರಮನಾ ವಧು ಪೊಕ್ಕಳ್
ತೋರಣಮಲ್ಲಾಡೆ ನಿಮಿರ್ವ ಸುಯ್ಯೆಲರಿಂದಂ ೨೯

(ಜಗನ್ನಾಥವಿಜಯಂ, ೧೨-೭೬)

ಪ್ರೀತಿಯನೀವ ಸಿಂಧುರದ ವಸ್ತ್ರಮನೊಲ್ಲದದೊಂದು ವಸ್ತ್ರಮಂ
ಶ್ವೇತಮನುಟ್ಟಳುಟ್ಟರೆ ತದಂಬರದಿಂ ಪ್ರಿಯಕೋಪಚಿಹ್ನದಿಂ
ದಾ ತರಳಾಕ್ಷಿಗಾಗಳೆನಸುಂ ನಲವೋಡಿದುದಂತುಟಲ್ತೆ ಬಾ
ಲಾತಪದಿಂದಮುಪ್ಪ ನಲನಬ್ಜನಿಗಪ್ಪುದೆ ಚಂದ್ರಕಾಂತಿಯಿಂ ೩೦

(ಜಗನ್ನಾಥವಿಜಯಂ ೧೨-೭೭)

ತನಗೀರ್ಷ್ಯೆಯಿಂ ಶಿರೋವೇ
ದನೆ ಜನಯಿಸೆ ನಿಟಿಲಪಟ್ಟದೊಳ್ ತಿರ್ಯಕ್ಚಂ
ದನ ತಿಲಕಾಯತಮಂ ಮಾ
ನಿನಿ ರುಚಿರದುಕೂಲಪಟ್ಟಮಂ ನಿಯಮಿಸಿದಳ್ ೩೧

(ಜಗನ್ನಾಥವಿಜಯಂ ೧೨-೭೮)

ಕಲುಷಕಟಾಕ್ಷೇಕ್ಷಣ ರುಚಿ
ಲಲಾಟ ಪಟ್ಟದೊಳೆ ಪೊದಟ್ದು ಪುದಿದತ್ತೆನೆ ಕೋ
ಮಲೆ ತದ್ದುಕೂಲಪಟ್ಟದ
ಕೆಲಗೆಲದೊಳ್ ತೊಡೆದಳರುಣಚಂದನಮಂ ೩೨

(ಜಗನ್ನಾಥವಿಜಯಂ ೧೨-೭೯)

ಪರಮಕ್ರೋಧಾದಿ ದೇವಾರ್ಚನಮೆನೆ ಪರಿದೊಟ್ಟುತ್ತೆ ಲೀಲಾಬ್ಜಪತ್ರೋ
ತ್ಕರಮಂ ಚಿಂತಾಲತಾವೃದ್ಧಿಯನೊಡರಿ[೧]ಸಲೋರಂತೆ[೧] ನೀರ್ವೊಯ್ವ ಪಾಂಗಿಂ
ಸುರಿಯುತ್ತುಂ ಬಾಷ್ಪಧಾರಾಜಲಪರಿಕರಮಂ ಸ್ನೇಹಶಾಸ್ತ್ರಕ್ಕೆ ಟೀಕಂ
ಬರೆಯುತ್ತಿರ್ಪಂದದಿಂದುಂಗುಟದೆ ಬರೆಯುತಂ ಭೂಮಿಯಂ ಭಾಮೆಯಿರ್ದಳ್ ೩೩

(ಜಗನ್ನಾಥವಿಜಯಂ, ೧೨-೮೧)

---

[೧] ಚುವಂತಾಗ(ಸ)

ಸಿರಿಗಂಪನಬಲೆ ಹೃದಯದೊ
ಳೊರಸುತ್ತುಂ ನೋವನಿದುವೆ ಪಡೆದಪುದೆಂದಾ
ಸಿರಿಕಂಡದ ಶುಕ್ತಿಕೆಯುಂ
ಧರಣಿಯೊಳಪ್ಪಳಿಸಿ ಕಣ್ಣನೀರಂ ಸುರಿದಳ್ ೩೪

(ಜಗನ್ನಾಥವಿಜಯಂ ೧೨-೮೨)

ಬಂದು ಮೃದುಯಾನದಿಂದಾಂ
ಬಂದುದನೀ ದೇವಿಗರುಪಬೇಡೆಂದು ಸಖೀ
ವೃಂದಕ್ಕೆ ಪೇೞ್ದು ಸಂಜ್ಞೆಯಿ
ನಂದು ಮನೋರಮೆಯು ಕೋಪಗೃಹಮಂ ಪೊಕ್ಕಂ ೩೫

(ಜಗನ್ನಾಥವಿಜಯಂ, ೧೨-೮೩)

ಪಾರಾವತವುಲಿಯದ ಶುಕ
ಶಾರಿಕೆಗಳ್ ಮಧುರ ವಿರುತಿವೀಱದ ಕೋಪಾ
ಗಾರಮನೊರ್ಮೆಯೆ ಪೊಕ್ಕೀ
ಕಾರಣವೇನೆನಗೆ ತಿಳಿಯೆ ಪೇೞೆಂದುಮುಖಿ ೩೬

(ಜಗನ್ನಾಥವಿಜಯಂ, ೧೨-೮೮)

ಸಿಂಧೂರ[೧]ವಸನಮಂ[೧] ಕಳೆ
ದೊಂದು [೨]ಸಿ[೨]ತಾಂಬರಮನುಟ್ಟು ನಿರ್ಮಳನಿರ್ಮೋ
ಕಂದಳೆದ ನಾಗಕನ್ನಿಕೆ
ಯಂದಮನಭಿನಯಿಸಿದಂದವೇಂ ಲಲಿತಾಂಗೀ ೩೭

(ಜಗನ್ನಾಥವಿಜಯಂ, ೧೨-೮೬)

ತರುಣಿ ಕಳಂಕಮನಂತಃ
ಕರಣದೊಳಾಂತಮಳವೃತ್ತಿಯಂ ಕೂಡೆ ಬಹಿ
ಸ್ಫುರಿಸಂತೆ ಮಹಾ[೩]ರಜನಾಂ[೩]
ಬರಮಂ ಕಳೆದೇಕೆ ಧವಳಪಟಮಂ [೪]ಪೊದೆ[೪]ದಾ ೩೮

(ಜಗನ್ನಾಥವಿಜಯಂ, ೧೨-೯೦)

---

[೧] ನಿಚಯಮಂ(ಸ) [೨] ಪೀ(ಸ) [೩] ರಚಿತಾಂ(ಸ) [೪] ತಳೆ(ಸ)

ಹೃದಯದ ತಾಪದಿನುರ್ಕುವ
ವದನದ ಲಾವಣ್ಯರಸದ ನೊರೆಯೆನೆ ನೊಸಲಿನ
ಲಿ ದುಕೂಲಪಟ್ಟವುಂ ಕ
ಟ್ಟಿದಭಿಪ್ರಾಯಮುನವೋಘವಱಪುವುದಬಲೇ ೩೯

(ಜಗನ್ನಾಥವಿಜಯಂ, ೧೨-೯೧)

ನಸುದೆಱೆತಯುತ್ತಮಿರ್ದ ಪೊಸಮುತ್ತಿನ ಸಿಂಪಿನ ಸಂಪುಟಂಗಳಿಂ
ನುಸುಳ್ದು ಸುಪಾಣಿಯಾಗಿ ಪೊಱಪೊಣ್ಮುವ [1]ವಮೌಕ್ತಿಕಮಾಲೆಯಂತೆವೋಲ್[1]
ಮಿಸಗಿ ನಿರಂಜನಂಗಳೆನಿಸಿ ಪಕ್ಷ್ಮಪುಟಾಂತರದಿಂದಮೇಕೆ ಪೇೞ್
ಪಸರಿಸಿ ನೀಳ್ದು ಪೊಣ್ಮಿದುವು ಕಣ್ಣನಿಗಳ್ ತರಳಾಯತೇಕ್ಷಣೇ ೪೧

(ಕಾದಂಬರಿ ಪೂ. ಭಾ., ೩೩೧)

ಕುರುಳ ಮದಾಳಿಮಾಲಿಕೆಗದೇಕೊಳಗಾಗವು ಚಿನ್ನಪೂ ಮುಖಾಂ
ಬುರುಹಮನೇಕೆ ಸೂಸದು ಲತಾಂಗಿ ವಚೋಮಕರಂದಮಂಗುಳಿ
ಸ್ಮರಶರಮಂಗುಳೀಯ ಮಣಿರಶ್ಮಿಗಳಿಂ ಗಱಗಟ್ಟದೇಕೆ ಪೀ
ವರ ಕುಚಕೋಕಮೇಕಳಸಲೊಲ್ಲವು ಬಾಲಮೃಣಾಳನಾಳಮಂ ೪೨

(ಅನಂತನಾಥಪುರಾಣಂ. ೧೨-೫೪, ಸೂಕ್ತಿ ೭-೧೧)

ಚರಣಾಂಗುಲಿಗಳ್ ಮಣಿನೂ
ಪುರಂಗಳಿಂದೆಸೆದು ತೋಱುತಿರ್ದಪುವಿಲ್ಲೇ
ಕರಸಿ ಪರಾಗದರುಣಪ
ಟ್ಚರಣಂಗಳ್ ನೆಲಸಿದಬ್ಜದೆಸೆವೆಸಳ್ಗಳವೋಲ್ ೪೩

(ಚಂದ್ರಪ್ರಭಪುರಾಣಂ, ೩-೫೫)

ಸ್ಮರರಾಜಕೇಳಿಕಮಲಾ
ಕರಕಳಹಂಸಂಗಳೆನಿಸಿ ಸೊಗಯಿಪ ಮಣಿನೂ
ಪುರಯುಗಳಂ ನಿನ್ನ ಪದಾಂ
ಬುರುಹಮನೊಂದಲ್ಕೆ ಪಡೆಯದಿಂದಿನ ತೆಱನೇಂ ೪೪

(ಕಾದಂಬರಿ, ಪೂ. ಭಾ. ೩೩೩)

---

[1]ಮುತ್ತಿನಮಾಲೆಯುಂದದಿಂ(ಸ)

20

ಕಾಮನ ಕೃತಕಾದ್ರಿಗಳೆನಿ
ಪೀ ಮೊಲೆಗಳ ಮೇಲೆ ವಿಮಲನಿರ್ಝರ ಪೂರೋ
ದ್ದಾಮತೆಯಂ ನವಮೌಕ್ತಿಕ
ದಾಮದಿನೊಡರಿಸದ ತೆಱನಿದೇನಿಂದುಮುಖೀ ೪೫
(ಚಂದ್ರಪ್ರಭಪುರಾಣಂ, ೩-೫೭)

ಲಲಿತಾಂಗುಳಿದಳಸಂಕುಳ
ಕಲಿತಂ ಕರತಳಮಿದೇಕೆ ಕೋಮಳೆ ಕದಪಂ
ತಳೆದುದರದಳಿದು ರಕ್ತೋ
ಪಳದಂದದೆ ಕರ್ಣಪೂರಮಾದತ್ತೀಗಳ್ ೪೬

ಎರಡುಂ ಕರ್ಣದೊಳಂ ಪೊಳೆ
ವ ರತ್ನಮಯಪತ್ರದಿಂದಮಿನಬಿಂಬಯುಗಾಂ
[1]ತರವೆನಿ[1]ಸುವಿಂದುಬಿಂಬದ
ಪರಿ[2]ಯಂ[2] ಪರಿಭವಿಸದೇಕೆ ನಿನ್ನಯ ವದನಂ ೪೭
(ಚಂದ್ರಪ್ರಭಪುರಾಣಂ, ೩-೫೯)

ಒಗೆತಪ್ಪ ಬಹಳಬಾಷ್ಪಾಂ
ಬುಗಳಿಂದಂ ದೃಗಮುಮಾದುದೇಕೆಯೊ ನಿನ್ನೀ
ಸೊಗಯಿಪ ಕಪೋಲವಾಳೀ
ಯುಗಳದ ಕಾಶ್ಮೀರಮಕರಿಕಾಪತ್ರಂಗಳ್ ೪೮

ನೊಸಲೊಳಮರ್ಕವೆತ್ತಲೆವ ಸೂಸುಗುರುಳ್ ಸಿಡುಸಯ್ಯೊಳಟ್ಟಿ ಮೈ
ಪೊಸೆ[ದಿರುವಂತೆ] ಬಾಡಿದ ಪೊಗಂ ಕರಪಲ್ಲವದಲ್ಲಿ ಕೆಱಂ ಕೀ
ಲಿಸಿದ ಕದಂಪು ಜಾಱಿದ ಜಗುಳ್ಮುಡಿ ಬೇಱೆ ಬೆಡಂಗನೀಯೆ ಜಾ
ನಿಸುವರ ಭಾವಮೇಂ ಬಗೆಯೊಳಚ್ಚರಿದಿರ್ದುದೊ ತನ್ನರೇಂದ್ರನಾ ೪೯

ನಸುಬಿಸುಪಿಂಗೆ ಬೆಚ್ಚಿ ಪೆಱಸಾರೆ ಮದಾಳಿಗಳೋಳಿಗೊಂಡು ನಿ
ಟ್ಟುಸುರ್ಗಳ ಧಾಳಿಯಿಂ ನಿಜಶರೀರಶಲಾಕೆಯನೀಕೆ ನಾಡೆ ಕಂ
ದಿಸಿ ನಱುಗಂಪು ನುಣ್ಪುಗಳ ಮೆಯ್ಸಿರಿಯಂ ಸಲೆ ಸೋಲ್ತು ಚಂಪಕ
ಪ್ರಸವದ ಪಾಡುಗುಂದಿದಳಿಗಾಡಿಯನೇಕೆಣೆಮಾಡಿಕೊಂಡಳೋ ೫೦

---

[1]ತರಿತ(ಅ) [2]ಜಂ(ಅ)

ಕೆಲದೊಳೆ ತೋರ್ಪ ಕೌಳುಡೆಯನೊಯ್ಯನೆ ಕಯ್ಯೊಳದಂಪೆ ಕಂಕಣಂ
ಗಲಕೆನೆ ಕಣ್ಣನೀರ್ ಪರಿಯೆ ಪೊಣ್ಮೆ ಪೊದೞ್ದಿಡೆ ನೂಲ ನುಣ್ಚರಂ
ನೆಲೆವೊಲೆಯಿಂದ ವೊಂದಿನಿಸು ಜಾಱುವ ಮೇಲುದನೇಱಿನೋಂತಳೆ
ಲ್ಲಲಘು ನಿತಂಬೆಯಂದಮೆಱೆಗೊಂಡುದು ರಾಜಕಳಾವಿಳಾಸನಾ ೫೧

ಜಗದಧಿಪತಿ ಸಮದುಃಖಂ
ಮೃಗನಯನೆಯ ಖೇದಮಂ ಪಚ್ಚುಗೊಳಲ್
ಬಗೆದಂ ವ್ಯಾಕುಳಚಿತ್ತಂ
ದೃಗಾಂಬುವಂ ತೊಡೆದು ಮೆಲ್ಲನಂದಿಂತೆಂದಂ ೫೨

ನಡೆಯೊಡನೇನುಮುಚ್ಚರಿಸಿದಂತೆ ನೆಗೞ್ತೆಯ ರಾಜಹಂಸೆ ಪೊ
ಳ್ನುಡಿಗಳ ಜಾಣ್ಮೆಯಂ ಸೆಳೆದುದೋ ಗಿಳಿ ಸೋಲದೆ ಸೋಗೆ ಬೀಗಿ ಸೋ
ಮುರ್ಱಡಿಗೆಣೆಯಾದುದೇ ನುಡಿ ಮನೋಹರಿ ನಿನ್ನ ಮೊಗಂ ಕನಲ್ದು ನೀಂ
ನುಡಿಯದೆ ಮೌನಮಂ ಪಿಡಿಯೆ ತಾವರೆಯೊಳ್ ಸರಿಯಾಗಿ ಪೋಗದೇ(?) ೫೩

ಒದವಿದ ನಿಜಭೇದಕ್ಕಾ
ವುದು ಕಾರಣಮತಿ ಸರಕ್ತಮೆನಿಸಿರ್ದನ್ನೀ
ಹೃದಯಂ ನವಪಲ್ಲವದಂ
ದದೆ ಕಂಪಿಸಿದಪುದು ಕಂಡು ನಿನ್ನಯ ತೆಱನಂ ೫೪

ಪಂಕರುಹನಯನೆ ಮನದಾ
ಶಂಕೆಯದೇಂ ಸ್ನೇಹಮೆಂಬುದೆರಡೆಲ್ಲೆನ್ನೊಳ್
ನೀಂ ಕೇಳೆ ಸತ್ಯಭಾಮೆಯ
ಕಿಂಕರನೀ ಕೃಷ್ಣನೆಂಬ ಲೋಕದ ನುಡಿಯುಂ ೫೫

(ಜಗನ್ನಾಥವಿಜಯಂ ೧೨-೯೮)

ನಿನ್ನಾಣೆ ನಿನ್ನ ಘೋಷಣೆ
ನಿನ್ನ ಪೆಸರ್ ನಿನ್ನ ಜಪಮೆ ಜಸಮೆನಲೆನಲೀ
ಮನ್ನಣೆಯ ಮದನನಚ್ಚಿನ
ಚೆನ್ನಿಗೆ ಕಡುನೋವಿದಾರ ಕಡೆಯಿಂದಾಯ್ತೊ ೫೬

ನಿನ್ನೊಲವನರ್ಘವದಱಿಂ
ದೆನ್ನ ಸುಖಂ ನೆಗೞ್ದದಱಿನಾತ್ಮಸುಖಾರ್ಥಂ
ನಿನ್ನನೆ ಮನ್ನಿಸುವೆಂ ನಾಂ
ನಿನ್ನಿಂ ಪ್ರಿಯವಸ್ತುವೆನಗೆ ಪೆಱತೊಂದುಂಟೇ ೫೭

(ಜಗನ್ನಾಥವಿಜಯಂ ೧೨-೯೯)

ದೇವಿಯ ಸೊಬಗ್ಗೆ ತನುಲತೆ
ಪೂವಿನ ಬಿಲ್ಲಂತೆ ಬಾಡಿ ಬಳ್ಕಿರುತಿರ್ದುಂ
ಭಾವಿಸಿ ನೋಡಿ ಮನಂಗೊ
ಳ್ವೀ ವಿಸ್ಮಯರಸಮನೆನ್ನೊಳೇಂ ಮಾಡಿದುದೋ ೫೮

ಉಗುಟ್ದು ಪುದಿಲ್ಲ ಚಂದ್ರಿಕೆಯನುಜ್ವಲ ಲೋಲ ವಿಲೋಚನಂ ಮನಂ
ಬುಗೆ ನಯನಮಂ ಪುದುಂಗೊಳಿಸಿತಿಲ್ಲ ಲತಾಂಗಿ ಲತಾಂಗಲೇಖೆ ಮೆ
ಲ್ನಗೆವೆಳಗಂ ತುಳುಂಕಿದಪುದಿಲ್ಲೆಸೆವಿಂದುಮುಖಿ ಮುಖೇಂದುವೇ
ಕೆಗ ನಿನಗಾವಕಾರಣದಿನಾದುದು ಪೇಟಿಂನಿತೊಂದು ಜೇವಸಂ ೫೯

(ಜಗನ್ನಾಥವಿಜಯಂ ೨–೬೩)

ಕಂದುವ ಕುಂದುವಿಂದುವಿನೊಳೊಂದುವ ದಂದುಗದಿಂದಲಿಂದುವೀ
ಸೌಂದರಿಯಾನನೇಂದುವನೆ ಸಾರ್ದು ಬರ್ದುಂಕುವೆನೆಂದು ಬಂದನೆಂ
ಬಂದದಿ ನೀಳ್ದ ಲೋಚನಚಕೋರಿಗಳಿಕ್ಕಿಸಲಾಜಿದಾ ಸುಧಾ
ಬಿಂದುಗಳಂ ಮರಳ್ಚಿದವೆನಲ್ ಸುರಿದಳ್ ತರಳಾಕ್ಷಿ ಬಾಷ್ಪಮಂ ೬೦

ಪಗಲೆ ಚಕೋರಂ ಪೊಣರ್ವ
ಕ್ಕಿಗೆ ತಿಂಗಳಬಿತ್ತಮನೊಯ್ದು ಕುಟುಕ್ಕಿಕ್ಕುವ ಭಂ
ಗಿಗೆ ನೆಲೆಯಾದುವು ಮೇಲುದ
ನುಗುಟ್ದಿ ಬಲೆಯು ಮೊಲೆಯೊಳುಗುವ ಬಾಷ್ಪಕಣಂಗಳ್ ೬೧

ಇಂದೀವರಮನಿದೇನೆಲೆ
ಕೆಂದಾವರೆ ಭರದಿನಪ್ಪಿ ಪ್ಪೆದಡವಿದುದೆಂ
ಬಂದದಿಂ ಕಣ್ಣ ನಿಗಳನರ
ವಿಂದಾಸ್ಯೆಗೆ ತೊಡೆದನವುಳ ಕರಕಿಸಲಯದಿಂ ೬೨

ಕೆಂದಳದ ಕಾಂತಿ ಪೊರೆದುದೊ
ಬಂದಿನಿಯನನೀಕ್ಷಿಸಲ್ಕೆ ಮನದನುರಾಗಂ
ಮುಂದಿರ್ದುದೊ ಪೇಟಿಂಬಿನ
ಮಂದಲರ್ಗಣ್ ಕೆಂಪನೇಂ ಪುದುಂಗೊಳಿಸಿದುದೋ ೬೩

ದೇವಿ ಬಿಡು ಖೇದಮಂ ನಿನ
ಗಾವುದಜಿಂಪೊಳ್ ಕೊರತೆ ಬರಿದೆ ಜಲಕಳಿಕೆಗಳಂ
ತೀವಿ ನಿಜನಯನಮನೆ ಕೆಂ
ದಾವರೆಯೆಸಳೊಡನಿದೇಕೆ ಸರಿಗೈದಪೆಯೋ ೬೪

ಆನೊಳಗಾಗಿರೆ ಕೇಳೆಲೆ
ಮಾನಿನಿ ನೀನಿಕ್ಕಿದುಗುಬಿ ನಾಂ ದಾಂಟಿನೆನಿ
ಪ್ಪೀ ನುಡಿಗೇಳ್ದು ನಿಜಾಜ್ಞೆಯ
ಸೇನನು ಮಿಗೆ ಮೀಱೆ ಮಿಕ್ಕು ನಡೆವರುಮುಂಟೇ ೬೫

ಅರಸಿಯ ನೆಗಟಿತ್ತ ನೋಡಲ್
ಪಿರಿದುಂ ವಿಸ್ಮಯಮನಾಗಿಪುದು ದೇವ ಮನೋ
ಹರವೆನಿಪ ರಾಜ್ಯವಿಭವದ
ಪರಮಸುಖಂ ತನಗೆ ವಿಫಳಮಾದವೊಲೀಗಳ್ ೬೬
(ಕಾದಂಬರಿ ಪೂ. ಭಾ. ೩೪೨)

ಮನದೊಳ್ ಮಱುಗುತ್ತಿರೆ ಮ
ಜ್ಜನ ಭೋಜನ ಭೂಷಣಂಗಳೆಂಬಿವುಮಂ ಪ್ರಾ
ರ್ಥನೆಗೆಯ್ದು ದೇವ ನಿಚ್ಚಮು
ಮನುವಿಸಿ ಮಾಡಿದುದು ಪರಿಜನಂ ಮಾನಿನಿಯಾ ೬೭
(ಕಾದಂಬರಿ ಪೂ. ಭಾ. ೩೪೩)

ಇಲ್ಲಿಂದಿತ್ತಲ್ ದೇವರ್
ಬಲ್ಲಿರೆನುತ್ತುಸಿರದಿರ್ಪುದುಂ ತತ್ಸಖಿ ಭೂ
ವಲ್ಲಭನಱದಾಗಳ್ ನಿಜ
ವಲ್ಲಭೆಯಂ ನೋಡಿ ದುಃಖದಿಂ ಬಿಸುಸುಯ್ದಂ ೬೮
(ಕಾದಂಬರಿ, ಪೂ. ಭಾ. ೩೪೬)

ಆರಯೆ ದುರ್ಘಟಮೆನ್ನಮ
ನೋರಥಮೆಂದಲಸಗಮನೆ ಮನದೊಳ್ ಪಿರಿದುಂ
ದೂರಿಸಲದೇಕೆ ಬಿದಿ ಕೈ
ವಾರಿಸಿದೊಡೆ ತೀರದಿರ್ಪುದಾವುದುಮುಂಟೇ ೬೯
(ಚಂದ್ರಪ್ರಭಪುರಾಣಂ, ೩–೬೭)

ಮುಗಿಲಿರ್ದಂತೆಳ ಮಿಂಚುಗಳ್ ಕಱತವವೋಲ್ ವಾರ್ಬಿಂದುವಂ ಬಂದು ತೋ
ರಗುರಳ್ ತಳ್ತಿಡಿದೊಪ್ಪೆ ಕಣ್ಮಲರ್ಗಳಿಂ ಪಾಯ್ತರ್ಪ ಬಾಷ್ಪಾಂಬು ಬಿಂ
ದುಗಳಂ ಪದ್ಮದೊಳೊಂದಿ ನಿಂದ ಹಿಮಬಿಂದುವ್ರಾತಮಂ ನೂಂಕುವಂ
ತೊಗೆದರ್ಕಂ ಕರದಿಂದಮುಂದು ತೊಡೆದಿಂತೆಂದಂ ನೃಪಂ ನಲ್ಲಳಂ ೭೦
(ಲೀಲಾವತಿ ೭–೩೯)

ಅದು ಸುಕೃತಾನುರೂಪಮದು ನಮ್ಮ ಮನೋರಥದಂತೆ ತೀರ್ದಿ ಬ
ರ್ಪುದೆ ದೊರೆಕೊಳ್ವುದಕ್ಕೆ ದೊರೆಕೊಳ್ಳದುದ[1]ಕ್ಕಳಿಪಿಂ[1] ವಿವೇಕಿಗಳ್
ಪಡೆವರೆ ದೇವಿ ಮಾಣ ಮನದುಮ್ಮಳಮಂ ಭವದೀಯದಾನಧ
ರ್ಮದ ಸುದೃಢವ್ರತಾಚರಣವೃತ್ತಿಗೆ ಕೂಡದು[2]ದೇಂ ಮನೋರಥಂ[2] ೭೧
(ಅನಂತನಾಥಪುರಾಣಂ ೧೨-೬೫)

ವೀಳೆಯಮನುಗುಟಿ ಮುಡಿಯೊಳ್
ತಾಳಿದ ಕಮ್ಮಲರ ಸೂಸಿ ಮುತ್ತಿನ ಬೊಟ್ಟಂ
ಭಾಳದೊಳಗಿಟ್ಟು ಸೂಚಿಪ
ವೇಳೆಯ ಮಧು ರತ್ನಮಾಂತ ಸಮಯ ಮೃಗಾಕ್ಷೀ(?) ೭೨

ಪಾಯ್ವ ಕುಚಂಗಳಂ ಮಿಡಿದುನೋಡಿ ಕೌಂಕುಳನೆತ್ತಿ ಕಂಪನಾ
ರಯ್ವುತ್ತುಮೊತ್ತುತುಂ ಪೊಡವಿಯಂ ಮೊಗಮಂ ಮೃಗನೇತ್ರ ದರ್ಪಣ
ಕ್ಕೊಯ್ವುದು ಮೆಲ್ಲಮುಂ ಕಳೆದು ಮಾಣಿಕಮಂ ಪೊಸಪೊಂಗಳಿಂದೆ ಕೈ
ಗೆಯ್ವುದುಮಾಕೆ ಕೈಗೆ ಸೆಳೆಯಂ ಸಖಿ ಕೊಟ್ಟಳದೇಂ ಪ್ರಗಲ್ಭೆಯೋ ೭೩
(ಲೀಲಾವತಿ ೭-೫೦, ನೇಮಿನಾಥಪುರಾಣಂ ೧೨-೧೦, ಸೂಕ್ತಿ ೭-೧೦)

ಮೊಗಶಶಿವೇೞ್ಕೆ ಕಡುಲಜ್ಜೆ ಕರಂ ಪೊರೆಯೇೞ್ಕೆ ಗಾತ್ರದಿಂ
ದೊಗೆದು ಮುದಾಶ್ರು ಜಾೞ್ಕೆ ತೆಳುವೊಟ್ಟೆಯೊಳೊಯ್ಯನೆ ಶೂಲೆದೋೞ್ಕೆ ಮ
ತ್ತೊಗಡಿಪ ಗಂಧಮುಂ ಸೊವಡು ನಾೞ್ಕೆ ನಿಜಸ್ಥಲೆಯಪ್ಪ ಭಾವಮಂ
ಬಗೆಗೊಳುತಿರ್ಪ ಭಾವಕಿಯ ಬಣ್ಣಿಸಿದಂ ಕವಿಪಂಚಮಾರ್ಗಣಂ ೭೪

ತೊಳಗುವ ಮೆಯ್ಗೆ ಳೊಳ್ ನಿವಿರ್ದ ಕುಂಕುಮದಿಂದಮದುರ್ಟಿ ಮುಯ್ಪಿನಿಂ
ದಳವಡೆ ತೊಟ್ಟ ಪೊಂದೊಡಿಗೆಯಿಂ ಚಲಕೋಮಲಹಸ್ತ ಶಾಖೆಯೊಳ್
ಸೆಳೆಸೆಳೆಗೊಂಬಿನಂತೆ ಪೊಳೆವೊಂದು ವಿಳಾಸದಿನಗ್ಗಳಂ ತಳಿ
ರ್ಗೆಳಲತೆಯಂತೆ ತೋಱದರುಣಾಧರೆ ಪುಷ್ಪಿತೆಯೆಂಬುದೊಪ್ಪದೇ ೭೫

ಸುಯ್ಗೆಱಗುವ ಮಘಮಘಿಸುವ
ಮೆಯ್ಗೆಱಗುವ ಜಘನಕೆಱಗುವಳಿ ಪೇೞ್ದವು ತ
ಕ್ಕೈಗಣೆಯನ ಜಯಲಕ್ಷ್ಮಿಯ
ತಾಯ್ಗೆಱವೆನೆ ಮಿಸುಪ ಸತಿಯ ಪುಷ್ಪೋದಯಮಂ ೭೬

---

[1]ಕ್ಕಧಿಕರ್(ಅ) [2]ದೆನ್ನ ಮನೋಹರಂ(ಸ)

ಸೆಳೆ ಬಿಸನಾಳಮಾಗಿರೆ ತಳಂ ದಳಮಾಗಿರೆ ಲೋಲನೀತ ಕುಂ
ತಳವಳಿಮಾಲೆಯಾಗಿರೆ ಪರಿಚ್ಛದಮಾದರುಣಾಧರಂ ಸಮಂ
ತೆಳಸಿದ ಬಾಲಭಾನುರುಚಿಯಾಗಿರೆ ಪುಷ್ಪಿತೆಯಾಗಿ ಪುಷ್ಪಕೋ
ಮಲೆ ಜಯರಾಮ ಕಾಮ ಕಮಲಾಕರದಬ್ಜಿನಿಯಂತೆ ರಂಜಿಸಳ್ ೭೭

ಕೃತಸಹಕಾರನಂದನವಿಲಾಸೆ ಸದಾರುಣಪಾದಪದ್ಮರಾ
ಜಿತೆ ಘನಸಾಮ್ಯನಿರ್ಗಳಪಯೋಧರೆ ಪೂರ್ಣಹಿಮಪ್ರಭಾಸ್ಯೆ ರಾ
ಜಿತ ಮಹಿಕಾಂತೆ ಮಾಸದ ವಿಲಾಸಮೆ ಮೆಯ್ಸಿರಿಯಾದ ದೇವಿ ತಾಂ
ಋತುಮತಿಯಪ್ಪುದಚ್ಚರಿಯೆ ವತ್ಸರಲಕ್ಷ್ಮಿಯೊಲಿರ್ಪ ದೂಸಱಿಂ ೭೮

ತರುಣಿಗೆ ಮಾಸಿದಂಗಲತೆ ಸೂಸಿದಕುಂತಳಮೊಯ್ಯನೊಯ್ಯನೋ
ಸರಿಸುವ ಭಂಗಿ ಕೈಯ ಸೆಳೆ ಬಾಡಿದ ಪೂಮುಡಿ ಶೂನ್ಯರೀತಿ ಸೌಂ
ದರತರದಂಗದೊಳ್ ಸೊವಡು ಜಾಡ್ಯದ ಮೆಯ್ ಕಡುಲಜ್ಜೆ ಕಜ್ಜಲಂ
ಪರೆದಲರ್ಗಂಗಳೆಂಬಿನಿತು ಪೇೞವೆ ಮಾಣಿಕಮಾಂತ ಭಾವಮಂ ೭೯

ತೊಡೆಯುಗುರೊತ್ತಿಱುಂಕಿ ನಡೆವುತ್ತಡಿವಜ್ಜೆಯ ನಿಂದಿಡುತ್ತೆ ಸೋ
ರ್ಮುಡಿಯ ತೊಡಂಕಿಸುತ್ತೆ ಕರದೊಳ್ ಸೆಳೆಯಂ ಪಿಡಿವುತ್ತೆ ತೊಟ್ಟ ಮೈ
ದೊಡವನಿವಾರಿಸುತ್ತ ರುಧಿರಾಂಬುವಿನಂಕಮ ಸೂಚಿಸುತ್ತ ಸೊಂ
ಪಡಗಿರಲೆಯ್ದೆ ಪುಷ್ಪವತಿಯಾದವಳೊಪ್ಪಿದಳೊಂದು ಚೆಲ್ವಿನಿಂ ೮೦

ದುಂಡಿಸಿ ಬಿಂಕದಿಂ ಬಿಗಿದ ಪೆರ್ಮೊಲೆಗಳ್ ಮಱಿದುಂಬಿವಿಂಡು ಮುಂ
ಕೊಂಡು ಮರಳ್ವ ಮೆಯ್ಯ ಸೊವಡುಣ್ಮುವ ಲಜ್ಜೆ ದರಸ್ಮಿತಂ ಮನಂ
ಗೊಂಡಿರಲೊಯ್ಯನೋಸರಿಪ ಪೆಂಡಿರಮಾಣಿಕಮಂದು ಮಾಣಿಕಂ
ಗಂಡ ಬೆಡಂಗು ಬೇಱೊಲವನಿತ್ತುದು ಕಣ್ಗೆ ಕಲಾವಿಲಾಸನಾ ೮೧

ಮಿಱುಗುವ ಮಿಂಚಿನೋಲೆ ಸುಲಿಪಲ್ ನಸುಗೆಂಪಿನ ಸೀರೆ ಮೇಲುದಂ
ಪೊಱಮಡುವಂತೆ ಪೊಂಗಿದ ಕುಚಂ ತೊಡಹಂಡೊಡೆದಂದಮಾದ ಮೈ
ಮಿಱುಮಿಱುಗೊಂಬ ತುಂಬಿಗುರುಳೊಪ್ಪಿರೆ ಪುಷ್ಪಿತೆಯಾಗಿ ಮುಂದೆ ನಿಂ
ದೆಱೆಯಳನಾಸೆವಟ್ಟುದು ಮನಂ ಕವಿರಾಜಕಲಾವಿಲಾಸನಾ ೮೨

ಎಸೆವ ಬೞಲ್ಕೆಗಮುಷ್ಣವ
ನುಸಿರ್ವುಸಿರನುರಾಗವೇಱುವಕ್ಷಿದ್ವಿತಯಂ
ಪೊಸಕಂಪನುಗುೞ್ವ ಕಕ್ಷಂ
ನಸು ಕೊರಗುವ ತನು ಮನೋಹರಂ ನಾಯಕಿಯಾ ೮೩

(ಗಿರಿಜಾಕಲ್ಯಾಣಂ ೩–೨೧)

ಸೆಡೆವ ನಡೆ ತೊಡೆಯ ತಡೆಗಾಲ್
ನಡುವಿಂಗತಿಗಾಢದುಡಿಗೆ ಜಡತನು ಸೋಂಕಿಂ
ಗೆಡೆಗುಡದ ಮನಂ ಮಾತಂ
ಮಡಗುವ ಪರಿ ಸೊಗಯಿಸಿತ್ತು ಪಂಕಜಮುಖಿಯೊಳ್ ೮೪

(ಗಿರಿಜಾಕಲ್ಯಾಣಂ ೩-೨೨)

ಮುಟ್ಟಲ್ ಪಡೆಯದ ಬೆಮರಂ
ಬಿಟ್ಟಂ ನಡೆನೋಡಿ ಮದನತಾಪದಿನೋಪಳ್
ಮಿಟ್ಟನೆ ಮಿಡುಕದೆ ಮನದೊಳ್
ಕಿಟ್ಟಳದೊಳಮಿರ್ದೊಡಂದು ಮಿಂದವೊಲಧಿಪಂ ೮೫

(ಲೀಲಾವತಿ ೭-೫೩)

ಮಾನಿನಿಯೀ ತೆಱದಿಂ ಸಂ
ದಾ ನಾಲ್ಕುಂ ದಿವಸಮಿರ್ದು ಬೞಿಯಿಂ ಶುದ್ಧ
ಸ್ನಾನಾಂಗೀಕೃತ ವಿಮಳ
ಶ್ರೀನಿಧಿ ಮೇನಾಲತಾಂಗಿ [೧]ಕಣ್ಗೆಸೆದಿರ್ದಳ್[೧] ೮೬

(ಗಿರಿಜಾಕಲ್ಯಾಣಂ, ೩-೨೩)

ಸುಲಿಪಲ್ ಬಿಂಬಾಧರಂ ರಾಜಿಪನಯನ ಯುಗಂ ಚಂಪಕಾನಾಸಿಕಂ ನಿ
ರ್ಮಲ ವಕ್ತ್ರಂ ಶ್ರೀಲಲಾಮಂ ಸುರಚಿರವರ ವಕ್ಷೋಜ[೨]ಯು[೨]ಕ್ತಾಂಗ ರಾಗಂ
ವಿಲಸತ್ಕಕ್ಷಾಂತದೊಳ್ ಪೂಸಿದ ಮೃಗಮದಮುದ್ಯದ್ದುಕೂಲಂ ಪ್ರಸೂನೋ
ಜ್ವಲಧಮ್ಮಿಲ್ಲಂ ಸರಾಗಂ ಪೊಱಿಯೆ ನಿಜಪತಿಧ್ಯಾನದೊಳ್ ಮೇನೆಯಿರ್ದಳ್ ೮೭

(ಗಿರಿಜಾಕಲ್ಯಾಣಂ ೩-೨೫)

ಅಗ್ಗದ ರಾಜಹಂಸೆಗಳ ಯಾನಮನಲ್ಲದೆ ಕಾಯಕಾಂತಿಯಂ
ಸುಗ್ಗಿಯ ತೋರಮಲ್ಲಿಗೆಯ ಗಂಧಮನಲ್ಲದೆ ಮೆಯ್ಯ ಬೆಳ್ಪುಮಂ
ಸಗ್ಗದ ಸಾರಮಪ್ಪಮರ್ದಿನಿಂಪುಮನಲ್ಲದೆ ನಿರ್ಮಲತ್ವಮಂ
ಬಗ್ಗಿಸಿಕೊಂಡವೋಲೆಸೆದುದಂಗನೆಗಾ ಧವಳಪ್ರಸಾಧನಂ ೮೮

(ಲೀಲಾವತಿ, ೭-೫೪)

---

[೧]ಯೊಪ್ಪುತಿರ್ದಳ್(ಸ) [೨]ಮು(ಸ)

ಸೊಗಯಿಸುವಚ್ಚ ಬೆಳ್ನಗೆಯ ತಾಯ್ಗಳು ಕಾಮನ ಕೀರ್ತಿ ಚಂದ್ರಲೇ
ಖೆಗೆ ಪರಮಂ ಸುಧಾರಸಮನಿತ್ತಧಿದೇವತೆ ತನ್ನ ಕಣ್ಣ ಬೆ
ಳ್ಪುಗಳೆನೆ ಬೇಱತೆ ಬೆಳ್ಪಸದನಂ ತನಗೆಂಡೊಡೆ ಚೆಲ್ವಿನೇೞ್ಗೆಯಿಂ
ನಗುವುದದೊಂದು ವಿಸ್ಮಯಮೆ ವಿಭ್ರಮಲೇಖೆ ಮೃಣಾಳಲೇಖೆಯಂ ೮೯

(ಲೀಲಾವತಿ, ೭-೫೫)

ಸುದತಿಯ ದಿವ್ಯಗಂಧತನುಚಂದನ [೧]ಶಾಖೆ[೧]ಯೊಳಂಗಜಾಹಿಯಿ
ಕ್ಕಿದ [೨]ಪೊ[೨]ರೆಯಂತಿರುಟ್ಟದುಗುಲಂ ಕುಚಕೋಕಯುಗಂಗಳಡ್ಡಕ
[೩]ಟ್ಟೆ[೩]ದ ಬಿಸದಂತೆ ಹಾರಲತೆ ಕಣ್ಗೆ ಕರಂ ಸುಲಿಪಲ್ಲ [೪]ಪಂಕ್ತಿ[೪]ಯೊ
ಪ್ಪಿದುದು ಸುಧಾಂಶುಬಿಂಬವೆಳಮುತ್ತನೆ ಮುಕ್ಕುಳಿಸಿರ್ದುದೆಂಬಿನಂ ೯೦

(ಅರ್ಧನೇಮಿಪುರಾಣಂ ೨-೧೫)

ಕಡೆದನೊ ಚಂದ್ರನೀ ರಮಣಿಯಂ ಮದನಂ ಬಿಸಕಾಂಡಗರ್ಭದಿಂ
ಪಡೆದನೊ ಪದ್ಮಗರ್ಭನೆನೆ ಭೂಷಣವಸ್ತ್ರವಿಲೇಪನಾದಿಗಳ್
ಪಡೆಯೆ ವಿಲಾಸಮಂ ದಶನಸಂತತಿಯಿಂ ದರಹಾಸಲಕ್ಷ್ಮಿ ನೂ
ರ್ಮಡಿಸಿ ಬೆಡಂಗುವೆತ್ತುದು ನರೇಂದ್ರವರೂಥವರಪ್ರಸಾಧನಂ ೯೧

ಇಂದು ಕುಲಾಧಿದೇವತೆ ಮನೋಹರೆ ನಿರ್ಮಲಪೂರ್ಣಚಂದ್ರಿಕಾ
ಚಂದನದಣ್ಪು........ತಾರಕಸಂಕುಳ ಪುಷ್ಪಮಾಲಿಕಾ
ವೃಂದದ ಮಧ್ಯ ಪುಷ್ಪಧವಳಾಂಬರಮಂ ಮನವೊಲ್ದು ತಾಳ್ದದೇಂ
ಬಂದಳೆನಲ್ಕೆ ಬೆಳ್ಪಸದನಂ ಮೆಱೆದಿರ್ದುದು ತಲ್ಲತಾಂಗಿಯಾ ೯೨

ಮಿಸುಪದುಕೂಲ[೫]ಚೇಲದುಡೆ[೫] ಚಂದನಕರ್ದಮದಣ್ಪು ಮಲ್ಲಿಕಾ
ಕುಸುಮಮನಾಂತ ಕುಂತಳಭರಂ ಸುಲಿಪಲ್ಗಳ ಕಾಂತಿಯಿಂ ಬೆಳ
ರ್ತೆಸೆವಧರಂ [೬]ವಿರಾಜಿಸುವ[೬] ಮುತ್ತಿನ ಪಚ್ಚವನಂಗಕೀರ್ತಿಯಂ
ಪಸರಿಸಿಕೊಂಡ [೭]ಜೆಳ್ಪಸನಮೇಂ[೭] ಬಗೆಗೊಂ[೮]ಡು[೮]ದೊ ಕೋಮಲಾಂಗಿಯಾ ೯೩

(ಜಗನ್ನಾಥವಿಜಯಂ ೨-೭೧ ಸೂಕ್ತಿ ೭-೩೦)

ಇದು ಚಿತ್ರಂ ನಿಜ ಶೋಭೆಯೊಳೆ ತಾರಾಧೀಶನಂ ಗೆಲ್ದುದ
ಲ್ಲದೆ ತತ್ತಾರಕ ಚಂದ್ರಿಕೋಜ್ವಲಮುಮಂ ಮುಕ್ತಾಫಲಾಲಂಕೃತಾ
ಘದುಕೂಲಂಗಳಿನೇಕೆ ಗೆಲ್ದಪಳೆನಲ್ ತನ್ವಂಗಿಗಂ ಚೆಲ್ವುವೀ
ಱಿದುದೋ ಮುತ್ತಿನ ಪಚ್ಚಮುಂ ದುಗುಲಮುಂ ಮಾಂಗಲ್ಯ ಶೃಂಗಾರದೊಳ್ ೯೪

---

[೧]ಶೋಭೆ(ಸ) [೨]ಹ(ಅ) [೩]ಚಿರ್(ಅ) [೪]ಕಾಂತಿ(ಸ) [೫]ದುಳ್ಪುಡುಗೆ(ಸೂ) [೬]ತಳ
ತ್ತೞಪ(ಸೂ) [೭]ಬೆಳ್ಪಸದನಂ(ಸೂ) [೮]ದು(ಸೂ)

ತೊಳಗುವ ಮುತ್ತಿನೋಲೆಗಳ ಬೆಳ್ವೆಳಗಿಂ ಸುಲಿಪಲ್ಲ ಮಿಂಚಿನಿಂ
ಪೊಳೆವಲರ್ಗಣ್ಣ ನುಣ್ಗದಿರ್ಗಳಿಂ ತಿಸರಂಗಳ ನೀಳ ಥಾಳದಿಂ
ಬಳೆದೆಸೆದಿರ್ಪ ಸೆಳ್ಳುಗುರ ಪೆಯ್ವೆಳಗಿಂ ಮಿಗೆ ಪೆರ್ಮೆವೆತ್ತು ಕಂ
ಗೊಳಿಸಿದಳಾಕೆ ಪಾಲ್ಗಡಲ ಪೆರ್ದೆರೆಯೊಳ್ ಸಿರಿ ನಿಂದಳೆಂಬಿನಂ ೯೫

ಕುಂಜರದಂತದಿಂದೆಸೆವ ಮಂಚದೊಳೊಪ್ಪುವ ಹಂಸತೂಳತ
ಳ್ಪಂ ಜಿತಚಂದ್ರಿಕಾಪಟಲವೆಂದೆನೆ ಚಿತ್ರವಿತಾನದೇಱಿಗ್ಗಯಿಂ
ರಂಜಿಸೆ ಶಂಖದಿಂದೊರೆದ ಭಿತ್ತಿ ಸುಮೌಕ್ತಿಕದರ್ಪಣಂಗಳೊ
ಳ್ಪಿಂ ಜಿನವಕ್ತ್ರಮಂ ಬೆಳಗಲೇಂ ಮೆಱೆದಿರ್ದುದೊ ಸೆಜ್ಜೆಯಾಲಯಂ ೯೬

ಇರೆ ಕುಸುಮಮಾಲೆಯಲ್ಲಿಗೆ
ವರ ಮಧುಕರನೆಯ್ದೆ ಬರ್ಪ ತೆಱದಿಂ ಬಂದಂ
ಧರಣೀಶಂ ಸ್ಮರರಾಗಾ
ತುರಭರಿತಂ ರತಾರ್ಥಿ ಮೂರ್ತಿವಿಳಾಸಂ ೯೭

ಪೂವಿನ ಬಿಲ್ಲನೈಸರಲನಾವೆಡೆಯೊಳ್ ಮಡಗಿಟ್ಟು ಬಂದನೀ
ಭಾವಜನೆಂಬ ಕೌತುಕದಿನೋಡು ಸಖೀಜನಮೆಯ್ದೆ ದೂರದಿಂ
ಭಾವಿಸೆ ಮಂದಸಂಚರಣಚಾಲಿತಕುಂಡಲನೆಯ್ದೆ ಬಂದನಾ
ದೇವಿಯಿರ್ದ ತಾಣಕರಸಂ ಸರಸಪ್ರಣಯಾನುರಾಗದಿಂ ೯೮

ಉಗುರ್ಗಳ ನೀಳ್ದ ನುಣ್ಬೆಳಗು ಬಾಲಮೃಣಾಳಮನೀಯೆ ಮುತ್ತುಮಂ
ಚಗೆ ಕಡುಚೆಲ್ವ ಮೆಲ್ಲಡಿಯ ಕೆಂಬೆಳಪೊಂದಿದ ಜೆನ್ನ ತನ್ನ ಪಾ
ವುಗೆ ಪಳುಕಲ್ತು ಮಾಣಿಕದವೆಂಬ ನೆಗಱ್ತೆಯನಿಟ್ಟು ಪಜ್ಜೆ ಪ
ಜ್ಜೆಗೆ ಮಣಿನೂಪುರಂ ನೆಗಱೆ ಬಾಲಕಿ ಬಂದಳದೊಂದು ಲೀಲೆಯಿಂ ೯೯

ಲವಲವಿಸುವ ನೋಟಂ ಕೆ
ತ್ತುವ ತೋಳ್ ಕಂಪಿಸುವ ಹಸ್ತವೊಗೆವ ಬೆಮರ್ ಪೊ
ಣ್ಮುವ ಪುಳಕ ತೀವಿದಶ್ರುಗ
ಳವತರಿಸುವ ಗದ್ಗದಂ ಮನೋಹರಮಾಗಳ್ ೧೦೦

ಅಗಿಲುರೆ ಪಾಟಲೀಕುಸುಮಮಬ್ಜದಳಾಯುತ ಚೂತಪೂಗ ಮ
ಲ್ಲಿಗೆಯ ದಶಾಂಗಧೂಪದ ಮದಾಳಿಯ ವೈರಿಯೆನಿಪ್ಪ ನಾಗಸಂ
ಪಗೆಯ ಪೊದಟ್ಟೆ ಕತ್ತುರಿಯ ಸಾದು ಜವಾದಿ ಹಿಮಂಗಳಂದದಿಂ
ಮಘಮಘಿಸುತ್ತದೇಂ ನಿಱಿಯದುರ್ಚಿದುದಾ ಶತಪತ್ರನೇತ್ರೆಯಾ ೧೦೧

ಸುರತಾಸಕ್ತಂ ನಿಜೇಶಂ ಪಿಡಿದು ನಿಱಿಯನುರ್ಚಲ್ ಸರೋಜಾಕ್ಷಿ ಲಜ್ಜಾ
ಭರದಿಂ ತಾಂ ಮುಚ್ಚೆ ಕಯ್ಯೊಳ್ ಪೊಳೆವ ನಖಮಯೂಖಂ ಫಣಾರತ್ನವೆಂಬಂ
ತಿರೆ ಕಾಮಂ ಕಾಪುಗೊಟ್ಟೀ ಮದನನಿಧಿಗೆ ಪಂಚಮೋಗ್ರಾಹಿಯೆಂದೆಂ
ಬಿರವಂ ಪೋಲ್ತಿರ್ದುದಾ ಕೋಮಲೆಯ ಕರಿಕರಾಕಾರಮುಪ್ಪಾ ಕರಾಗ್ರಂ ೧೦೨

ಬಳಸುವ ಬೈವ ಬಗ್ಗಿಸುವ ಜತ್ತುವ ಬಾಯ್ದೆರೆನುಂಗುವಂತಿರ
ವ್ವಳಿಸುವ ಮುದ್ದುಗ್ಗೈವ ಮುಗುೞೊತ್ತುವ ಬೆಂಗೊಗೆವಕ್ಷಿಕಂಕಣಂ
ಗಳ ರುತಿಯುಣ್ಮಿ ಪಾಯ್ದುಗುವ ನಾಣೆಡೆಗೆಯ್ದುವ ಹಸ್ತಶಾಖೆ ಕಂ
ಟಳಿಸುವ ಗಂಡುಗೊಳ್ವಡರೆ ಜರ್ಬುವ ಪುರ್ಬೆಸೆಯಲ್ಕೆ ಕೂಡಿದರ್ ೧೦೩

ಬರೆತೆಗೆದಪ್ಪಿಯುಪ್ಪಿ ಮುದದಿಂ ಮೊಗದೊಳ್ ಮೊಗಮಿಕ್ಕಲಿಕ್ಕಿ ಸು
ಯ್ಯೆರಲೆಡೆಯಾಡೆ ಜಿಹ್ವೆ ನಲಿದಾಡೆ ಸುಖಂ ಸುೞಿದಾಡೆ ಲೀಲೆ ಮೋ
ಹರಿಸೆ ಗಳಂ ಚಮತ್ಕರಿಸೆ ಗದ್ಗದವಾಂತಿರೆ ಕಂಪನಂ ಕೊನ
ರ್ತಿರೆ ಪುಳಕಂ ನೆಗೞ್ತಿರೆ ಪರಸ್ಪರವಾರ್ತದೊಳೊಲ್ದು ಕೂಡಿದರ್ ೧೦೪

ಪ್ರಿಯದಿಂದೆ ಮನಂ ಮನದೊಳ್
ನಯನಂ ನಯನಂಗಳೊಳ್ ಮುಖಂ ಮುಖದೊಳಗಾ
ಸುಯಿ ಸುಯ್ಯೊಳ್ ಕೈ ಕೈಯೊಳ್
ಮೆಯ್ ಮೆಯ್ಯೊಳ್ ಬೆರಸಿ ಕೂಡಿದರ್ ದಂಪತಿಗಳ್ ೧೦೫

ಸುರತಸುಖಂ ತವಿಲಱಿಯದೆ
ಭರದಿಂದಮರ್ದಪ್ಪಿದಪ್ಪು ಸಡಿಲದೆ ತಮ್ಮೊಳ್
ಬೆರಸಿದ ಮೆಯ್ ಬಿಚ್ಚದೆ ಬೇ
ರ್ವರಿದ ಮನಂ ಬೇಱೆ ನೆನೆಯದಿರೆ ನೆರೆದಿರ್ದರ್ ೧೦೬

ಅರಳುತಿರೆ ನಯನಕುಮುದಂ
ಪೊರೆಯೇಱುತ್ತಿರೆ ತನುಪ್ರಭಾಕೌಮುದಿ ಕಾ
ಮರಸಾಬ್ಧಿ ಮಿಕ್ಕು ಮೀಱು
ತ್ತಿರೆ ನೆರೆದರ್ ಭರಿತಸುರತ ಚಂದ್ರೋದಯದೊಳ್ ೧೦೭

ಸ್ಮಿತಧವಳ ಕಮಲವನದೊಳ್
ರತಿರಾಗದಿ ಹಂಸಿ ಹಂಸನಂ ಸೋಂಕುವವೋಲ್
ವಿತತ ಸಿತಶಯನತಳದೊಳ್
ಪತಿಯೊಡನಾ ಕಾಂತೆ ಸುರತಸುಖದಿಂದಿರ್ದಳ್ ೧೦೮

(ಜಗನ್ನಾಥವಿಜಯಂ ೨–೭೫)

ಅಲರ್ಗಣ್ ಜೆಂಡೇಱಿ ರೋಮಾಂಚನದೊಡವಿನಿತುಂ ತಾಱುಥಟ್ಟಾಗೆ ಬಾಯೊಳ್
ಪಲವುಂ ನುಣ್ಮಾತುಗಳ್ ಲಾವುಗೆಯ ಕೊರಳನಲ್ಲಾಡಿದಂತಾಗೆ ಜುಮ್ಮೆಂ
ದೊಲೆದಂಗಂ ತೂಗೆ ಸುಯ್ಲ್ಲಂತೊಳಗಿಱಿಯೆ ಗಳಂ ಬೀಗೆ ನಾಣ್ ಸೂಸೆ ಕಾಮಂ
ಚಲದಿಂ ಕೈಮಿಕ್ಕಮಳ್ಜಂತ್ರಮನೆ ಕೆಡಪಿದಂತಿರ್ದರುಂ ಮೂರ್ಛೆವೋದರ್ ೧೦೯

(ಸೂಕ್ತಿಸುಧಾರ್ಣವಂ ೧೪-೭೬)

ಎಡಗಯ್ಯಂ ತಲೆಗಿಂಬಿನೊಳ್ ಮಡಗಿ ವೃತ್ತಂಬೆತ್ತು ಕೆಂಪಪ್ಪ ನು
ಣ್ಮಡಮಂ ವಾಮಪದಾಲಗುಪ್ತದೆಡೆಯೊಳ್ ಸೈತಿಟ್ಟು ಹಸ್ತಾಬ್ಜಮಂ
ಕಡು ಚೆಲ್ವಪ್ಪ ನಿತಂಬದೊಳ್ ನಿಲಿಸಿ ಕಿಂಚಿತ್ ಶ್ವಾಸದಿಂ ಕಂಠದೊಳ್
ತೊಡವಲ್ಲಾಡೆ ಮೃದೂಲತಲ್ಪದೆಡೆಯೊಳ್ ನಿದ್ರಾಂಗಿ ಕಣ್ಗೊಪ್ಪಿದಳ್ ೧೧೦

ಸುರಚಿರಮಾದ ದಂತವಸನಂ ನಸುಕೆತ್ತುವಿನಂ ಸಿತಾಕ್ಷಿ ನೀ
ಳ್ದರೆಮುಗಿದಿರ್ಪಿನಂ ಕವಪುಮುಂ ಬೆಮರೋಳಿಯನಾಂಪಿನಂ ಕುಚಾಂ
ತರದ ನಿಜೋತ್ತರೀಯವಸನಂ ತೊಲಗಿರ್ಪಿನಮುಲ್ಪಮಧ್ಯ ತಾ
ಳ್ದಿರೆ ಮೃದುತಲ್ಪದೊಳ್ ಮೆಱೆದಳಂಗನೆ ಮಂಗಲಮಾದ ನಿದ್ರೆಯಂ ೧೧೧

ಕಳಕಾಂಚೀಮಂಜುಮಂಜೀರಕವಳಯರವಂ ಪೊಣ್ಮೆ ನೇತ್ರಾಂಬುಜಂ ಸಾ
ಟಳಕಾಂತಿಶ್ರೀಯಿನೊಪ್ಪುತ್ತಿರೆ ತನುಲತೆ ಸೌರಭ್ಯಮಂ ಬೀಱಿ ಸೂಸಿ
ರ್ದಳಕಂ ಜೋಲ್ದಿರ್ದ ಬಂಬಲ್ಮುಡಿ ಶಿಥಿಲತೆವೆತ್ತಿರ್ದ ನೀವೀಭರಂ ಕ
ಣ್ಗೊಳಿಪನ್ನಂ ಲೀಲೆಯಿಂದುಪ್ಪವಡಿಸಿದಳೆ ನಿದ್ರಾಂಗಿ ಶಯ್ಯಾಗ್ರದಿಂದಂ ೧೧೨

(ಜಗನ್ನಾಥವಿಜಯಂ ೨-೭೮)

ಸಾನಂದದಿನೆಟ್ಟಿತ್ತಂ
ಭೂನಾಥಂ ಮಾಣದೆದೆಯನುರ್ಚುವ ಮದನಾ
ಸ್ತ್ರಾನೀಕದಿನೆಟ್ಟಿತ್ತಂ
ತಾನೆನೆ ಮೈಮುರಿದು ನಿದ್ರೆಯಿಂದೆಟ್ಟಿತ್ತಂ ೧೧೩

ದ್ಯುತಿಧೌತವ್ಯೋಮಚಂಡಾಂಶುವನಮಲಸುಧಾಸೂತಿಯಂ ದರ್ಪದ್ಯೈರಾ
ವತಮಂ ಪ್ರೋದ್ದಾಮಹೇಮಾಚಲಮನಭಿನುತಾಂಭೋಜಮಂ [1]ತುಂ[1]ಗದುತ್ತುಂ
ಗತರಂಗಾಂಬೋಧಿಯಂ ಸತ್ಫ[2]ಳ[2]ಕಳಿತ ಸುರೋರ್ವೀಜಮಂ ಶೈಲಶೃಂಗ
ಸ್ಥಿತ ಗರ್ಜತ್ಸಿಂಹಮಂ ಸ್ವಪ್ನದೊಳತಿಮುದದಿಂ ದೇವಕೀದೇವಿ ಕಂಡಳ್ ೧೧೪

(ಜಗನ್ನಾಥವಿಜಯಂ ೨-೭೬)

---

[1]ತ್ವಂ(ಅ) [2]ಲ(ಅ)

ಸರಸಿಜನೇತ್ರೆ ಕೇಳ್ ತರಣಿತೇಜನೆ ಪೇಟ್ ಕುಮುದಾಕ್ಷಿ ಕೇಳ್ ಮೃಗೋ
ದರಯಶ ಪೇಟ್ ಮಯೂರಕಚೆ ಕೇಳ್ ಗಿರಿಸನ್ನಿಭಧೈರ್ಯ ಪೇಟ್ ದಿಶಾ
ಕರಿಗಮೆ ಕೇಳ್ ಮದೋದ್ಧರಿತಯುಸ್ವನ ಪೇಟಳಿಮಾಲಿಕುಂತಳೋ
ತ್ಕರಭರೆ ಕೇಳ್ ಸುಗಂಧಗುಣವಾಸಿತ ಪೇಟಿಱನೆ ಮೆಚ್ಚಿದಂ ನೃಪಂ ೪೬೦

ಅಳಿಯಳಿಕದ ಗಜಗಮನೇ
ನಳಿನಮುಖಿ ಪೇಟು ನಿನಗೇಂ ಪೊತ್ತೆಯದೇನೆನ
ಲೊಳು ಸಂಪಗೆ ಮಱಿಸಿಂಹವು
ಕಳೆಯಾಣ್ಮಂ ಕುಳ್ಳಿರೆನಲು ಚದುರಂ ಪೋದಂ(?) ೪೬೧

ಗಿಳಿಗಳ್ ಚುಂಬಿಸಿ ಬಿಟ್ಟ ಚೂತಫಲಮಂ ಕಾಕಾಳಿಗಳ್ ಮುಟ್ಟವೇ
ಕಳೆಯಂ ನಿರ್ಜರರುಂಡು ಮಿಕ್ಕ ಶಶಿಯಂ ಬೆಳ್ಳಕ್ಕಿಗಳ್ ಪೀರವೇ
ಅಳಿಗಳ್ ವಾಸಿಸಿ ಬಿಟ್ಟ ಪುಷ್ಪಚಯಮಂ ಕಾಟ್ಮಿಕ್ಷುಕಂ ಸೋಂಕವೇ
ಸಲೆ ಸತ್ಕೋವಿದ ಕೂಡಿ ಬಿಟ್ಟ ಸತಿ ತಾನೇನಾದೊಡಂ ಭಂಗವೇ ೪೬೨

ವಾರಿಜನೇತ್ರೆ ಭೃಂಗಕುಟಿಲಾಳಕಿ ಚಂದನಗಂಧಿ ನಿನ್ನೊಳಂ
ಕೂರುಮೆಯಿಂದ ಕೂಡಿದ ಕಲಾಕುಶಲಜ್ಞನದಾವನೆಂಬುದಂ
ಮಾರನ ಪಟ್ಟದಾನೆ ಮಱಿಯೇತಕೆಯೆನ್ನೊಳು ಪೇಟ್ವುದೆಂದೆನಲ್
ಸೇರಿದ ಮೂಱುಪಾದದವ ರೋಹಿಣಿಯಾಣ್ಮನ ಮುಂದೆ ನಾಲ್ಕಱಂ ೪೬೩

ಭಾವಕಿಯಾಗಿ ರೂಪವತಿಯಾಗಿ ಗುಣಾನ್ವಿತೆಯಾಗಿ ನಲ್ಮೆಯೊಳ್
ಕೋವಿದೆಯಾಗಿ ಸತ್ಕಲೆಯ ಬಲ್ಲವಳಾಗಿ ಕುಲೀನೆ ಕೂರ್ಮೆಯಂ
ತೀವಿದಳಾಗಿ ಲೇಸಿನವಳೊಬ್ಬಳೆ ಸಾಕುವನೇಕವೇತಕೋ
ಸಾವಿರ ಗಾಜುಗಟ್ಟುವುದಱಂ ನವಮೌಕ್ತಿಕಮೊಂದೆ ಸಾಲದೇ ೪೬೪

ಮದನವಿಲಾಸೆ ಮನ್ಮಥಕಲಾನಿಧಿ ಮಾನಿನಿ ರನ್ನೆ ಬೇಗದಿಂ
ಸುದತಿಯಿದೆಲ್ಲಿಗೈದಿದಪೆಯೆಂದೆನುತೊರ್ವಳ ಕೇಳಲೊಬ್ಬ ಸ
ನ್ಮುದ ಮಿಗೆ ನಲ್ಲ ನಿನ್ನನಱಸುತ್ತಮೆ ಬಂದೆನು ಬೇಗ ಬಾರೊ ನೀಂ
ಸದನಕೆ ಪೋಪೆಪೆಂದು ಕುಡಿಕೈವಿಡಿದೊಯ್ದಳು ಭದ್ರಶಾಲೆಗಂ ೪೬೫

ಪೊಸತೊಂದಂ ತೀವಿ ಮತ್ತಾ ಕರಡಗೆಯ ಬಹಿರ್ಭಾಗದೊಳ್ ಕಾಂತೆಯೊರ್ವಳ್
ಸಸಿಯಂ ಸೂಡಿದ್ದನಂ ಚಂಪಕಮನಹಿಯನುಲ್ಲೇಖನಂ ಗೆಯ್ದು ತನ್ನಾ
ಪ್ತಸಖೀಹಸ್ತಾಬ್ಜದಿಂದಟ್ಟಲವಳದನೆ ತಂದೀಯೆ ನೋಡುತ್ತೆ ಬೇಗಂ
ವಸುಧೀಶಂ ತಾನೆ ಬಂದಂ ಸುಗುಣರಱವುದಾ ವಸ್ತುವೇನೆಂಬುದೆಂದುಂ ೪೬೬

ಅಂಗನೆಯಲ್ಲಿಗೊರ್ವ ವಿರಹಾತುರನಾಗಿಯೆ ಪೋಗಲಾಕೆಯೊಳ್
ಸಂಗಮವಾಗಲೆಂದು ವಿಟಪೋಗಿ ಮಗುಳ್ದಿತಿಪ್ಪೈನ್ಯಭಾವದಿಂ
ದಂಗನೆಯುಂಗುಟಾಗ್ರಮವನೆಚ್ಚಲು ಜೇಡೆನುತಾಕೆ ಬಾಗಲಾ
ವುಂಗುಟದಲ್ಲಿ ಮೀಸೆ ಮೊಲೆ ಜೆನ್ನಲಿ ಮೂಡಿದುದೇಂ ವಿಚಿತ್ರಮೋ ೪೬೭

ಚಿತ್ರಜನೊಲ್ದು ಕಾಮರಸದೊಳ್ನವಕಾಂಚನಕುಂಭಯುಗ್ಮಮಂ
ತೆತ್ತಿಸಿದಂದಮಪ್ಪ ಕುಚದಾ ಲಲಿತಾಂಗಿನಿ ದಿವ್ಯರೂಪದಿಂ
ಪಿತ್ತಿಲೊಳೆಯ್ದೆ ಮೀವುತಿಹ ಕಾಮಿನಿಯಂ ನಿಜನಲ್ಲ ಕಾಣುತಂ
ಬತ್ತಲೆ ಕೊಂದುಕೂಗುವವಳುಟ್ಟರೆ ತೊಟ್ಟರೆ ಬಾಟಲೀವಳೇ ೪೬೮

ಅಳಿಗುರುಳೊಗ್ಗಿನಿಂ ನಿಮಿರದಂಗನೆಯೊಳ್ನಡು ಬಳ್ಕದನ್ನೆಗಂ
ಕಲಶಕುಚದ್ವಯಂ ಮೊಳೆಯದಂಗನೆ ಲಜ್ಜೆ ಮುಸುಂಕದನ್ನೆಗಂ
ತೊಳಗುವ ರೂಪು ಕಣ್ಣ ಬಜಿನಂ ಪಱವುತ್ತಿದೆ ನೋಟಱೀಪ್ಪಡಿಂತಿವಳ್
ಮೊಳೆಯೊಳೆ ಕೊಂದುಕೂಗುವವಳೇಟಱೀಲೆಯಾದೊಡೆ ಬಾಟಲೀವಳೇ ೪೬೯

ನಡುವಂ ಪೆರ್ಮೊಲೆಯಂ ಸುಧಾಧರಮುಮಂ ವಿಭ್ರಾಜಿತಭ್ರೂಗಳಂ
ನಡೆನೋಡಲ್ಕೆ ನಿಜಾಕ್ಷಿ ಸಾಲದೆನುತಂ ಪಿಂಭಾಗಮಂ ತೋರ್ಕೆ ಸೋ
ಮರ್ುಡಿಯೊಳ್ಕಂಪು ಕಟೀತಟಂಗಳಿಂಪು ನೋಡಲ್ ಸಾಲಪೇ ಗಂಗೆಗೀ
ತಡಿಯೇನಾ ತಡಿಯೇನಿದಕ್ಕೆ ಪುರುಡೇ ಪಂಕೇಜಪತ್ರೇಕ್ಷಣೇ ೪೭೦

ಇನಿಯನುಮನ್ಯಕಾಮಿನಿಯು ನೆತ್ತವನಾಡುತಿರಲ್ಕೆಯಲ್ಲಿಗಾ
ಘನಕುಚೆ ಬಂದು ಬಾರೆನಲು ಬಂದಪೆ ನಿಲ್ಲೆನೆ ಜೆನ್ನಮೇಲೆ ಕಂ
ಬನಿಯುಗೆ ಪೋಗು ನೀನೆನಲು ಬಂದುದು ದೂರವೆನಲ್ಕೆ ಮೆಚ್ಚಿಯಾ
ವನಿತೆಯ ಹಸ್ತಮಂ ಪಿಡಿದು ಮೇಳದೊಳೊಯ್ದನು ಭದ್ರಶಾಲೆಗಂ ೪೭೧

ಮೊಗಮಂ ಚುಂಬಟಮಾಡಿ ನೋಡಿ ಪಿಡಿವಳ್ ವಸ್ತ್ರಾಗ್ರಮಂ ಕಿಂಚಿತುಂ
ನಗುವಳ್ ಬಾಗಿಲೊಳಡ್ಡಬಂದು ಕರುಣಂ ಸಾರ್ವನ್ನ ತಱಕ್ಕೈಸುವಳ್
ಬಗೆದುಂ ನೋಡದೆ ಪೋದೆ ಪಾಪಿಯೆನುತಂ ಕಣ್ಣೀರ್ಗಳಂ ತುಂಬುವಳ್
ಮೃಗಶಾಬೇಕ್ಷಣೆ ಮುನ್ನ ಬಿಟ್ಟಳಸುವಂ ಬಿಟ್ಟಳ್ ಬಱೀಕೋಪನಂ ೪೭೨

ಮೊಲೆಯೆಂಬುನ್ನತ ದುರ್ಗಮಿರ್ದು ಭುಜಮೆಂಬಾ ತಾಡಿಲಾಗಿರ್ದು ತಾಂ
ಸಲೆ ಪುರ್ಬೇಱೀಸಿನಚ್ಚಬಿಲ್ಗೆ ತೊಡರ್ದಾ ಕಣ್ಣಂಬು ತಾನಿರ್ದು ಹೋ
ಕಲಹಂ ಬಂದೊಡೆ ಜಿಂಗೊಡಲ್ಕುಚಿತಮೇ ಮತ್ಕಾಂತೆಯೆಂದೆಂಬ ಕಾ
ದಲನಂ ಕೂರ್ತಿದಿರಾಗಿ ಬಂದು ರತಿಯುದ್ಧಂ ಮಾಳ್ಪಳೇಂ ಮುಗ್ಧೆಯೋ ೪೭೩

ಒಡವೆರಸಿರ್ದು ಪೇರ್ವರಿದ ಮೋಹಮನಕ್ಕಟ ಕಾಣುತನ್ಯರಿ
ಟ್ಟುಡುಗದ ಮಾತ ಕೇಳಿ ಮನದಲ್ಲಿ ವಿಚಾರಿಸಿ ನೋಡದೆನ್ನ ನೀಂ
ಬಿಡುವರೆ ಸತ್ಕಲಾಕುಶಲಕೋವಿದರಂ ನೆನೆಯೆಂದದೊಂದು ಪ
ಚ್ಚಡದೆಣೆಯಿತ್ತುವೊಂದ ಪೊದಿಯಲ್ಕದು ಸೇರಿಪುದೇ ಮನಃಪ್ರಿಯಾ ೪೭೪

ಪದೆದಾಳೋಕಿಸುವಲ್ಲಿ ಮುದ್ದುವೊಗದೊಳ್ ಲಜ್ಜಾರಸಾಭಾವಮಿ
ಲ್ಲದೊಡಂ ತಳ್ತಮರ್ದಪ್ಪುವಲ್ಲಿ ಪುಳಕಂ ಸ್ವೇದಾಂಬುವಂ ತಳ್ತು ಪೊ
ಣ್ಮದೊಡಂ ಚುಂಬಿಸುವಲ್ಲಿ ಕಾಮರಸಕೂಪಂ ತೀವಿ ತಳ್ಳಂಕಗೊ
ಳ್ಳದೊಡಂ ಪೆಂಡಿರೊಳಾದ ನಲ್ಮೆಯನದೇನೆಂಬೆಂ ಸರೋಜಾನನೇ ೪೭೫

ನೋಟದಿ ಕೂರ್ಮೆಯಿಲ್ಲ ನುಡಿಯೊಳ್ ಪಟುವಾತಿನ ಜಾಣ್ಮೆಯಿಲ್ಲ ಚೆ
ಲ್ವಾಟದೊಳಿಲ್ಲ ದಟ್ಟಡಿಕೆ ರೂಪಿನೊಳಿಲ್ಲ ವಿಲಾಸವಿಭ್ರಮಂ
ಕೂಟದೊಳಿಲ್ಲ ತೆಕ್ಕೆಯ ಗಳಧ್ವನಿ ಚುಂಬನ ಲಲ್ಲೆ ದೈನ್ಯ ಚಿಃ
ಮಾಟದ ಬೊಂಬೆಯಂತೆಸೆದು ಸೂಳೆಯೆಂಬೊಡೆ ಲಜ್ಜೆಯಿಲ್ಲವೇ ೪೭೬

ಮಿಸುನಿಯೊಳಚ್ಚಪೊಚ್ಚಪೊಸಬಣ್ಣದ ತಿಣ್ಣದ ನುಣ್ಣನಪ್ಪ ಕ
ಕ್ಕಸದೊಳಗುಕ್ಕಿ ಸೊಕ್ಕಿ ಮಲೆದುರ್ಬಿದ ಕೊರ್ಬಿದ ಪರ್ಬಿದೊತ್ತಿದಾ
ಮಿಸುಪಳವಟ್ಟ ಬಟ್ಟವೊಲೆಯಂ ನಸುದೋಱುತ ಮೂಱುಲೋಕಮಂ
ವಶಿಯಿಪ ಯವ್ವನಾಂಗಿಯರನಂಗನ ಸಾಹಸದಂತಿರೊಪ್ಪಿದರ್ ೪೭೭

ತೊಡೆಯೆಡೆಯಲ್ಲಿ ಕುಳ್ಳಿರಿಸಿ ಕುಂಕುಮದಣ್ಪ ಕುಚಕ್ಕೆ ಲೇಪಿಸು
ತ್ತೊಡನೊಡನಿಲ್ಲದಪ್ಪಿಯಧರಾಮೃತಮಂ ಮಿಗೆ ಪೀರ್ದು ಪೀರ್ದು ನಾ
ಣ್ದುಡುಕಿಯನಂತಮಾದ ರತಿರಾಗಮನೆಬ್ಬಿಸಿ ಮೇಲೆ ಕೂಟದಿಂ
ಗಡಲೊಳಗದ್ದಿದಾ ವಿಟರನೀಕ್ಷಿಸುತೆಯ್ದಿದನಾ ನೃಪಾಲಕಂ ೪೭೮

ಪೊಂಗುವ ಚಿತ್ತ ಚಿತ್ತದೊಳಡಂಗಿದ ನೇಹ ನೇಹದೊಳ್
ಪಿಂಗದಡಂಗಿ ತೋರ್ಪ ಮನವಾ ಮನದೊಳ್ಮಿಗೆ ಭಾವ ಭಾವಮಂ
ನುಂಗಿದುದಾತ್ಮನುಂ ಪರಮನೊಳ್ ನೆರೆವಂಗನೆಯೇತಕನ್ಯಕೃ
ತ್ಯಂಗಳ ಮೋಹವೀ ತುರಿಯಕಂತರಿಯಾಮದನಾಗಮಂಗಳೊಳ್(?) ೪೭೯

ಬಲಿದಿರವಕ್ಷಿ ಭಾವಿಸದವೊಳ್ನುಡಿಯುರ್ಬಿದ ರೋಮ ತಕ್ಕೆಯೊಳ್
ಬೆಳೆಯದ ಕಾಯ ಕಾತರಿಸದಿಂದ್ರಿಯವೊಂದದ ಚಿತ್ತ ತಲ್ಲಣಂ
ಮೊಳೆಯದ ತೋಟಿ ಕಾಮರಸಮುಣ್ಮದ ನಾಣು ಕಲಾವಿಲಾಸಗೊ
ಳ್ದೊಲಿಸದ ಕೂಟಮೇಂ ಭವದ ನಾಗರಕಾಟಮದಾಗದಿರ್ಕುಮೇ ೪೮೦

ಪುರುಡಿಸಿ ಬಯ್ವುದ್ದ ಪೊಯ್ವುದ್ದ ಕೆಟಿಲ್ಪುದ್ದ ತೊಟಿಲ್ಪುದ್ದ ಜೋಲ್ವುದ್ದ ತಾ
ನಿರದೆ ಬೆನುರ್ತರ್ಜ ಕೊರ್ತರ್ಜ ಕರಮುಟ್ಟಿ ಸಿಡಿಲ್ವುದ್ದ ಕನಲ್ದೊನಲ್ವುದ್ದ ಕಾ
ತರಿಸುವ ತಟ್ಟಿಮುಟ್ಟಿ ಪಡಿಪಟ್ಟುಮುವ್ರಂಕಿಯೆ ಸೊಂಕಿ ತೇಂಕಿ ತಾಂ
ನೆರೆವ ಲತಾಂಗಿಯೊಳ್ ನೆರವುಮಿಲ್ಲದ ಸೋಂಕು ಕನಿಷ್ಠಮಾರೊಳಂ ೪೮೧

ಮಲಯಜರೇಣುಜಾಲ ಪರಿಪಾಂಡುರಮಾಯ್ತು ಕುಚದ್ವಯಂ ವಿಕ
ಜ್ಜಲಕೃತಲೇಖನಾರಚನಮಾದುದು ಲೋಚನಯುಗ್ಮಮೆಯ್ದೆ ನಿ
ರ್ಗಲಿತ ಸರಾಗಭಾವಮೆನಿಸಿತ್ತು ರದಚ್ಛದಬಿಂಬಮುಮಂ
ಡಲಲಲಿತಾಸ್ಯೆ ಪೇಟ್ ನಿಜಮನಃಪ್ರಿಯನಪ್ಪಿದನೋವಗಲ್ದನೋ ೪೮೨

ಬಗೆ ನಗೆಯೊಲ್ಮೆ ನಲ್ಮೆ ಪೊಸಜಾಣ್ಮುಡಿ ಪುರ್ಬುರ್ಜ ಜರ್ಬುರ್ಜ ಕೆ
ಮ್ಮಗೆ ಮಿಗೆ ಕೆಲ್ಲೆನೋಟಮೊಡಗೂಟದಬೇಟಮೆ ಕೂರ್ಮೆರ್ಜ ಪೆರ್ಮೆರ್ಜ ಪೊ
ರ್ದುಗೆಯೊಗೆದಿಚ್ಛುಮುಚ್ಛು ವಿಟರಂ ಕೊಱಚಾಡುವ ಪಾಡ ಗಾಡಿಯೆಂ
ಬಗಣಿತ ಚೇಷ್ಟೆಗಳ್ ಮೆಱೆದಿರಲ್ ತಱಿಸಲ್ಪದು ಸೂಳೆವಿದ್ಯೆಯೊಳ್ ೪೮೩

ಕಸ್ತುರಿಕರ್ದಮಾಂಗ ಜಳಕಪ್ರಿಯ ಚಾಮರನಿತ್ಯಶೋಭಿತಾ
ಮತ್ರಮನೋನುರಾಗ ಮಲಿತಾಹವಶೂರ ಸನಾದಮೋದನ
ವ್ರ್ಯೋತ್ತರ ಕೋಡುಗಯ್ಯಚತುರಾಗಮುಲೋಲ ಮಹಾಮಹೀಶ ನೀ
ನುತ್ತಮನೆನ್ನುತೋರ್ವರ್ಜ ಸತಿ ಬಣ್ಣಿಸಿದಳ್ ವಿಟನಂ ವಿಚಿತ್ರದೊಳ್ ೪೮೪

ಘನಶಿಶಿರೋಪಚಾರವಿ[೧][ಧ]ದಿಂ ಹೃದಿಯುಸ್ಥಿತನಾದ ದೇವ ನೀಂ
ನೆನೆದವಳಬ್ಜಚಂದನದಳಂಗಳಿನರ್ಚಿಸಿ ನಿನ್ನ ರೂಪಭಾ
ವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯನ್ಯೆಷ್ಟಬಟ್ಟೆ[೨]ಯಂ
(ಅನವರ)[೨]ಮಾಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ ೪೮೫

ಪಗಲೊಳೆ ಚಂದದಿಂ ಮಲಗಿ ಹೂವಿನ ಹೊತ್ತಿನೊಳೆಟ್ದು ತನ್ನ ಮೆಯ್ಯ್
ನೊಗಮೊಳೆಯುತ್ತ ಕತ್ತುರಿಯ ಬೊಟ್ಟೊಡನಿಟ್ಟುಱಿ ಯವ್ವನೋನ್ಮದಂ
ಜಗಕತಿರೂಪನುರ್ಕೆ ಗತರಾತ್ರಿಯ ಕೂಟದ ಕೊರ್ವೊರ್ಜ ನಿಪ್ರೆಯೋ
ಸೊಗಸಿನ ಸೊರ್ಕು ನೋಡೆ ಮೊಗದಲ್ಲಿರಮೊರ್ವಳಮೊತ್ತೆಗೆಯ್ವಿದಳ್ ೪೮೬

[೧]ಕ್ಷ(ಸ) [೨]ನಾನನಿಶಯ(ಸ)

ನಿಗಳಝಣತ್ಕೃತಿಪ್ರಚಯವಾ ನೆಲನಳ್ಳಿಱಿಯಲ್ ತುಱುಂಬಿನಾ
ಸೊಗಸುವ ದಾನಕೆಱಗಿರ್ದಳಿ ಝೇಂಕೃತಿ ಭೋಂಕನೊಪ್ಪೆ ಮು
ತ್ರಗಿಱಿಪೆ ಕೂಡಿಬರ್ಪ ವಿಟಜೋದರ ಹೊಂಗವೆಗೋಲ್ಗಳಿಂಚರಂ
ನೆಗೞ್ದಿರಲೊರ್ವಳಂಗಜನ ಪಟ್ಟದ ಮತ್ತಗಜಂಬೊಲೆಯ್ದಿದಳ್ ೪೮೭

ಘಟಕುಚೆಯೇನು ನಿಂದೆಯುಡಿಗೆಟ್ಟೊಡೆ ಕೆಟ್ಟುದನುಂಟುಮಾಡುವೆಂ
ವಿಟತನದಿಂದೆ ಮಾಡುವುದು ಸಲ್ಲದು ನಿನ್ನೊಳೆ ಸಂದುದೆಂಬುದಂ
ಕಟಕಿಗಳಿಲ್ಲದೇ ಸಖರ ಕೇಳ್ವುದು ಕೇಳಲದೇಕೆಯೆನ್ನ ಸ
ದ್ವಿಟತನಕೆಂದೊಡಾಕೆ ಮಿಗೆ ನಕ್ಕೊಡೆ ನಕ್ಕುದು ತತ್ಸಖೀಜನಂ ೪೮೮

ಹೂವಿನ ಕೋಲ ಹಮ್ಮು ಬಲಗೆಯ್ಯೊಳೆ ಬಂದು ಬೆಡಂಗನೀಯೆಯಾ
ಕಾವನ ಹೊಂತಕಾರ್ತನದೊಳಾವೆಡೆ ಹೋರುವ ಹಾವಭಾವವೆ
ಯ್ದಾವರಿಸಲ್ಕೆ ತುಂಬಿಗಳ ಬಂಬಲವಾ ತಳೆಯುತ್ತೆ ನೆತ್ತಿಗೊ
ಲ್ದೋವುದು ಕಂಡು ಕೈವಿಡಿದು ಸದ್ಘನವಾಸವನೆಯ್ದಿದಂ ವಿಟಂ ೪೮೯

ಪರಿರಂಭಾರಂಭಣದಾ
ಮರಸಮಯದೊಳಂ ಮನೋಹರಂ ವ್ಯಾಜದೊಳಂ
ವಿರಹದೊಳಂ ತನ್ನನಿಯಂ
ಬರೆ ಕಂಡಾಯಬಲೆಗೆಂತು ನಿಲ್ವವು ಬಳೆಗಳ್ ೪೯೦

ನಲ್ಲನು ಪೋದಪನೆನಲಾ
ನಲ್ಲಳ ಕೈಬಳೆಗಳೆಲ್ಲ ಘಲಘಲನುದಿರ್ದವು
ಯಿಲ್ಲಿಲ್ಲ ನಿಂದನೆನಲಾ
ಗಲ್ಲಿಯ ಕೈಬಳೆಗಳೆಲ್ಲ ಛಿಳಛಿಳಿಲೆಂದೌ(?) ೪೦೧

ಮೆಚ್ಚಿದ ಕಾಂತೆ ನಲ್ಲನೊಡನೊಲ್ದುರೆ ಮಾಳ್ಪ ಮಹಾರತೇಚ್ಛೆಯಂ
ದುಚ್ಚಹಮಾಗಿ ಸಾಸಿರಮುಡೆಂದೆನೆ ಕೂಡುತೆ ಕೂಡಿ ಸುಯ್ದು ಮೆ
ಯ್ವೆಚ್ಚನಿರಲ್ ತದಾಪ್ತನರಿದೆಂಬೊಡಾತನ ಮೆಯ್ಗೆವೆಂಕೆ ಕೂ
ಡಚ್ಚರಿಯಿಂದ ತೋಱಲವರೀರ್ವರ ಕೂಟಮದೇಂ ವಿಚಿತ್ರಮೋ ೪೯೨

ಮೆಚ್ಚಿದನೆಂಬುದೇ ಸತಿಗೆ ಹೂಸಕವೆನ್ನಯ ಜೀವಕಾಂತೆ ಕೇಳ್
ಬಿಚ್ಚದ ತಾಯನಾರಯದೆ ಬೈವರನಾಲಿಸದೊಲ್ದು ಬಂದ ಪೊ
ನ್ನಿಚ್ಚೆಗೆ ಚಿತ್ರಮಂ ಕುಡದೆ ಹೆಚ್ಚಿನ ಮಾತುಗಳಿಲ್ಲದಾ ಪ್ರಿಯಂ
ಬೆಚ್ಚುವನಲ್ಲಿ ನಲ್ಮೆ ದಿಟಮಲ್ಲವೆ ನಲ್ಮೆಯು ಕರ್ಪೊ ಬೆಳ್ಪೊ ಪೇೞ್(?) ೪೯೩

ಪ್ರಿಯ ನಿನ್ನೊಂದೊಡಗೂಡಿದಂದಿನ ದಿನಂ ತಾನಿಂದುಪರ್ಯಂತರಂ
ನಯದಿಂದಾ ರತಿಸೌಖ್ಯಮಂ ಪಡೆದ ಕಾಮಬ್ರಹ್ಮನಾ ಕೂಟಮಂ
ಜಯದಿಂ ರಕ್ಷಿಪ ಚೈತ್ರಮಾ ಪ್ರತಿ ಸುಸಿಲ್ಗಂ ಬರ್ಪ ವಿಘ್ನಂಗಳಂ
ಭಯಗೊಳ್ವಿಕ್ಕುವ ಪದ್ಮವೈರಿಧರನಿನ್ನಂ ಬಾಟಿಕ್ಗೆ ನಿತ್ಯತ್ವಮಂ ೪೯೪

ಪೊಸಪೊಸ ಮೆಯ್ಯ ನುಣ್ಪು ಪೊಸಕತ್ತುರಿ ಕುಂಕುಮದಣ್ಪು ಚಂದದಾ
ಪೊಸಪೊಸ ಮಾಲೆಗಂಪು ಪೊಸಕಪ್ಪುರದಂಬುಲದಿಂಪುನಾವಗಂ
ಪೊಸತೆನೆ ಮಾಟ್ಪಿ ಪೆಂಪು ಪೊಸಕೂಟದ ಸೌಖ್ಯದ ಸೊಂಪು ಚೆಲ್ವಿನಿಂ
ಪೊಸಪರಿ ಸೂಳೆಗೇರಿಯೊಳಗಿಂತವರೀರ್ವರೊಳುಂಟು ನಿಚ್ಚಲುಂ ೪೯೫

ಸವಿಯೆಲ್ಲಂ ತನು ನುಣ್ಪುವೆತ್ತ ತನುವೆಲ್ಲಂ ಸೌಖ್ಯಮಾ ಸೌಖ್ಯಮೆ
ಲ್ಲವನೀ ಮೋಹನಮೆಯ್ದೆ ಮೋಹನಮದೆಲ್ಲಂ ವಶ್ಯಮಾ ವಶ್ಯಮೇ
ಯುವೆಯಂ ಮುಟ್ಟಿಸದೆಲ್ಲರಂ ಬರಿಪ ಮಂತ್ರಂ ಮಂತ್ರವೆಲ್ಲಂ ಧನಂ
ತವೆ ಸಂದಿರ್ದ ಧನೌಘಮಿವಳೀ ಕಣ್ಸನ್ನೆಯೊಳ್ ಬಾರದೇ ೪೯೬

ಈಕೆಗೆ ಸಂದ ನಲ್ಲನಿವಳಿಕ್ಕೆಯೊಳೊಲ್ದಿರೆಯೊರ್ವನೊತ್ತೆಯಂ
ಜೋಕೆಯ ದೂತನಿಂ ಕಳುಪಲಂತದನಾ ಮನೆವೆಣ್ಗಳೀಕೆಗಂ
ತಾಕಿಸೆ ಗೋಪ್ಯದಿಂದಱುವುತಾತನ ಸ್ನೆಗುರೆ ಪುಷ್ಪಮಾಲೆಯಂ
ನೂಕೊಡವೇಟ್ಟು ಪೋಗಲವನೊತ್ತೆಯ ನಾಂ ತಳೆದೇಂ ಸುಜಾಣೆಯೊ ೪೯೭

ಸೂಳೆತನಕ್ಕೆ ಸೂರುಳಿಪರಕ್ಕಟ ನೀಂ ಸಲೆ ನೀಱರಾದವರ್
ತೋಳೊಳಗಿರ್ದ ಕಾಲದೊಳೆ ತನ್ನವಳೆಂದಿರವೇಟ್ಕು ಸೂರುಳಿಂ
ಸೂಳೆಗೆ ಕೇಡು ತಾನದನೆ ತೊಟ್ಟನೆ ತಪ್ಪೆ ಬರ್ದುಂಕು ಭಾವಿಸಲ್
ಸೂಳೆಯೆ ಮಾರಿ ಮಾರಿಗೆ ಕರಂ ಸಲೆ ಮಾರಿಯದುಂಟೆ ಲೋಕದೊಳ್ ೪೯೮

ಇಂದಿರನಾನೆ ಸೂರ್ಯರಥಕಿಕ್ಕಿದ ತೇಜಿಗಳೆಯ್ದೆ ಬಾಗಿಲೊಳ್
ಚಂದದಿ ಕಟ್ಟೆ ಕೌತುಕದಿ ಮೋಯುತಿರಲ್ಕೆ ವಿಟಾಳಿ ಕಾಣುತೀ
ಸೌಂದರಿಗಾವುದೊತ್ತೆ ಯಿವಳಾರ ನಿರೀಕ್ಷಿಪಳಾರನೊಲ್ದಪಳ್
ತಂದೊಡನೀಯೆ ಪೆರ್ದೊಱೆಯ ಮರ್ದಿನ ಗಾದೆಯನಾಡುತೆಯ್ದಿದರ್ ೪೯೯

ಊರ ಭುಜಂಗರೆಲ್ಲರುಱೆ ಬೇಟ್ಪುದನಿತ್ತಪೆವೆಂದು ಕೇಳಿಸಲ್
ದೂರದ ರಾಜಪುತ್ರರಿರದೆಯ್ದುತಲೊತ್ತೆಯಮೇಲದೊತ್ತೆಯಂ
ಸೇರಿಸಲಾ ವಿಟಾಳಿ ಮುನಿದೀ ಪುರಮಂ ಬಿಸುಟೆದ್ದ ಸಿದ್ಧರೊಳ್
ಸೇರಿರಲಕ್ಕವೆನ್ನ ಮಗಳೆಂತಹಳೋ ಸಲೆ ಸೂಳೆಗೆಯ್ತದೊಳ್ ೫೦೦

ನಿಂದಾಂ ಪೋದೊಡೆ ನೋಡಳೊಂದಿನಿಸು ನೋಡಲ್ ಕೂಡೆ ಮಾತಾಡಳೊಂ
ದಂದಕ್ಕಿಕ್ಕಿದ ಮಾತನಾಡಳವಳೆನ್ನಂ ಸೋಂಕಳಾ ಸ್ಪೈಪಿನಿಂ
ಬಂದೆಂ ಸೋಂಕಿಪೊಡಪ್ಪಳಪ್ಪೆ ಮಿಗೆ ಬಾಯ್ಗೊಡಳ್ ಮನಂಗೊಡಳಾ
ನಂದಂಬೆತ್ತ ರತಕ್ಕೆ ಸಮ್ಮಸಿಸಳಾ ಬಿಬ್ಬೋಕವಂತಾಕೆಯೊಳ್ ೫೦೧

ನಡೆಯೊಳಗೆನ್ನನಿಂದು ಬರವೇಟ್ಟವೊಲಿರ್ದುದು ಕೊಂಕುವಾತು ತಾಂ
ಜಡದಿರದೆನ್ನನೊಲ್ದು ಕರೆವಂತೆವೊಲಿರ್ದುದು ನೋಟ ದೊರೆ ತ
ನ್ನೊಡನೆರವಿರ್ಪೆಪೆಂಪೆನಗೆ ಸೂಚಿಪ ಮಾಟಿಕ್ಕೆಯೊಲಿರ್ದುದೆಂದುಮಾ
ಕಡು ಬೊಜಗಾಳಿ ಭಾವಿಸುವವೋಲ್ ಸುಟಿತಪ್ಪುದು ಸೂಳೆಯಾದವಳ್ ೫೦೨

ನೋಟಕೆ ಕೂಡೆ ನೋಡಿ ತಲೆವಾಗದೆ ತನ್ನಯ ನೋಟದಾಸೆಯಂ
ಪಾಟಿಸದೆಯ್ದೆ ನೋಟ್ಟವರ ಮೆಲ್ಲೆರ್ದೆ ಜಗ್ಗನೆ ತೊಟ್ಟು ನೋಡದಾ
ನೋಟದ ಲೇಸುಗಂಡು ಸಲೆ ನೋಟವನಿಕ್ಕದೆವೊಂದು ನೋಟಮಂ
ಕೋಟಿ ತೆಜಕ್ಕೆ ತಾರದೊಡೆ ಸೂಳೆಗೆ ಸುಮ್ಮನೆ ಬರ್ಪರೇ ವಿಟರ್ ೫೦೩

ತೀವಿದ ಸೀಯಡೊಂದು ಸೊಗಸೊಲ್ದುಱಿ ಮಾಟ್ಪ ಶತಾಪರಾಧಮಂ
ಭಾವಿಸಿ ಪೇಟ್ದನಾಪ್ತ ಸಖರಂ ಜಱಿವಂತುಟುಮಾಡಿ ಹೆಚ್ಚು ಕುಂ
ದಾವುದುವಿಂದೆ . . . . ಡುರೆ ಬಲ್ಮೆನೆಗಾಱಿರೆಂಬವರ್
ತಾವದನೇನುಮಂ ಬಗೆಯದಿರ್ದೊಡನಾಕೆಯೆ ಸೂಳೆ ಲೋಕದೊಳ್ (?) ೫೦೪

ರಾಜಿತರಾಜಕೀರ ಪರಮೇಶ್ವರ ಬಂದೆಯ ಬಂದೆನಕ್ಕ ಕೇ
. . . . . ಲ್ಲಭನ ಗಲ್ಲಕೆ ಪಾಯ್ದೊಡನಾತನೀಕೆಯಾ
ಕೂಜಿಪ ಕಂಠದಲ್ಲಿ ಮಣಿಮಾಲೆಯನಿಟ್ಟವಳಾಗಧೀಶನಾ
ರಾಜಿಪ ಬಾಹುವಲ್ಲಿಯೊಳೆ ಕೆಂದಳಿರಾಗಿಪಳಿರ್ವರಾಟಮಂ
ಯೋ . . . . . ಚ್ಚು ಕಡಿದಾಟಮಾದುದು ಪೋದ ರಾತ್ರಿಯೊಳ್ ೫೦೫

ಕೊಂಕಿದ ಕುಂತಳಂ ಮಿಱುಪ ನುಣ್ಣೊಸಲೊಪ್ಪುವ ಚೆಲ್ಲಗಂಗಳಂ
ಬಿಂಕದಿ ತಿಣ್ಣನಪ್ಪ ಮೊಲೆ ಬಳ್ಕುವ ತೆಳ್ನಡು ವಿಂದಣಾಯತಂ
ಮಂಕದ ನೈಕವಂದದ ಪದಂ ನಿನಗಕ್ಕ ಬೆಡಂಗಿವೆಂದು ಚಾ
ಣಾಂಕಿಯನೇಂ ಕರಂ ಸಲಹುತಿರ್ದಳೊ ಕೀರ್ತಿಸುತೊಂದು ತಾಣದೊಳ್ ೫೦೬

ನೆರೆಯದೆ ಪೋದಡೊಂದಱಯೆನೆನ್ನಯ ತನ್ನಿಪ್ಪಯನಾವನಾದೊಡಂ
ನೆರೆದೊಡೆ ಶಂಭುವಾಗದೆ ರಮಾಪತಿಯಾಗದೆ ಭಾವಿಸಲ್ಕೆ ತಾ
ನುರು ಪರಮೇಷ್ಠಿಯಾಗದೆ (ಸುರೇಶ್ವರನಾ) ರವಿಚಂದ್ರರಾಗದಾ
ಪರಮ ವಸಂತನಾಗದಿರನೆಂಬಳ ಮಾತುಗಳೇಂ ವಿಚಿತ್ರಮೋ ೫೦೭

ಪುಸಿ ನುಸುಳೊತ್ತು ಜೊತ್ತು ಮದ ಮಾಯ ಕಲಂಕುೞೆ ಕೊಂಕು ಬಿಂಕವೊ
ಳ್ಪಸಿ ಪುರುಡಕ್ಕೆ ಕಕ್ಕುಲಿತೆ ವಂಚನೆ ಸಂಚು ಠವಾಳಿ ಠಕ್ಕು ಮೆ
ಕ್ಕಸಿ ಪರಿ ಗನ್ನ ಚುನ್ನ ಮೞೆ ಮೂವಲೆ ಕುತ್ತುದ ಪೊತ್ತು ಮುಂಡು ಭಂ
ಡೆಸೆ[೧] ದಿರೆ ಸಂದ[೧] ಭಾಗ್ಯದ ಪದಸ್ಥೆಯರೊಪ್ಪಿದರಲ್ಲಿ ಚೆಲ್ವಿನಂ(?) ೫೦೮

ಶಶಿವನದಲ್ಲಿ ಮಾಡಿಸಿದ ಪಚ್ಚೆಯ ಪಂದಲ ಹಂತಿಗೊಂಡ ಹೂ
ಹಸೆಗಳ ಮೇಲೆ ಸರ್ವವಿಟವೇಶಿಯರಂ ಬರಸಿಂಪನೂಟಮಂ
ಪಸರಿಸಿ ಯಕ್ಷಕರ್ದಮನನಿತ್ತು ಸುವಂಬುಲಗೊಟ್ಟು ಮುಂಪೆ ವಲ್
ಪಸದನವಿತ್ತು ಪಂಚಶರಪರ್ವವನಾಗಿಸಿದಳ್ ವಿಳಾಸದಿಂ ೫೦೯

ಪೂಸಿದ ಗಂಧತೈಲಮದನಾ ಪನಿನೀರೊಳೆ ಕೂಡಿ ಮಿಂದು ದಿ
ವ್ಯಾಸಮ ವಾಸಮುಟ್ಟು ಸಕಲಾಭರಣಂಗಳ ತೊಟ್ಟು ಬೇಗ ಮೇ
ಣಾ ಸವಿದೋಱುವಿಂಪುಣಿಸನುಂಡು ಮರಾಳದ ತೂಲತಲ್ಪದೊಳ್
ಪೂಶರರೂಪನಂ ಬರಸಿ ಸೌಖ್ಯದೊಳಾವಗನೊರ್ವಳೊಪ್ಪಿದಳ್ ೫೧೦

ಕಾವನನಾದೊಡಂ ಸುಱಿಸೆ ನೋಡದೆ ಸುಮ್ಮನೆ ಸೋಂಕದಿರ್ಪ ಮಾ
ದೇವನನಾದೊಡಂ ಬಯಸಿ ನೋಡಿ ಪರೀಕ್ಷಿಸದೊರ್ಮೆ ಕೂಡದಿ
ರ್ಪಾವನುಮಾದೊಡಂ ಪ್ರಿಯದಿ ಕೋಟಿಯನಿತ್ತ್ರತಿದೂತರಟ್ಟಲಾ
ಭಾವಸಿ ನೋಡದೆ ಬರಿಸದಿರ್ಪ ಪದಸ್ಥೆಯರೊಡ್ಡಿತೆಂತುಟೋ ೫೧೧

ಸನ್ನುತ ವಜ್ರಪಂಜರವ ತಾಂ ಪೊಱಮಟ್ಟು ಸುವರ್ಣಯಷ್ಟಿಯಂ
ಕನ್ನಡವಕ್ಕಿ ಸಾರ್ದು ಮಣಿದೀಪಿಕೆ ಮುಂದಿರೆ ಕಾಮಶಾಸ್ತ್ರಮಂ
ನನ್ನಿಯಳೋದಲೊಂದು ನೆರೆ ಕನ್ನಡವಕ್ಕಿ ಪದಾರ್ಥಮೆಲ್ಲಮಂ
ಕನ್ನಡಿಸಲ್ ಪದಸ್ಥಗಣಿಕಾಕುಲಮೊಲ್ದುೞೆ ಕೇಳ್ವುದಾವಗಂ ೫೧೨

ಉಡುವನನಕ್ಕ ಕಂಡೆಯೆನೆ ಕೇಳಿದೆಯಾ ಮಘು ಬಂದನೆಂದೆನಲ್
ನುಡಿಯದೆ ಮಂದಮಾರುತನಮಂ ಸುಱಿದಾಡುತ್ತಲಿರ್ದನೆಂದೆನಲ್
ಮಿಡುಕದೆ ಸುಮ್ಮನಿರ್ಪತನು ಬಂದಪನೆಂದೊಡನಾರನಾದೊಡಂ
ತಡೆಯಿರಿ ಯೆಂಬ ಗರ್ವದ ಪದಸ್ಥೆಯರಾ ಜೊತೆಯಲ್ಲಿಯೊಪ್ಪುಗುಂ ೫೧೩

---

[೧] ದ ರಾಜ್ಯದ(ಸ)

ಪುರುಷರ ಸಂದ ಜಾಣ್ಮೆಯದು ಪೆಣ್ಗಳ ಮುಗ್ಧತೆಗೆಯ್ದದೆಂತೆನಲ್
ತಿರಸವಿಯಾದ ಸತ್ವದ ಪದಾರ್ಥದೊಳಾವುದು ಜಾಣ್ಮೆ ಜಾಣರಾರ್
ಸುರುಚಿರ ಜಿಹ್ವೆಗೆಯ್ದಲದು ಮೂರ್ಛಿಸದೇ ಕಿಱುಗಾಟಿವೆತ್ತದೇ
ಗುರುತರ ಮತ್ಸ್ಯಮಂ ಸತಿಯು ಮೂಢತೆ ಬಾಲ್ಯತೆ ನೋಡೆ ಜಾಣಹೋ ೫೧೪

ಕೆಳೆಯರ ತಂದು ತಂದು ಸಲೆ ಸೂಳೆಯು ಪೆರ್ವನೆಗೂಡಿ ತತ್ಸಖೀ
ಬೆಳಗುವ ಬೀದಿಯೊಳ್ ಬರುತ ದೂರದೊಳೊರ್ವನ ಮೇಲೆ ನಿಟ್ಟಿಸು
ತ್ತಿಳಿಗಿಱತಂದಸಿಂದುವೆನುತಾಗಸವಿಟ್ಟಿಸಲಲ್ಲಿ ಚಂದಿರಂ
ತೊಳಗೆರಡಿಂದು ಮೂಡೆ ವಿಟರಾಜರ ಕೇಡಿದುವೆಂದರಾ ಸಖರ್ ೫೧೫

ಅವನಾರ್ ಪೋಪವನಾರ್ ವಸಂತಕನವಂ ಮುಂದೆಯ್ದಿ ಪೋಪಾತನಾರ್
ಪವನಂ ಚಂದದೆ ನಿನ್ನ ಮುಂದೆ ನಡೆದೆಯ್ತಪ್ಪೀತನಾರಂಗಜಂ
ತವೆ ಪುಸ್ತಾಗ್ರದೊಳಾರವಂ ಶಶಿ ಭಲಾ ನೀವೆತ್ತಪೋದಪ್ಪಿರೇಂ
ಜವದಿಂ ಯೋಗಿವಿಯೋಗಿಯೆಂಬರಱಸುತ್ತೀ ಬೀದಿಯೊಳ್ ಬಂದೆಪ್ಪೆ ೪೧೬

ಚೆಲ್ಲುವ ರತ್ನವೇ ಸುರಪಗೋಪಮುದಾಗಿರೆ ಸೂಸುಮುತ್ತು ತಾ
ನೆಲ್ಲೆಡೆಯಾಲಿಕಲ್ಲ ತೆಱನಂತಿರೆ ಮುಂದಣ ಪೊನ್ನ ರಾಶಿಯುಂ
ನಿಲ್ಲದೆ ಸೋವದಿಂ ಕೆಳಗೆ ತಾಂ ಸುರಿಯಲ್ಕದು ವೃಷ್ಟಿಯಾಗಲಾ
ನಲ್ಲನನೊಲ್ಲೆನೆಂದು ಮಧುವೊಳ್ ಮುೞಿಗಾಲಮನಂಟುಮಾಡಿದಳ್ ೫೧೭

ಸ್ಮರವರಶಾಸ್ತ್ರವಲ್ಲದುೞಿದಾದುವನೋದದ ಮನ್ಮಥೇಶನಂ
ಸ್ಮರಿಸುವ ಮಂತ್ರವಲ್ಲದಿತರೇತರ ಮಂತ್ರವನೊರ್ಮೆ ಮೋಸದಿಂ
ಸ್ಮರಿಸದ ಕಾಮಲೀಲೆಗಳನಲ್ಲದೆ ಮಿಕ್ಕುವನೆಂದು ಕೇಳದಾ
ಪರತರ ವೀರ ಕಾಮಿನಿಕರಂ ಮೆಱೆದಿರ್ಪುದದೊಂದು ತಾಣದೊಳ್ ೫೧೮

ಮಿಸುನಿಯೊಳೆಂಪ್ಪಿ ತಿದ್ದಿ ಕರುಗುಟ್ಟುತೆಯುಂಗಜನೆಂಬ ಕಾರುಕಂ
ಪೊಸವಿರಹಾಗ್ನಿಯಿಂ ಶಶಿಯ ಕಾಸಿ ಕರಂಗುತೆ ಸೌಂದರೌಘದೊಳ್
ಮಿಸುಗುವ ಸಾರಸುಂ . . . . . . ಹದಪ್ರೋಡದೆ ಕೂಡೆ ತೀರ್ದನೆಂ
ದಿಸುತೆಱದಿಂದೆ ದಿವ್ಯಗಣಿಕಾಜನದಂಗಮದೊಪ್ಪಿ ತೋಱುಗುಂ (?) ೮೧೯

ಮೂಜಗದಚ್ಚಮೋಹನದ ಮೂರುತಿಯೋ ಮಕರಾಂಕಕೋಟಿಗಳ್
ಪೂಜಿಪ ಸತ್ಕಲಾದಿಕುಲದೇವತೆಯೋ ಸುಖರತ್ನಸಂಚಯಂ
ರಾಜಿಪ ಹೊಂಗರಂಡಿಗೆಯೊ ಸರ್ವರು ಮೋಹಿಸುವಿಂದ್ರಜಾಲದಾ
ಸೋಜಿಗಮೋಯೆನಲ್ಕೆ ಮೆಱೆದಿರ್ಪುದು ದಿವ್ಯವಧೂಟಿಕಾಜನಂ ೫೨೦

ಶಿವಶಿವ ನೋಡಲೆಲ್ಲರ ಮನಂ ನಿಜಚಿತ್ತಮದಾಗಿ ಮನ್ನಿಸು
ತ್ತವಿರಳಭೋಗಮಂ ಸಖಿ ಸಖೀಜನದೊಳ್ ಸಮನಾಗಿ ಭೋಗಿಸು
ತ್ತವರಿವರೆನ್ನದೆಲ್ಲ ಜನದಿಂದಿವಳೊಳ್ಳಿದಳೆಂಬ ಕೀರ್ತಿಯು
ದ್ಭವಿಸಿರೆ ದಿವ್ಯವೇಷಿ ಸುಗುಣಾರ್ಣವಭಾಸಿ ವಿಳಾಸಿಯೊಪ್ಪಿದಳ್ ೫೨೧

ಓದದೆ ಬಂದ ಸತ್ಕಲೆಗಳಿಂ ಸಲೆ ಮೀಯದೊಡೊರ್ಮೆ ಮಾಸದಾ
ಮೋದದ ಕೇಶಭಾರದೆ ಸುಗಂಧದನಣ್ಪಿಡದೆಲ್ಲ ಮೆಯ್ಯೊಳಂ
ವೇದಿಸಿ ತೋಱುತಿರ್ಪ ನಿಜಗಂಧದೆ ಪುಟ್ಟಿದ ವೇಳೆಯಲ್ಲಿ ತಾ
ಯೋದಿಸಿ ತಿರ್ದದೇ ಮೆಱೆವ ಸುಂದರದಿಂ ಸುರಕಾಂತೆಯೊಪ್ಪಿದಳ್ ೫೨೨

ಮೊಲೆಗಳ್ ಮೋಹನದೇಶದಚ್ಚಬಲೆಗಳ್ ಶೃಂಗಾರಸಂಪತ್ತಿನಾ
ನೆಲೆಗಳ್ ನೋಟಕದಿಟ್ಟಮೀನ್ಗೆ ಬಲೆಗಳ್ ಸ್ತ್ರೀಸ್ಪರ್ಶನಾನಂದದಾ
ಕಲೆಗಳ್ ಮನ್ಮಥನಾರ್ಪುಗೊಂಬ ಬಲೆಗಳ್ ಮೂಲೋಕದಾ ಮೋಹದಾ
ಶಿಲೆಗಳ್ ತಾವೆನಲೊಪ್ಪುತಿರ್ಪ ಯುವತೀಸಂದೋಹಮೇಂ ಬಂದುದೋ ೫೨೩

ಮುರಹರಸೂನುಸನ್ನಿಭ ದುಕೂಲವಿರಾಜಿತ ಚಾರುಮೌಕ್ತಿಕಾ
ಭರಣ ಕವೀಂದ್ರನಪ್ಪ ನಿಜದೂಸಱೆನಿಂ ಪರಿಭಾವಿಸಲ್ಕೆ ನಾ
ನೆರೆವುದಕಿಲ್ಲ ಪುಣ್ಯತನಗೆಂದವಳೊಪ್ಪದೆ ಪೇೞಲೊರ್ವನಂ
ತರದೊಳೆ ಲಜ್ಜೆ ಪುಟ್ಟೆ ತಲೆವಾಗುತೆ ಪೋದನದೇಂ ವಿಚಿತ್ರಮೋ ೫೨೪

ನಂಬಿದರಲ್ಲಿಗಿಂಬುಗುಡದಗ್ರಣಿಯಷ್ಟವಧಾನಿ ನಿತ್ಯವಿ
ಜೃಂಭಣವಾಕ್ಯಪೂರದತಿಬಂಧವಿನೋದಕ ಕೂರುಗುರ್ಗಳೊ
ಳ್ಪಿಂ ಬಲುಗೈಯ ಜಾಡ್ಯಹರ ಸರ್ವರಿಗಂಜುತೆ ಬಾಯ ಮುಚ್ಚದಾ
ಡಂಬರನೀತನೆಂದು ವಿಟನಂ ನುತಿಗೆಯ್ದಳದೊರ್ವಳಾಳಿಯೊಳ್ ೫೨೫

ಸುರಭಿಶರಂಗಳಂ ನಯನದೊಳ್ ಕುಡಿವುರ್ವನೊಳಿಕ್ಷುಚಾಪಮಂ
ಪರಿಚಿತಮೀನಕೇತನಮನಾವಗಮೊಪ್ಪುವ ಕೇಶಹಸ್ತದೊಳ್
ನಿರವಿಸಿ ಬೈತು ಮೈಗೞೆದು ಶೂಲಧರಂಗಗಿದಿರ್ಪನಲ್ಲಿ ಪೆಂ
ಡಿರ ಮನೆಯೊಳ್ ಮನೋಜನೆನೆ ಜೆಲ್ವೆಸೆದರ್ ಕಡುಗಾಡಿಕಾರ್ತಿಯರ್ ೫೨೬

ಹತಬಲನಾಗಿ ವಜ್ರಧರನಲ್ತು ವಯೋಧಿಕನಾಗಿ ತಾರ್ಕ್ಷ್ಯನ
ಲ್ತತಿಜಡಭಾವಿಯಾಗಿ ಕಡಲಲ್ತು ನಿಜಕೃತಿಹೀನನಾಗಿ ಮಾ
ರುತಭುಕುವಲ್ತು ದಂಡಧರನಾಗಿ ದಿಟಂ ಜವನಲ್ತು ನೀರದ
ಸ್ಥಿತಿಗವಕಾಶನಾಗಿ ಗಿರಿಯಲ್ತೆನೆ ವೃದ್ಧನದೇಂ ವಿರುದ್ಧನೋ ೫೨೭

ಸುದತಿಯರಾನನಾಂಬುಜವನಕ್ಕೆ ಹಿಮಂ ನಯನೋತ್ಪಲಕ್ಕೆ ಸಿಂ
ಗದ ಬಿಸಿಲಂಗವಲ್ಲಿಗೆ ರೌದ್ರದವಾಗ್ನಿ ಮನೋಗಜಕ್ಕೆ ಸಿಂ
ಗದ ದನಿ ರಾಗನಾಗನಿಚಯಕ್ಕೆ ನವಿಲ್ ಪ್ರಣಯಪ್ರಕೋಪನೀ
ರವಕೆ ಸಮೀರನಲ್ತೆ ರತಿಲಂಪಟವೃದ್ಧನ ಭೋಗದಾಗ್ರಹಂ ೫೨೮

ಕಠಿಣತೆ ಸಲ್ಲದೆಂದು ಮೃದುವೊಳ್ ತನುವಾಗಿಸಿ ಕೃಷ್ಣಭಾವಮಂ
ದಿಟಮೊಳೆ ನೆತ್ತಿಯಿಂದಿೞಿವುತಾ ಶಿವಭಾವಮನಾಂತು ಸಂತತಂ
ಶಠತೆಯ ಜಿಹ್ವೆಯೊಳ್ ನೆಱೆದವೆಂದುರದಾಳಿಯನೊಂದು ನೂಂಕಿದಾ
ಮಠವ ಮಹಾರ್ಯರೊತ್ತೆಗೊಡಬಂದಿರಿ ಯೆನ್ನಯ ಪುಣ್ಯಮೆಂತುಟೋ ೫೨೯

ತೊಡೆಯೆರಡೌಂಕಿ ಪೆಟ್ಟೆ ಮಿಗೆ ಬೆಳ್ಪಿನ ಮೀಸೆಯ ಕಿತ್ತು ಕೈಯೊಳಂ
ಮಡಗುತೆ ಜೋಲ್ವ ಗಲ್ಲನಲುಂಗುತೆ ಕರ್ಣದೊಳೊತ್ತಿ ಕೂಗುತುಂ
ನಡುಗುವ ಮಸ್ತಕಕ್ಕವಿರಳಾಂಗುಲಿಯರ್ಪಿಸುತಾರ್ದ್ರನೇತ್ರದಾ
ಕಡುಪರೆಯೆತ್ತುತಂ ತರಳೆ ವೃದ್ಧನನೇಂ ಕಪಿಮಾಡಿ ಕಾಡಿದಳ್ ೫೩೦

ಹತ್ತಿದ ಗಲ್ಲ ಸಬ್ಬಸದ ಬಂಗುಮೊಗಂಗೀ ನಳಿಮೂಗು ಗುಂಗುರುಂ
ಮುತ್ತುವ ಕಣ್ಣೆೞಲ್ವ ತುಟಿ ನಾಱುವ ಜೊಲ್ಲಿನ ಬೋಡುವಾಯಿ ಮೆ
ಯ್ವೆತ್ತಿ ಸುರುಳ್ದ ನಾಯಿಮೊಲೆ ಮುಂಕರಿಹೊಟ್ಟೆ ಜಗುಳ್ದ ತೋಳ್ಗಳಿಂ
ದೊತ್ತೆಗೆ ಬಂದು ನಿಂದು ಮುದಿಸೂಳೆ ವಿಟರ್ಕಳ ಸನ್ನೆಗೆಯ್ವುತಂ ೫೩೧

ಹರೆಯಮುದಾವಗಂ ಹಿರಿದು ಸದ್ಗುಣಮೇ ಕಿೞಿದಾಸೆಯೆಂಬುದೇ
ಪರಿಕಿಸೆ ದೊಡ್ಡಿತಪ್ಪ ವಿನಯಂ ಸಣ್ಣಿತು ಚುಂಚುಗುಯ್ವುದೇ
ಧರೆಯನತೀವ ಲೇಸು ಪರಮಾಣುವ ಭಾಷೆಯೆ ಕೋಟಿ ನನ್ನಿಯೊಂ
ದರೆನಸುದೋರ್ಪ ಬೆಳ್ದಲೆಯ ವೃದ್ಧೆಯರೊತ್ತೆಗೆ ನಿಂದರದ್ಭುತಂ ೫೩೨

ಪಡೆವೊಡೆ ಪುತ್ರಿಯಿಲ್ಲ ದುಡಿದಿಕ್ಕುವ ದಾಸಯು ಮುನ್ನವಿಲ್ಲ ಮೇಣ್
ಪಡೆದುಡೆ ಚೆಲ್ವನಪ್ಪ ಮಗ ತೊಳ್ತುತನಂ ತಮಗಾಗೆ ವೊತ್ತೆಯಂ
ಪಡೆವೊಡೆ ವೃದ್ಧೆಯರ್ ತರದೆ ನಿಂದುದು ಸತ್ವಮದಣ್ಣ ನೋಡಿದು
ಕಡು ಹಿರಿದಿರ್ದು ಕಕ್ಕುಲಿತೆಯಿಂ ಪುದಿಗಾವುದಿವರ್ಗೆ ತಕ್ಕುಮೇ ೫೩೩

ಶಿರದೊಳ್ ಸತ್ವಗುಣಂ ತಾ
ನಿರೆ ನಿನ್ನೀ ಚಿತ್ತದಲ್ಲಿ ತಾಮಸಗುಣಮಿರೆ
ಪರಮರಜೋಗುಣವೊಂದು
ಪಿರಿಯರೆ ಬಹುಕಾಲದಿಂದ ತೊಱೆನುದು ಪಾಪಂ

ಮೊಲೆಗಳ್ ಬೀೞ್ದುವಿಡೊಪ್ಪದೆಂದು ಮನಸೊಳ್ ಜೆಂಬೀೞ್ದುದಿಲ್ಲೆಯ್ದೆ ಮುಂ
ದಲೆ ಬೆಳ್ಪೇಱುದುಜೆಂದು ನೊಂದು ಮನದೊಳ್ ಬಳ್ಕಿರ್ದುದಿಲ್ಲೆಯ್ದೆ ಮು
ಪ್ಪಲೆದಾರ್ಪಂದವೊಲಾಗೆ ಪುತ್ತ್ರಮೆನಗಂ ಪೆಯ್ಮ್ರೇಳಮಂ ತೋರ್ಪ ನಾ
ಣ್ಗೆಲಿಯಂ ನೋಡವೊ ವೃದ್ಧೆಗೆನ್ನ ದೊರೆಯರ್ ಮೊಮ್ಮಕ್ಕಳಿಲ್ಲಾಗರೇ ೫೩೫
(ಸೂಕ್ತಿಸುಧಾರ್ಣವಂ ೮-೩೮೯)

ಬಾರ ಭುಜಂಗರಾಜ ಬರಲೇಕೆ ಪುರಾಣಧುರೀಣೆ ವೊತ್ತೆಯಂ
ತಾರ ವಯಸ್ಕಯೀಪುರದ ಮುಂದಣ ಪೆರ್ಮರಸೆಂದು ಪುಟ್ಟಿತಂ
ದಾರಯೆ ಪುಟ್ಟಿದಾ ನಿನಗವೊತ್ತೆಯೆ ವೊತ್ತೆ ಸುಜೀರ್ಣಪಾರಿಗೇಂ
ಕೂರಿಸಿಯೊತ್ತೆಗೊಟ್ಟರೊಳರೇ ಮಧುಪಾರಿಗೆನಲ್ಕೆ ನಾಣ್ಚರೇ(?) ೫೩೬

ಶಿರಕರಿದಾರಸೇರಿದುದು ಬಾಯ್ದೆಱೆದಂಬುಲವಾರ ತಂಬುಲಂ
ವರಕುಚಚರ್ಮದೊಳ್ಪೊರಜೆಯನೆಲ್ಲ ಸುರುಳ್ಚಿದೆಯಮ್ಮ ನಿನ್ನನಾರ್
ಕರವಿಡಿದೆಬ್ಬಿಸುತ್ತೆ ಪುಡಿಯಲ್ಲಿಗೆ ತಂದವರಾರು ಮುಪ್ಪಿನೊಳ್
ವರವಿಟನೊತ್ತೆಗೊಟ್ಟು ಬರಲೇಂ ಮಸಿದಿಂಬನೆ ಬಾಪು ಬಾಲಕೀ ೫೩೭

ನೆಱೆ ನರೆಗಂಡು ತುಂಬಿವೆಡೆಯಂ ಪರಿದಿಕ್ಕಿದನಿಂದು ಮನ್ಮಥಂ
ಸಱಿ ಬಿಡೆ ಜರ್ವುಗೆಟ್ಟು ಮಿಗೆ ಪುರ್ವನೆ ಕಂಡಿನಿವಿಲ್ಲನೆಲ್ಲಮಂ
ಮುಱಿದನನಂಗನೀ ಪರಿ ಪುದುಂಗಿದ ನಿನ್ನಯ ದಿಟ್ಟಿಗಂಡು ಹೋ
ಬಿಱುಸರಳಂ ಬಿಸುಟ್ಟನಕಟೇಗಳೆನಲ್ ಪ್ರತಿವೇೞ್ವುದೆ ವೃದ್ಧೆ ಪೇಸದೇ ೫೩೮

ಪಿಡಿದೊಡೆ ಮುಂಗುರುಳ್ ಪದೆದ ಕೈಗಳೆಯಾಗಿವೆ ನಿನ್ನ ವಕ್ತ್ರಮಂ
ಪಿಡಿದಲುಗಲ್ಲೊಟಕ್ಕು ಲೊಟಕೆಂಬುದನೆಮ್ಮೊಳೆ ಪೇೞುತಿರ್ಪಿನಂ
ಪಿಡಿವೊಡೆ ಸತ್ಕುಚಂ ಬೆರಳ ಸಂದಿಗೆ ಸದ್ಗುಣದಂತೆ ಪೋಪಿನಂ
ಕಡು ಮುದುಪಾದ ಮತ್ತೆ ಮತ್ತೆ ಹಡದುಂಬುದಱಿಂ ಸಲೆ ಸಾಯಸಲ್ಲದೇ ೫೩೯

ಬಾಯ್ದೆಱೆಗೊಂಬುಗಳ್ಕಿ ಭಮುಖಕ್ಕೆಣೆಯಾದಳಸೊತ್ತೆಗೇಳಲಾ
ನೆಯ್ದೊಡನಾಕೆ ಜೊಬ್ಬೊ ಬೊಬೊಯೆಂದೊಡೆ ಮೇಲುದನಾಯ್ದೆನಾ ಕುಚಂ
ಪಾಯ್ದು ನೆಲಕ್ಕೆ ಬೀೞ್ದ ಜಗರಂಜೊಲದೆನ್ನಡಿಗುರ್ಚೆ ಬರ್ಪಿನಂ
ಬಯ್ದುಱೆ ಸೀರೆಯಂ ಸೆಳೆಯೆಯಾಮೊಳೆಯುಟ್ಟೊಡನೊಂದನಾಂತಳೋ ೫೪೦

ಮುಸುಡಂ ತಾಂ ಪುಱಿವಮಾಡಿ ಪಿಂತೆ ಸೊಡರಂ ಬೈತಿಟ್ಟು ಬಲ್ಲಿಂತಿರು
ಬ್ಬಸದಿಂದಂ ಕೊಳೆ ರಾಗನುಂ ಬಗುಳುತಂ ಗಂಡೆಂಬ ಸಂದೇಹಮಂ
ದೆಸರಂ ತೋಱಲು ಪೋಗಬೇಡ ನಿನಗಂಯೆನ್ನಾಣೆ ನೀನಿತ್ತ ಸಂ
ತಸದಿಂದಾರಯೆ ವೀಳ್ಯ ಸಾಕುಯೆನುತಿರ್ದರ್ ವೃದ್ಧವೇಶ್ಯಾಜನಂ ೫೪೧

ನಗೆಬರಲೆಷ್ವನಕ್ಕೆಳದು ಮೆಲ್ಲುಡಿ ಬಲ್ಲಿತು ಚೆಲ್ಲಗಂಗಳೊ
ಳ್ನಗೆಯದು ನೋಟಕರ್ಗೆಯಱಿತಂ ಮೊಲೆಗಳ್ ಮುಗುಳೊತ್ತವಿಚ್ಚೆಗೆ
ಟ್ಟಗಡು ಕೊನಂಗಿ ಕೋಪ ಪಿರಿದುಂ ರತಿಯೊಳ್ ತವಕಂ ಕುಚೇಷ್ಟೆಕಾ
ರಿಗೆ ನೆಱೆ ಸೋಲರಕ್ಕಟ ವಿಟರ್ ಬಱಿದೆಂದುಱಿ ಪಾರಿ ಜರ್ಬಿದಳ್ ३४೧

ಅಡರ್ದ ಕುಚದ್ವಯಂ ದಯಿತೆ ಬಿಟ್ಟುವಿವೇಕೆನೆ ಬರ್ದೆಯೆಂದಳಿಂ
ತಡಿಗಡಿಗೋಪ ನೀಂ ಸರಸಕಾಮನಿವಾಸದೊಳಿಟ್ಟ ಕೈಯನಿಂ
ಪಿಡಿದಿರೆ ತಮ್ಮೊಳಿಟ್ಟು ಸವಿದೋಱದ ದೂಸಱ ನಿಂದಹರ್ನಿಶಂ
ಕೆಡೆದಪುವಲ್ಲಿಗಾ ಸವಿಗೆ ಸೆರ್ಮೊಲೆಯಲ್ಲದೊಡಿಂತು ಬೀಟ್ಟುವೇ ३४೨
(ಲೀಲಾವತಿ ೨-೧೧೯, ಸೂಕ್ತಿಸುಧಾರ್ಣವಂ ८-३८८)

ಜಲಜಾಕ್ಷಿ ಮದನಮೋಹಿನಿ
ಲಲಿತಾಂಗಿ ನಿನ್ನ ಕುಚಂಗಳೇಕೆಲೆ ಸರಿದುವು
ಬಲುವಿಟರು ತಳವನಗೆಯಲು
ಕುಲಗಿರಿಗಳು ಬಿಟ್ಟುವವಱ ಪಾಡೇನರಸಾ ३४३

ಪರಳಾಗಲ್ ಧರೆಯುವರಂ
ಸರಸಿಜಕುಟ್ಮಂಗಳಾಲಾಗಸದವರಂ
ತಿರೆ ಗೆಲ್ದವೆಂದು ಕುಚಗಳ್
ಸರಿದುವು ಪಾತಾಳದವರನೀಕ್ಷಿಸಲೆಂದುಂ ३४४

## ಮುಗ್ಧಭಾವ :

ಇನಿಯುನಗಲ್ದು ಪೆರ್ದೆಸೆಗೆ ಪೋದೊಡೆ ಬಂಬಲುಬಾಡಿ ಚಿಂತೆಯಿಂ
ಕನಕಲತಾಂಗಿ ತನ್ನ ಶಯನಂಗಳೊಳ್ ಮಲಗಿರ್ದು ನಲ್ಲನಂ
ಕನಸಿನೊಳಪ್ಪಿಕೊಂಡು ಮುಸುಕಂ ತೆಱದೊಯ್ಯನೆ ನೋಡಿ ಕಾಣದಾ
ಮನೆಯೊಳಗಿರ್ಪನೆಂದು ಸೊಡರ್ಪತ್ತಿಸಿ ನೋಡಿದಳೊಂದು ಜಾವನುಂ ३४५

ಅಂಬುಜಮಿಲ್ಲಿ ಬಾಲಶಶಿಯಿಲ್ಲಿ ಪಟೋತ್ಪಲವಮಿಲ್ಲಿ ಪಣ್ತ ದಾ
ಳಿಂಬದ ಬೀಜಮಿಲ್ಲಿ ನವಚಂಪಕಮಿಲ್ಲಿ ಶಶಾಂಕಮಿಲ್ಲಿ ರ್ಥುುಂ
ಪ್ಮಂಬ ಮದಾಳಿಯಿಲ್ಲಿ ಸುರಚಾಪಮದಿಲ್ಲಿಯೆನುತ್ತ ತನ್ನ ರೂ
ಪಂ ಬಗೆಗೊಂಡು ದರ್ಪಣಮ ನೋಡಿದಳೊಯ್ಯನದೇಂ ಪ್ರಮುಗ್ಧೆಯೋ ३४೬

ಓದಿಪೆನೆಂದಡೊಂದು ಗಿಳಿಯಂ ಕರದಿಂ ಪಿಡಿಯಲ್ಕಡೆಯ್ದೆ ಕೆಂ
ಪಾದುದು ತತ್ಕರದ್ಯುತಿಯೊಳಂತದನೀಕ್ಷಿಸೆ ಲೋಚನಾಂಶುವಿಂ
ದಾದುದು ಬೆಳ್ಪು ನಾರಿಯಿದು ಮಾಯದ ಪಕ್ಷಿಯಿದೆಂದು ಮುಗ್ಧೆ ತಾ
ನೋದಿಸಲಂಜಿ ಭೀತಿ ಮಿಗೆ ಪಂಜರದೊಳ್ ಮುಸಿಕಿಟ್ಟು ಮುಚ್ಚಿದಳ್ ೫೪೭

ಪೊಸತೆನಿಪೊಂದು ಪಕ್ವಫಲಮೆಂದರುಣಾಧರಮಂ ಕರ್ದುಂಕಿ ನಾಂ
ಟಿಸುತಿರಲೌಡುಗರ್ಚಿ ಭರದಿಂ ನಿಲೆ ತತ್ಫಲಮೆಲ್ಲಿಪೋದುದೆಂ
ದಸಿಯಳ ಹಸ್ತದಿಂದಿಳಿದು ತನ್ಮಣಿಕುಟ್ಟಿಮದೊಳ್ ತೊಳಲ್ದು ವೀ
ಕ್ಷಿಸುವತಿಮುಗ್ಧ ರಾಜಶುಕಮಿರ್ಪವು ತದ್ಗಣಿಕಾಲಯಂಗಳೊಳ್ ೫೪೮

ಅನುದಿನಮೆಯ್ದೆ ತನ್ನಿನಿಯ ನೋಡುವ ದರ್ಪಣಮಂ ಕರಾಗ್ರದಿಂ
ಘನಕುಚೆ ತಾಳ್ದು ತನ್ನ ನಿಜರೂಪಮನಲ್ಲಿಯೆ ಕಂಡು ಮಾಣದಾ
ವನಿತೆ ಕಡಂಗಿ ಮುಗ್ಧತೆಯನೊಂದಿ ಕನಲ್ದಿರದಂದು ತನ್ನ ನ
ಲ್ಲನ ವಧುವೆಂದು ಪೊಚ್ಚಪೊಸಗನ್ನಡಿಯಂ ಸತಿ ನುಗ್ಗುಗುಟ್ಟಿದಳ್ ೫೪೯

ವರನಖಕಾಂತಿಯೊಳ್ ಪೊಳೆವ ಚಂದ್ರನನೀಕ್ಷಿಸಿ ಸತ್ಕಳೇಶ ಮ
ಚ್ಚರಣದೊಳೇಕೆ ಬಿರ್ದೆಯೆನುತಂ ಪದಮಂ ತೆಗೆಯಲ್ಕೆ ನೀಲದಿಂ
ವಿರಚಿತಮಾದ ಕುಟ್ಟಿಮದೊಳಂ ಪೊಳೆಯುತ್ತಿರೆ ಬರ್ಪವೇಡುನು
ತ್ತಿರದೆ ಕರಂಗಳಿಂ ತೆಗೆಯೆ ಬಾರದಿರಲ್ ಕಡುಮುಗ್ಧೆ ನಾಣ್ಚಿದಳ್ ೫೫೦

ಉನ್ನತಕುಚಯುಗೆಯೋರ್ವಳ್
ಕನ್ನಡಿಯಂ ಪಿಡಿದು ನೋಡಿ ಸ್ವೇದಬಿಗಾಗುತ
ತನ್ನ ನೊಸಲೆಂದು ಬಗೆವುತ
ಕನ್ನಡಿಯೊಳ್ ಪೊಳೆವ ನೊಸಲೊಳಿಟ್ಟಳು ಬೊಟ್ಟಂ ೫೫೧

ಅಂಬರದಿಂದೆಯ್ತಂದೀ
ತುಂಬಿದ ಕೊಡನೊಳಗೆ ಚಂದ್ರ ಸಿಲುಕಿದನೆನುತಂ
ಬಿಂಬಾಧರೆ ಮುಚ್ಚಿಟ್ಟಳು
ಯಿಂಬಿನೊಳಂ ತೆಗೆದು ನೋಡಿ ಕಾಣದೆ ಸುಯ್ದಳ್ ೫೫೨

ಪ್ರತಿಬಿಂಬಿಸಿದರ್ಧೇಂದುವ
ಸತಿ ಕುಚದೊಳ್ ಕಂಡು ಪೊಸನಖವ್ರಣಮೆಂದಾ
ಪತಿಯೊಲ್ಲನೆಂದು ಕರದಿಂ
ಧೃತಿಗುಂದುತ ಮುಚ್ಚಿಕೊಂಡು ತಳವೆಳಗಾದಳ್ ೫೬೩

ಕಳಶೋದರದೊಳ್ ಚಂದ್ರನ
ನೆೞಲಂ ಕಂಡೆಲೆಲೆ ಸಿಲುಕಿದಂ ಶಶಿಯೆನುತಂ
ದೊಳಪೊಕ್ಕು ನೋಡಿ ಕಾಣದೆ
ಗೞಿಲನೆ ತಡವಳಿಸಿ ಮುಗ್ಧೆ ತಳವೆಳಗಾದಳ್ ೫೫೪

ಕರತಳಕಳಶೋದಕದೊಳ್
ಸುರುಚಿರ ಚಂದ್ರಮನ ನೆೞಲನೂನಂ ತೋಱು
ತ್ತಿರೆ ಬೆಳ್ಳಿವಟ್ಟಲೆಂದಾ
ತರುಣಿ ಕರಂ ತೆಗೆದು ನೋಡಿ ತಳವೆಳಗಾದಳ್ ೫೫೫

ಸುಗುಣೆ ತನ್ನಿನಿಯ ನೋಡುವ
ಮಿಗೆ ಕೈಪಿಡಿ ನೋಡಿ ತನ್ನ ರೂಪಂ ಕಾಣುತೆ
ತಿಗುಳತಿಯೋರ್ವಳ್ ತನಗೆಂ
ದಗಿದಳು ಸುಯ್ವುತ್ತೆ ಮುಗ್ಧೆ ಚಿಂತೆಯೊಳೊರ್ವಳ್ ೫೫೬

ತಿಳಿವಿಲ್ಲದೆ ಶಶಿಕಾಂತದ
ಕಳಶಮನೇಕೊಯ್ದೆ ಕಾಂತೆ ನಿನ್ನ ಮುಖೇಂದೂ
ಜ್ಜ್ವಳಕೌಮುದಿಯಿಂದೊಸರ್ದಪು
ದಿೞಿಪಿೞಿಪೆಂದೋರ್ವ ಮುಗ್ಧೆ ಸಖಿಯಂ ನುಡಿದಳ್ ೫೫೭

ಕಂಜದಳೇಕ್ಷಣೆ ನಿನ್ನಯ
ಮಂಜುಳರವದಿಂದೆ ಪಾಡೆ ನವಪರಪುಟ್ಟ
ಪ್ರಾಂಜುಳಮಧುರಧ್ವನಿಯೆಂ
ದಂಜುವರೆಲೆ ಮಗಳೆ ಪಾಡದಿರು ವಿರಹಿಣಿಯಿರ್ ೫೫೮

ಮಿಗೆ ದಟ್ಟೈಸಿದ ಚಂದ್ರಿಕೆ
ಸೊಗಯಿಸೆ ಕಂಡೊರ್ವ ಮುಗ್ಧೆ ದಗ್ಧವಿದೆಂದೆಂ
ದಗಲದೆ ಬದ್ಧಾಂಜಳಿಯಂ
ಮೊಗೆಮೊಗೆದಾ ಬಯಲನೀಂಟೆ ಬೞಲುತ್ತಿರ್ದಳ್ ೫೫೯

ಶೀವಿದ ಕೌಮುದಿಯಂ ಕಂ
ಡೋವದೆ ಬಂದೊರ್ವ ಮುಗ್ಧೆ ಚಂದನರಸಮೆಂ
ದಾವರಿಸಿ ಪೂಸಿ ಮೆಯ್ಯೊಳ್
ಭಾವಿಸೆ ನಱುವಿಲ್ಲದಿರಲ್ ತಳವೆಳಗಾದಳ್ ೫೬೦

ಇಂದಿರುಳು ಗ್ರಹಣ ಮಗಳೆ
ನಿಂದಿರದಿರು ಮನೆಯ ಮುಂದೆಯೆಲೆ ಶಶಿವದನೇ
ಚಂದಿರನಿಗಧಿಕವೆನುತಂ
ಬಂದಡಸುಗು ರಾಹು ನಿನ್ನ ಮುಖಮಂಡಲಮಂ ೫೬೧

ದಟ್ಟೈಸಿದ ಚಂದ್ರಿಕೆಯಂ
ನಿಟ್ಟಿಸಿ ದೇವಾಂಗವೆಂದು ತನ್ನಯ ನಡುವಿಂ
ಗುಟ್ಟಪೆನೆನುತಂ ತೆಗೆಯಲ್
ಕಟ್ಟದಿರಲ್ ಮುಗ್ಧೆ ನೋಡಿ ಸೈವೆಱಗಾದಳ್ ೫೬೨

## ಚಕ್ಷುಪ್ರೀತಿ :

ಎತ್ತಣಿನೆಯ್ದಿದಂ ಮದನನಿಕ್ಷುಧನುರ್ಲತೆಯಂ ಪ್ರಸೂನಕಾ
ಯ್ವೊತ್ತ ಶರಂಗಳಂ ಮಕರಕೇತನಮಂ ರತಿಯಂ ಸಮೀರನಂ
ಮತ್ತೆ ವಸಂತನಂ ಮಱೆಸಿಯೆಂದು ಕರಂ ಬೆಱಗಾಗಿ ನೋಡಿದಳ್
ಚಿತ್ತದೆ ಸಂಭ್ರಮಂ ಬೆರಸಿ ಕಾಂತೆ ಕಳಾಧರನಂ ಕುಮಾರನಂ ೫೬೩

ಹರಿನೀಲಚ್ಛವಿ ಪುಂಡರೀಕನಯನಂ ವಿಸ್ತೀರ್ಣವಕ್ಷಸ್ಥಲಂ
ಪರಿವೃತ್ತಾಯತ ಬಾಹು ಪೀವರನಿತಂಬಂ ಗುಂಡರೊಳ್ ನೀಱನೆಂ
ಬರ ಮಾತಂ ಕಿವಿಯಾರೆ ಕೇಳ್ದು ಕಿವಿವೇಟಂಗೊಂಡು ಕಣ್ಣಾರ್ಪಿನಂ
ಹರಿಯಂ ನೋಡಿದಳಾಕೆ ತನ್ನ ಕಡೆಗಣ್ಗಳ್ ಬೀಱೆ ಬೆಳ್ದಿಂಗಳಂ ೫೬೪

(ಪಂಪರಾಮಾಯಣಂ ೨-೧೨)

ಕಡೆಗಣ್ಣಿಂ ಕಡೆಗೋಡಿವೋಗೆ ಪಿರಿದುಂ ಚೆಲ್ಲಿಂ ಕುಚದ್ವಂದ್ವದಿ
ಟ್ಟೆಡೆಯಿಂ ಸ್ವೇದಜಲಂ ತುಳುಂಕೆ ಜಘನಾಂತರ್ದೇಶದಿಂದಾವಗಂ
ಬಿಡದುಣ್ಮುತ್ತಿರೆ ಮನ್ಮಥದ್ರವಮನಂಗಾವೇಶದಿಂ ಕಾಲ್ತುಡಂ
ಬಡೆ ಬಂದಾಟಿಸಿ ನೋಡಿದಳ್ ಪದಪಿನಿಂ ಶ್ರೀವಿಪ್ರಮಾರ್ತಂಡನಂ ೫೬೫

(ಕಾವ್ಯಾವಲೋಕನಂ ೮೦೩)

ಮುತ್ತಿನ ಹಚ್ಚಮಂ ತುಡುವುದಂ ಮಱೆದೊಪ್ಪಿರೆ ಮೇಳದಾಕೆಯುಂ
ಕತ್ತುರಿಬೊಟ್ಟನಿಂ ತೀಡುವೊಡಂ ಸಿಲಲೊಲ್ಲದೆ ಸಾರ್ದು ನಲ್ಮೆಯಿಂ
ದೊತ್ತೆಯನಿತ್ತುದಂ ಬಿಸುಟು ಚೌರಿಗೆಯಿಂ ಪೊಱಮಟ್ಟು ಗಾಡಿ ಬೆಂ
ಬತ್ತಿರೆ ನಿಂದಳೊರ್ವಳೆವೆಯಿಕ್ಕದೆ ನೋಡುತಲೊಲ್ದು ಕಾವನಂ ೫೬೬

(ಕಬ್ಬಿಗರ ಕಾವಂ ೩೩೬)

ಸೋರ್ಮುಡಿ ಬೆನ್ನನಪ್ಪಳಿಸೆ ಬಿಂಕದಿಂ ಕಟ್ಟಿದ ರನ್ನದೈಸರಂ
ಪೆರ್ಮೊಲೆಯಂ ಪಳಂಚೆ ನಗೆಗಣ್ ಮಱುವುಲ್ಲೆಯ ಚೆಲ್ಲಗಂಗಳಿಂ
ನೂರ್ಮುಡಿ ಚೆಲ್ವವಾಗೆ ನೊಸಲೊಳ್ ಕುರುಳುಯ್ಯಲಾಡೆ ಬೇಗದಿಂ
ಕೂರ್ಮೆಯನಾಂತು ನೀಱೆ ನಡೆತಂದಲರ್ವಿಲ್ಲನನೆಯ್ದೆ ನೋಡಿದಳ್ ೫೬೭

(ಕಬ್ಬಿಗರ ಕಾವಂ ೩೩೭)

ಕುರುಳೋ ತುಂಬಿಯ ಬಂಬಲೋ ತೊಡೆಗಳೋ ಪೊಂಬಾಳೆಯೋ ಕಣ್ಗಳೋ
ಬಿರಿದಂತೊಪ್ಪುವ ನೆಯ್ದಿಲೋ ಬೆರಲೋ ಕೂರ್ಪಾಗಿರ್ಪ ಪೂಗೋಲ್ಗಳೋ
ಕೊರಲೋ ನುಣ್ಣಳವಟ್ಟ ಕೌಂಗೋ ಪೊಸತಾಗಿರ್ದಪ್ಪುದೆಂದೆಯ್ದೆ ವಿಂ
ಡರ ತಂಡಂ ಬಱಸಲ್ಪಿನಂ ಬಿಡದೆ ಬಂದುಂ ಕಾವನಂ ನೋಡಿದಳ್ ೫೬೮

(ಕಬ್ಬಿಗರಕಾವಂ ೩೦೯)

ಇಕ್ಕಿದ ರನ್ನದೋಲೆ ಪೊಸಮುತ್ತಿನ ಮೂಗುತಿ ತೋಳಬಂದಿ ನೀ
ಳ್ದಿಕ್ಕಸರಂ ತೊಳಪ್ಪ ಬೆರಳುಂಗುರವಿಂಚರಮೀವ ನೇವುರಂ
ಚೊಕ್ಕಳಮಪ್ಪ ಚೆಲ್ವನೊಳಕೊಂಡಿರೆ ಬೆಳ್ಳಿಯ ಬಳ್ಳಿಮಾಡಮಂ
ತಕ್ಕಿನೊಳೇಱಿ ನೋಡಿದಳೊರ್ವಳಗುರ್ವಿಪ ಕರ್ವುವಿಲ್ಲನಂ ೫೬೯

(ಕಬ್ಬಿಗರಕಾವಂ ೩೪೦)

ಬಿಂಬಾಧರಕಾಂತಿ ಪ್ರತಿ
ಬಿಂಬಂ ಸುಲಿಪಲ್ಗೊಳಿಸೆಯೆ ಪಲ್ ಸುಲಿಯುವೆಗೆ
ತ್ತೇಂ ಬಾಲೆ ಮುಗ್ಧೆಯೋ ಮ
ತ್ತಂ ಬಿಡದಡಿಗಡಿಗೆ ನೋಡುವಳ್ ಕನ್ನಡಿಯಂ ೫೭೦

(ಕಾವ್ಯಾವಲೋಕನಂ ೯೪೩)

ಜಗುಱ್ವೆತ್ತಂ ಸಮನೊತ್ತಿ ಸೂಸುವಳಕಾನೀಕಂಗಳಂ ತಿರ್ದು ಮೆ
ಲ್ಲಗೆ ಪೋಗಿನ್ನುಡಿದಪ್ಪುದೊಳ್ನಡು ಕುಚಪ್ರಾಗ್ಭಾರದಿಂದೆಂದು ಬು
ದ್ಧಿಗುಡುತ್ತುಂ ನಡೆತರ್ಪ ಚೇಟಿಯರ ಮಾತಂ ಮೀಱಿ ಕೈಮೀಱಿದೊ
ಲ್ಮೆಗೆ ಪಕ್ಕಾಗಿ ಪೆಱಳ್ ಮೃಗಾಕ್ಷಿ ಪರಿತಂದಬ್ಜಾಕ್ಷನಂ ನೋಡಿದಳ್ ೫೭೧

(ಜಗನ್ನಾಥವಿಜಯಂ ೧೬-೮೨)

ಎಱಕಂ ಚಿತ್ತದೊಳುಣ್ಮೆ ಪೊಣ್ಮೆ ನಡೆತಪೌತ್ಸುಕ್ಯದೊಳ್ ಮೇಲುದ
ಳ್ದೆಱಿ ವುತ್ತುಂಗಕುಚಂಗಳಿಂ ತೊಲಗಲಂಗವ್ಯಕ್ತಿ ಪುಷ್ಪಾಸ್ತ್ರನಾ
ದೋರ್ಜಿತಯಿಂದುರ್ಚಿದ ಬಾಳನೇಱಿಸಿರೆ ತನ್ನಂ ನೋೞ್ಪವರ್ ಸೋಲ್ತು ಮೆ
ಯ್ಮಱತಯಲ್ ಮೆಯ್ಮಱತದೊಲ್ದು ನೋಡಿದಳದೊರ್ವಳ್ ಗೋಪಮಾರ್ತಂಡನಂ ೫೭೨
(ಜಗನ್ನಾಥವಿಜಯಂ ೧೬-೮೩)

ಮನದೊಳ್ ಕೂಪಾಸ್ಯದೊಳ್ ಮಾನತೆ ಬಗೆಯೊಳೆ ರೋಷಂ ಲಸದ್ವಾಕ್ಯದೊಳ್ ಗ
ರ್ಜನೆ ಚಂಚತ್‌ದೃಷ್ಟಿಯಿಂದೀಕ್ಷಣೆಯೊಳನುನಯಂ ಪುರ್ಬಿನಿಂ ಜರ್ಬು ದೂತೀ
ಜನದೊಳ್ ಚಿತ್ತಾನುತಾಪಂ ಪ್ರಿಯರತಿಮುಖದೊಳ್ ಕೋಪಮೊಪ್ಪಲ್ಕೆ ಪೆಂಪಾ
ದ ನವೀನ ಪ್ರೌಢಿಯಿಂದಂ ಪ್ರಣಯಕಲಹಮಾಯ್ತೋಪನೊಳ್ ಕಾಂತೆಗಾಗಳ್ ೫೭೩

ನಳಿತೋಳೆಂಬುರುಪಾಶದಿಂ ಬಿಗಿದುಮಾಗಳ್ ಕೋಪದಿಂ ಸೆಜ್ಜೆಗೊ
ಯ್ದೆಳೆಯಲ್ಕಾಳಿಯರೆಲ್ಲಂ ನೋಡಿ ಮುಗುಳ್ದಿಂ ದುಶ್ಚೇಷ್ಟೆಗೆಯ್ಯುತ್ತಲ
ಗ್ಗಳಮಾಯಿತ್ತುವೆನುತ್ತೆ ಮೆಲ್ಲಡಿಗಳಿಂ ದೂಱುತ್ತಮುತ್ತಿರ್ಪ ಕೋ
ಮಳೆ ಪೊಯ್ಯಲ್ ನಗುತೆಯ್ದೆ ವಂಚಿಸುವ ಕಾಂತಂ ತಾನದೇಂ ಧನ್ಯನೋ ೫೭೪

ನಲ್ಲಳ ಕೂಡೆ ನಲ್ಲ ಮುಳಿಸಿಂ ಮೊಗಮಂ ತಿರುಪಿಟ್ಟು ಪಟ್ಟಿರಲ್
ಸಲ್ಲಲಿತಾಂಗಿಯುಃಫೆನುತ ಸುಯ್ದು ಮಲಂಗಿರಲಾ ವಿಟಂ ಮನಂ
ನಿಲ್ಲದೆ ಸೀಂತಡಂ ತರುಣಿ ಕರ್ಣದಪತ್ರಮನೋವಿ ತೀಡಲಾ
ಖುಲ್ಲಮನಂ ಕಲಂಕಿ ಚದುರಿಂ ಮೊಗದೊಳ್ ಮೊಗವೊಕ್ಕಲಿಕ್ಕಿದಂ ೫೭೫

ವಾರಿಜಾನನೆ ಸೆಂಡನಿಕ್ಕೆಲದೊಳ್ ನಿಮಿರ್ದು ಕರಾಗ್ರದೊಳ್
ಸಾರೆಮೆಟ್ಟುತ ಪೊಯ್ಯಲಂಗದ ನೂತ್ನ ಕಂಕಣ ರತ್ನಮುಂ
ಜೀರಕಧ್ವನಿ ಪಂಚಬಾಣಶರಾಸನಧ್ವನಿಯಂತೆ ವಿ
ಸ್ತಾರದಿಂ ಪೊಱಪೊಣ್ಮಲಾಡಿದಳೆಂದು ಕಂತುಕಕ್ರೀಡೆಯಂ ೫೭೬

ಮೊದಲೊಳ್ ಮೆಲ್ಲನೆ ಸೆಂಡನಿಟ್ಟು ನೆಗೆಯಲ್ ಮೆಲ್ಪಿಂದಮೊಳ್ಪೊಯ್ದು ಪೊ
ಣ್ಮಿದ ಸೆಂಡಂ ನಖದೀಪ್ತಿ ರಂಜಿಸುವಿನಂ ಮೇಗೆಯ್ದೊಳಾಂತಾಗಳಂ
ತದನಾಗಳ್ ಮುಗುಳ್ದುರ್ವಿಯೊಳ್ ಪೊಡೆದು ಗೋಮೂರ್ಧಂಬೊಲಿರ್ಪ್ಪೆಗೆ ತಾ
ಳದ ಸೂಳಂ ತಿಳಿದಾಡಿದಳ್ ಸುದತಿ ಪೆಂಪಿಂ ಕಂತುಕಕ್ರೀಡೆಯಂ ೫೭೮

ಭ್ರಮರಿಗುಡುತ್ತೆ ಕಂತುಕವನಂಗನೆ ಪೊಯ್ಯೆ ಕುಲಾಲಚಕ್ರದಂ
ತಮರ್ದಿರೆ ಸೆಂಡು ಮಿತ್ರತೆಯೊಳಂಗನೆ ಮಧ್ಯದೊಳೊಪ್ಪುತಿರ್ದಳು
ತ್ತಮ ಪರಿವೇಷ ಮಧ್ಯದ ಶಶಾಂಕಕಲಾಕೃತಿಯಂತೆ ಚಿತ್ರವಿ
ಭ್ರಮಮನೊಡರ್ಚುತೆಲ್ಲರೊಳಮೇವೊಗಟತ್ತಿಂ ಕಮನೀಯ ಕೇಳಿಯಂ ೫೭೯

ಬಡನಡುವಿಂಗೆ ಲಂಘಿಸಿ ಕುಚಕ್ಕಡರ್ದುಂ ಕಟಿಯಂ ತುಡುಂಕಿ ಕಂ
ಗಡೆಗಿರದೆಯ್ದಿ ಪಿನ್ನೆಲೆಗೆ ಪಾಯ್ದು ವಿಟಾಗ್ರಣಿಯಂತೆ ಕಂತುಕಂ
ತೊಡರ್ದಪುದೆಂದು ಕಾಂತೆ ಮೃದುಹಸ್ತದಿನೋವದೆ ಪೊಯ್ಯೆ ಮತ್ತೆ ಮೆ
ಲ್ಲಡಿಗಳನಂಟಿ ಪೆರ್ಚುವುದದಲ್ತೆ ಗುಣಾಧಿಕನೀತಿಧಾತ್ರಿಯೊಳ್ ೫೮೦

ವಿಲಸತ್ಕಂತುಕಮಂ ಪುಟಂ ನೆಗೆವವೋಲಾಪೊರ್ಯ್ದು ಸೆಂಡೆಯ್ತರಲ್
ನಲವಿಂದಂ ಪೊಱಗೆಯ್ಯೊಳಾಂತು ಮಗುಟ್ದಾರ್ಪಿಂ ಮಾಣದೋರಂತೆ ತಾ
ಳಲಯಂ ರಂಜಿಸೆ ಚಿತ್ರಬಂಧಗತಿಯೊಳ್ ಮೇಲ್ಮೆಟ್ಟಿನೊಳ್ ಪೊಯ್ದು ಕೋ
ಮಲೆ ಪುಷ್ಪಾಸ್ತ್ರ ನೆಗಟ್ದ ಮೂಡಿಕೆಗಳಿಂ ಪುಷ್ಪಾಸ್ತ್ರನಂ ಪೊಯ್ವಳೇ ೫೮೧

ನಡೆಸೆಂಡಂ ಪೊಡೆಸೆಂಡನಾರ್ಪಿನೊಡೆಸೆಂಡಂ ಪಾರ್ವಸೆಂಡಂ ಕರಂ
ಪಡಿಸೆಂಡಂ ಪುಡಿಸೆಂಡನಿರ್ದೆಸೆಗಳೊಳ್ ಪೋಸೆಂಡನೂರ್ಧ್ವಕ್ಕೆ ಪೊ
ಯ್ವಿಡುಸೆಂಡಂ ಪೊಱಗಯ್ಯೊಳಪ್ಪಳಿಪ ಸೆಂಡಂ ಚಿತ್ರಬಂಧಂಗಳೊಳ್
ತಡೆದೊಪ್ಪಂಬಡೆದಾಡಿದಳ್ ವಿಟಜನಂ ಕೊಂಡಾಡಿ ಬೆಂಡಪ್ಪಿನಂ ೫೮೨

## ಆಂದೋಳನ ಕ್ರಿಯೆ

ಏಱಿದಮಣಿಯುದಯನಗಂ
ತೋಱಿದ [1]ಮುಖಬಿಂಬವಿಂದು[1]ಬಿಂಬಮುಪಾಂಗಂ
ಮೀಱಿದ ಚಂದ್ರಿಕೆಯೆನೆ ಕಳೆ
ಯೇಱಿದ ಪಡಿಚಂದ್ರನಂತೆ ಸೌಂದರಿಯೆಸೆದಳ್ ೫೮೩

(ಗಿರಿಜಾಕಲ್ಯಾಣಂ, ೪-೧೫೮; ಸೂಕ್ತಿ ೮-೩೩೭)

ನೋಡುವನೇಕ ಸದ್ವಿಟಜನಂಗಳ [2]ಪೆಣ್ಗಳ[2] ಕಣ್ಗಳಾಡೆ ಕೊಂ
ಡಾಡುವ [3]ತತ್ಸಖೀಜನದ ಚಾಗದ ಭೋಗದ[3] ರಾಗವಾಡೆ ತೂ
ಗಾಡುವ ಬಾಲಕೀವ್ರಜದ ಕಂಕಣ ಝಂಕೃತಿ ಭೋಂಕನಾಡೆ ತಾ
ನಾಡಿದಳುಯ್ಯಲಂ ಮುಖಶಶಿಪ್ರಭೆ ಮುಚ್ಚಿ ಮುಸಂಕೆ ಚಂದ್ರನಂ ೫೮೪

(ಗಿರಿಜಾಕಲ್ಯಾಣಂ, ೪-೧೫೯; ಸೂಕ್ತಿ ೮-೩೩೬)

ಉಯ್ಯಲೆ ಚಿತ್ರವೃತ್ತಿಯಱಿದಾಡುವ ವಲ್ಲಭನಲ್ಲಿಗುಯ್ಯಲೇಂ
ಉಯ್ಯಲೆ ಜೇಟಮಂ ಬೆಳಸಿ ನಲ್ಮೆಯನಾಂಟಿಪಗೀಗ ಉಯ್ಯಲೇಂ
ಉಯ್ಯಲೆ ಪುಷ್ಪಚಾಪಶರಸನ್ನಿಭನಪ್ಪವನಲ್ಲಿಗುಯ್ಯಲೇ
ಉಯ್ಯಲೆಯೆಂದು ತಾಂ ರಭಸದಿಂ ಸತಿ ಪಾಡುತಲುಯ್ಯಲಾಡಿದಳ್ ೫೮೫

---

[1]ಮೊಗನೋಡಲಿಂದು(ಸೂ) [2]ಪಿಂಗಳ(ಸ) [3]ಸತ್ಸಖೀಕುಲದ ಭಾಗದ ಜಾಗದ(ಸ)

ನೆರೆದಳಿ ಪಾಱುವಂತಿರೆ ಕುರುಳ್ ನೊಲಿಗಳ್ ಪೊಣರ್ವಕ್ಕಿ ಪಾಱುವಂ
ತಿರೆ ಪೊಳೆವಕ್ಷಿಗಳ್ ಚಳಚಕೋರಯುಗಂಗಳೆ ತಳ್ತು ಪಾಱುವಂ
ತಿರೆ ಶಿಖಿ ಪಾಱುವಂತಿರೆ ಬಟಿಲ್ಪುಡಿ ತಾನಲರಂಬು ಪಾಱುವಂ
ತಿರೆ ಮಿಗಿಯೇಱಿ ಪಾಱಿ ಗಗನೇಚರಿಯಂತೊಲೆದುಯ್ಯಲಾಡಿದಳ್ ೫೮೬
(ಲೀಲಾವತಿ, ೨-೩೮; ಸೂಕ್ತಿ ೮--೩೩೦)

ಗಗನಚರಂ ಗ್ರಹಾಧಿಪತಿಯೂರ್ಜಿತ ಪಾಂಡುಮಯಂ ಕಳಂಕನಾ
ಮೃಗಧರನಬ್ಜವೈರಿಯಹಿಪೀಡಿತನುನ್ನತ ದೋಷಕಾರಿ ನೆ
ಟ್ಟನೆ ನೆಲೆಗೆಟ್ಟ ಪಾಪಿಯೆನುತಂ ಕೆಡೆಬಯ್ದಿದಿರಿರ್ದ ಚಂದ್ರನಂ
ನೆಗೆದೊದೆವಂತಿರೆಯ್ದೆ ಜಡಿದುಯ್ಯಲನಾಡಿದೊಳೊರ್ವಳಟ್ಟಿಯಿಂ ೫೮೭

ಅವಳಾಟಂ ವಿಟಕೋಟಿಯಾಪ್ತಧನಮಂ ಹೋಗಾಡುವಾಟಂ ಬಟಿ
ಕ್ಕವಳಾಟಂ ಮದನಾಂಗನಾಮಹಿಮೆಯಂ ಮೇಲಾಡುವಾಟಂ ಬಟಿ
ಕ್ಕವಳಾಟಂ ನೃಪ ನಿನ್ನ ಪೆಲ್ಲೆರ್ದೆಯನಿಂದಳ್ಳಾಡುವಾಟಂ ಮಹೀ
ಧವ ಪೇಟಿಲ್ಲದೊಡುಯ್ಯಲಾಟವೆ ತೊಲಂಗೈ ಮಾಣ್ದು ನಿನ್ನಾಟಮಂ ೫೮೮

ಪವಳದಿನಿಂಗಡಲ್ ಶಫರದಿಂ ಕೊಳನುನ್ಮದಭೃಂಗನಾದದಿಂ
ದವಿರಳಪುಷ್ಪಭೂಜಮೆಸೆವಂತಿರೆ ಚಂದ್ರಿಕೆ ರತ್ನಭೂಷಣಾಂ
ಶುವಿ[1]ನೊಳೆ ತೋರ್ಪ[1] ಮಾಪೊರ್ಳಪಿನಿಂ ಮೃದುಗೇಯದಿನೊ[2]ಪ್ಪ[2]ಲುಯ್ಯಲಾ
ಡುವ ಲಲಿತಾಂಗಿ ತನ್ನೆಡೆಗೆ ನೀಱರ ಚಿತ್ತಮನುಯ್ಯಲಾಡಿದಳ್ ೫೮೯

ಈ ಪೊಸಸುಗ್ಗಿ ರಂಜಿಸುದುದೀ ಪೊಸಜವ್ವನೆಯಿಂದಮೊಳ್ಜಸಂ
ವ್ಯಾಪಿಸೆ ಜಾಗಮಂ ಮೆಱೆದು ಕಾಮಿನಿ ಕಾಮಭುಜಾಗ್ರಮಂ ಜಯ
ಶ್ರೀಪರಿದೇಱಲೇಱಿ ತಳಿರುಯ್ಯಲನಾ ಖಚರೀಜನಂಗಳೊಳ್
ರೂಪಿಡೆ ತನ್ನ ರೂಪೊಲಿದು ಪಾಡಿದಳಚ್ಯುತನಂಕಮಾಲೆಯಂ ೫೯೦
(ಜಗನ್ನಾಥವಿಜಯಂ, ೧೬-೧೪೪; ಸೂಕ್ತಿ ೮-೩೨೪)

ಮೂಡಿದುದಿತ್ತಲೊಂದಭಿನವಂ ಶಶಿಬಿಂಬಮೆನಿಪ್ಪ ಶಂಕೆಯಂ
ಮಾಡೆ ಮನಕ್ಕೆ ಮುದ್ದುಮೊಗಮುಜ್ವಲಚಂದ್ರಿಕೆಯಲ್ಲಿ [3]ನೀಡುಮೋ[3]
ಲಾಡುವ ಲೀಲೆಯಿಂದೊಲೆ[4]ಯೆ ಮೆಯ್ಯ್[4] ಮೃಗಲಕ್ಷ್ಮಮೃಗಕ್ಕೆ ಗೋರಿಯಂ
ಪಾಡುವ ಮೂಟಿಕ್ಕಿಯಿಂ ಬಳೆಯೆ ಗೀತರವಂ ತಳಿರುಯ್ಯಲಾಡಿದಳ್ ೫೯೧
(ಚಂದ್ರಪ್ರಭಪುರಾಣಂ, ೮-೪೮; ಸೂಕ್ತಿ ೮-೩೨೬)

---

[1]ನಲರ್ಗಣ್ಣ(ಸೂ) [2]ಯ್ಯ(ಸೂ) [3]ನಿಂದುಮೇ(ಸೂ) [4]ಯಲೀ(ಅ)

ಕಡೆಗಣ್ಣಿಂದಿಸುವಂತೆ ಚಂದ್ರಕರಮಂ ತಂಗಾಳಿಯಿಂ ಜೋಲ್ವ ಪೂ
ಮಿಡಿಯುಂ ರ್ಘೋಂಪಿಸುವಂತೆ ಮುದ್ದುಮೊಗದಿಂ ಪೂರ್ಣೇಂದುಬಿಂಬಕ್ಕೆ ದಾ
ೞಿಡುವಂತೆಲ್ಲರ ಧೈರ್ಯಮಂ ಮೊಲೆಯ ಬಿಣ್ಪಂ ನುರ್ಗಿ ನೂಂಕಲ್ಕೆ ಧೀಂ
ಕಿಡುವಂತಾಡಿದಳುಯ್ಯಲಂ ತರುಣಿ ತಂದಳ್ ಕಾಮನಿಂ ಪುಯ್ಯಲಂ ೫೯೨
(ಅನಂತನಾಥಪುರಾಣಂ ೮-೬, ಸೂಕ್ತಿಸುಧಾರ್ಣವಂ ೮-೩೨೭)

ಇವಳೀ ಲೋಚನಮೆನ್ನ ಬಾಣಮಿವಳೀ ಪುರ್ವೆನ್ನ ಕರ್ವಿಲ್ಲು ಮಾ
ಯ್ದಿವಳೀ ಸೋರ್ಮುಡಿಯೆನ್ನ ಕೇತನದ ಚೆಲ್ವಂ ಕೊಂಡೊಡೇನೊಂದು ದೋ
ಷಮೆಯೆನ್ನ್ನೊಸಳ ರೂಪನೀಕೆ ಗೆಲಲೇಕೆಂದಂಗಜಂ ಕಟ್ಟಿ ತೂ
ಗುವವೋಲ್ ತೂಗಿದನುಯ್ಯಲೇಱಿಸಿ ವಿಟಂ ವಿಭ್ರಾಂತೆಯಂ ಕಾಂತೆಯಂ ೫೪೩
(ಲೀಲಾವತಿ ೨-೪೧, ಸೂಕ್ತಿಸುಧಾರ್ಣವಂ ೮-೩೨೮)

ತೂಗಿ ನಿಜೇಶನಾ ಸೊಬಗನೞ್ಕಿಸೆ ನೋೞ್ಪವರುತ್ತಮಾಂಗಮಂ
ತೂಗಿ ತಗುಳ್ದು ನೋೞ್ಪ ವಿಟಕೋಟಿಗೆ ಮನ್ಮಥನಾತ್ಮಭಾವಮಂ
ತೂಗೆ ಪೊದೞ್ದ ಮಾಂದಳಿರ ತೋರಣಮಂ ಸುೞಿತಪ್ಪ ತಂಬೆಲರ್
ತೂಗೆ ವಿಲಾಸದಿಂದೆ ಪೊಸಪೊಂಬೆಸದುಯ್ಯಲನೊರ್ವಳಾಡಿದಳ್ ೫೯೪
(ಸೂಕ್ತಿಸುಧಾರ್ಣವಂ ೮-೩೨೯)

ಆಡೆ ಕುರುಳ್ ನೊಸಲ್ವಿಡಿದು ಸೋರ್ಮುಡಿ ಬೆಂಬಿಡದಾಡೆ ಕಣ್ಗಳೊ
ಲ್ದಾಡೆ ವಿಲಾಸಹಾಸರಸದೊಳ್ ಮೊಲೆ ಮೇಲುದನೊರ್ಮೆಗೊರ್ಮೆ ಗೆ
ಲ್ದಾಡೆ ಮನೋಜರಾಜನಧಿದೈವತೆ ಕೈನಿರಿದಾಡೆ ಜೇಟದ
ಚ್ಚಾಡೆ ಮದಾಳಿ ಸುಯ್ಗೆ ಸುೞಿದಾಡೆ ವಿಳಾಸದಿನುಯ್ಯಲಾಡಿದಳ್ ೫೯೫

ನಯನಮರೀಚಿಯುಂ ಕಬರಕಾಂತಿಯುಮಿರ್ದೆಸೆಗಿಂದ್ರನೀಲಮಾ
ಲೆಯ ನವಮೌಕ್ತಿಕಾವಳಿಯ ರಜ್ಜುಗಳಂತಿರೆ ಚಂದ್ರನುಂ ರತಿ
ಪ್ರಿಯನುಮದೇಂ ತೊಡರ್ಚಿ ಪಿಡಿದೊಟ್ಟೆ ವಿರಾಜಿಸೆ ತೂಗುವಂಗಭಂ
ಗಿಯೊಳೊಲೆದುಯ್ಯಲಾಡಿ ಕಡು ಬಾಡಿಸಿದಳ್ ವಿಟರಂತರಂಗಮಂ ೫೯೬
(ಸೂಕ್ತಿಸುಧಾರ್ಣವಂ ೮-೩೩೩)

ಪದನಖಕಾಂತಿ ತಾರಗೆಯ ಕಾಂತಿಯನೇಳಿಸೆ ಸುಯ್ಯ ಕಂಪಲ
ರ್ಗೊದವಿಸೆ ಕಂಪನಕ್ಷಿಗಳ ಚಂದ್ರಿಕೆಯಚ್ಚ ಚಂದ್ರಿಕೆಯ ಪಳಂಚೆ ಗೇ
ಯದ ರುತಿ ಕಂತುಚಾಪರುತಿಯೊಳ್ ತಡವಾಗೆ ಮುಖೇಂದುವಿಂದುವಿಂ
ಗಿದಿರಿಡೆ ಕಾಂತೆ ಮಿಂಚು ಪೊಳೆದಾಡುವವೊಲ್ ಪೊಳೆದುಯ್ಯಲಾಡಿದಳ್ ೫೯೭

ಜಡಿವ ರವಂಗಳಿಂ ಸೆಳೆದ ಕೈದುಗಳಿಂ ಕರೆದೀವ ತೋಟಿಯಿಂ
ದೊಡಸೆಯ ವೀರರಿಂ ಪೊಡೆವ ಜೇಗಟೆಯಿಂ ಕಡುಪಾದ ತೋಟಿಯು
ಗ್ಗಡಣೆಗಳಿಂ ಮಹಾಧ್ವನಿಯ ಕೊಂಬುಗಳಿಂ ಭಯಮಂ ನೆಗಳ್ಚುತಿ
ರ್ದೆಡೆಯೊಳು ಮುಂದೆ ಸಂದಣಿಸುವರ್ ಪುರರಕ್ಷಕರರ್ಧರಾತ್ರಿಯೊಳ್ ೫೫೮

ಓರಂತೆ ಮೆಚ್ಚಿದಂ ಕೃತಿ
ಸಾರಂ ಶಶಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೫೫೯

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾನೂತನಪುರಾತನಪ್ರಮಾಣ
ಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಚಂದ್ರೋದಯವರ್ಣನಂ ಅಷ್ಟಮಾಶ್ವಾಸಂ

# ಸೂರ್ಯೋದಯವರ್ಣನಂ

ಕುಮುದಂ ಮೀನ್ ಚಂದ್ರಮಂ ಚಂದ್ರಿಕೆ ಕಳೆಯಱತಂ ಜ್ಯೋತಿಸಸ್ಯಂ ನಯಂಗುಂ
ದೆ ಮನಂ ಪಂಕೇರುಹಂ ತಣ್ಣೆಲರವಸರತೂರ್ಯಂ ರಥಾಂಗದ್ವಯಂ ಸಾಂ
ಧ್ಯಮಯೂಖಂ ಪೆರ್ಚೆ ಮರ್ಬುಂ ಸುಸಿಲವಱಿಪು ಪಕ್ಷಿಸ್ವನಂ ಭೈರವೀರಾ
ಗಮುಗುರ್ವಂ ಬೀಱೆ ಪಾಂಥರ್ ನಡೆಯೆ ಕವಿಯಿನಕೋರ್ದಯಸ್ತೋತ್ರಮಕ್ಕುಂ ೧

(ಸೂಕ್ತಿಸುಧಾರ್ಣವಂ, ೯–೧)

ಹಳಹಳಸಿರ್ದ ತಾರೆ ಕಳೆಗುಂದಿದ ಚಂದ್ರನಲರ್ಕೆಗುಂದಿದು
ತ್ಪಲಮತಿ ಶೈತ್ಯಮಪ್ಪೆಲರು ಸಂದುವ ದೀಪ್ತಿಯಗಲ್ವ ಜಾರೆಯರ್
ಗೞಿಪುನ ಕೋೞಿ ಶಂಖನುರುಣಚ್ಛವಿ ಕೆಂಪಿನಮಂಡಲಂ ಕತ
ಕ್ಕೆಳಸುವ ಕೋಕಮಬ್ಜವಿಕಸಂ ಸಲೆಸೂರ್ಯನ ವರ್ಣನಕ್ರಮಂ ೨

(ಸೂಕ್ತಿಸುಧಾರ್ಣವಂ, ೯–೨)

ನಿರುಪಮ ಸುಕುಮಾರತೆಯಿಂ
ಧರಣಿಗೆ ನೆಱೆಯಱಿಪಲುಷ್ಣಕರನ ಕರಂಗಳ್
ಪರೆಯದ ಮುಟ್ಟದ ಮುನ್ನಮೆ
ಮುರುಟಿದವೆನೆ ಮುಗಿದುವುತ್ಪಲಪ್ರಕರಂಗಳ್ ೩

(ಲೀಲಾವತಿ, ೩–೮; ಸೂಕ್ತಿಸುಧಾರ್ಣವಂ, ೯–೩)

ಅಮೃತಕರಸಂಗಮಂ ಮಾ
ಡಿ ಮಗುೞ್ದಂತುಷ್ಣಕರಗೆ ಮೆಯ್ಯೊಡ್ಡುವೆನೆಂ
ಬಮಳಿನ ಸುಕುಮಾರತೆಯಿಂ
ಕುಮುದಿನಿ ತಲೆವಾಗಿ ದುಗುಡಮಂ ತಳೆದಿರ್ದಳ್ ೪

ಪೊಳಸಿಂಬುವೋಯ್ತು ತಾರಗೆ
ಬೆಳಗಱತುದು ಹಿಮಕರಂಗೆ ನಾಡೆ ಚಕೋ[1]ರಾ
ವಳಿ ಬೆಱಗಾದುವು[1] ಕುಮುದಂ
ಗಳ ನಗೆಯುಗೆಯೆತ್ತಿ ಪೋಯ್ತು ಮುನ್ನೇಸಱಿನೊಳ್ ೫

(ಲೀಲಾವತಿ, ೩–೫; ಸೂಕ್ತಿಸುಧಾರ್ಣವಂ ೯–೪)

---

[1] ರಂಗಳಿಗೆ ಬಱಿವಾಯ್ತು(ಸ)

ನಿಲ್ಲದೆ ತಮೋಗಜಂ ಕಿಱು
ದಿಲ್ಲದೆ ಬೆಳೆದೊಗೆದ ಪಡುವಣವನೀಜನನುಂ
ಶಲ್ಲಿ ಮರವಾಯೆ ಪಡುಗಡ
ಲಲ್ಲಿದಿರ್ದುವು ಬಹಳ ತರಳ ತಾರಾಕುಸುಮಂ ೬
(ಸೂಕ್ತಿಸುಧಾರ್ಣವಂ, ೯-೫)

ಒದವಿದ ಗಗನಾಂಗಣದೊಳ್
ಕೆದಱಿದ ಪೂವಲಿಯ ಕಸವನೇಂ ಕಳೆದರೊ ದಿ
ಕ್ಸುದತಿಯರೆಂಬಂದದಿನೊ
ರ್ಮೊದಲೊಳ್ ಮೀನ್ ಪರೆದು ಪೋದವರುಣೋದಯದೊಳ್ ೭
(ಸೂಕ್ತಿಸುಧಾರ್ಣವಂ ೯-೭)

ತುಱುಗಿದ ಗಗನಾಂಗಣದೊಳ್
ಮಿಱುಗುವ ತಾರಾನಿಕಾಯ ತಂಡುಲಕುಲವಾ
ಯ್ದಱಿಸಿ ರುಚಿಚಂಚುವಿಂದಂ
ಕುಱುಕಿದುದು ಪತಂಗತಾಮ್ರಚೂಡಂ ಕ್ರಮದಿಂ ೮

ಅರುಣರುಚಿ ರುಚಿರಾಂಬರಂ ಲಂ
ಬರುಚಿ ಜಟಂ ನೋದು ತಿಮಿರ ಮಧುಕರಕುಳಮಂ
ಕರಕಿಸಲಯದಿಂದಂ ಭಾ
ಸ್ಕರಭೌತಿಕನಾಯ್ದು ನೆಯ್ದೆ ನೀರ್ವೂವುಗಳಂ ೯
(ಲೀಲಾವತಿ, ೭-೧೦೧)

ಒದವಿದ ತಾರಗೆಗಳ್ ನಿ
ಲ್ಲದವೆಲ್ಲಂ ಪರೆದು ಪೋಗೆ ಬೆಳಗಪ್ಪಾಗಳ್
ಚದುರಂಗದ ಬೆಳ್ಗರವುಡು
ಗಿದ ನೀಲದ ಮಣಿಯ ಮೂಟಿಕ್ಕಯಾಯ್ತಾಕಾಶಂ ೧೦
(ಸೂಕ್ತಿಸುಧಾರ್ಣವಂ, ೯-೭)

ಎಸಗಿದುದು ತಣ್ಣೆಲರ್ ನಾ
ಲ್ದೆಸೆ ಪಳಚನೆ ತೊಳಗಿ ಬೆಳಗಿ ತುಱುಗಿದ ತಾರಾ
ಪ್ರಸರಮವು ಕಂಚುಗಾಟಿ
ಪ್ರಸರಮನುಡುಗಿದವೊಲುಡುಗಿ ಪೋದವು ನಭದೊಳ್ ೧೧
(ಸೂಕ್ತಿಸುಧಾರ್ಣವಂ, ೯-೮)

## ಶಂಖ :

ಜನಿಸಿದ ತಾಣಮೇಂ ಕಿಱಿದೆ ವಾರ್ಧಿ ಸಹೋದರಿಯೇಂ ದರಿದ್ರೆಯೇ
ಘನತರ ಭಾಗ್ಯಲಕ್ಷ್ಮಿ ಪೊಡಹುಟ್ಟಿದನೇಂ ಲಘುವೇ ಹಿಮಾಂಶು ಭಾ
ವನೆನಿಪನೇಸು ಜಾವಳನೆ ಕೃಷ್ಣನುಮೆಂಬುದ ಕೇಳಿ ಮರ್ತ್ಯರೆ
ನ್ನನೆ ಮಿಗೆ ಕಚ್ಚಿ ಕೊಲ್ವರೆನುತೊಳ್ಳಿವೊಲಾದುದು ಶಂಖನಿಸ್ವನಂ ೧೨

ವಾರಿಧಿ[೧]ಜನ್ಮ[೧]ನಂ ಹರಿಕರಾಶ್ರಯನುನ್ನತದೇವಪೂಜನಾ
ಕಾರಣನಂ [೨]ವಿಶುದ್ಧಶುಚಿ ನಿರ್ಮಳನಂ[೨] ದುರಿ[೩]ತಾ[೩]ಪಹಾರಿಯಂ
ಕಾರಣಮಿಲ್ಲದೀ [೪]ಮನುಜರೆಂಜಲಮಾಡಿದರೆಂದು[೪] [೫]ಶಂಖವ
ಬ್ಜಾರಿ[೫]ಧರಂಗೆ ಪುಯ್ಯಲಿಡುವಂ[೬]ತೆಸೆದಿ[೬]ರ್ದುದು ಸುಪ್ರಭಾತದೊಳ್ ೧೩
(ಸೂಕ್ತಿಸುಧಾರ್ಣವಂ ೯-೨೫)

ಪರಮಪವಿತ್ರನಲ್ಲವೇ ಶಿವಾರ್ಚನಯೋಗ್ಯತೆ ಶೂರನಲ್ಲವೇ
ಹರಿಕರಪದ್ಮಮಂದಿರಕೆ ಸಿಂಗರಮಂಗಕೆ ಪಾಂಗಿಯಲ್ಲವೇ
ತರುಣಿಯರ್ಗೊಪ್ಪುವೆತ್ತ ಕೊರಳ್ಗಂ ದೊರೆಯೆಂಬುದ ಕಂಡು ಕೇಳಿ ಕಂ
ಗುರುಡನು ಕಚ್ಚಿ ಕೊಲ್ವನೆನುತಂ ಮೊಱೆಯಿಟ್ಟುದು ಶಂಖನಿಸ್ವನಂ ೧೪

ಅಟ್ಟಳೆಯಂ ಪಳಂಚಲೆದು ಗೋಪುರಮಂ ಪರಿದೇಱಿ ಕೋಂಟೆಯಂ
ಮೆಟ್ಟಿ ಸುಧಾಶ್ರಮಾವಳಿಗೆ ಲಂಘಿಸಿ ಹರ್ಮ್ಯತಳಕ್ಕೆ ಪಾಯ್ದು ಚೌ
ವಟ್ಟದೊಳೆಯ್ದಿ ದೇವಕುಲದಾದಲೆಯಿಂ ಗಗನೋದರಕ್ಕೆ ಧೀಂ
ಕಿಟ್ಟಿದುದು ದುಂದುಭಿಸ್ವನಮನೇಳಿಸಿ ಭೋಂಕನೆ ಶಂಖನಿಸ್ವನಂ ೧೫
(ಪಂಪರಾಮಾಯಣಂ ೫-೧೦೭, ಸೂಕ್ತಿಸುಧಾರ್ಣವಂ ೯-೪೯)

ಸರಸೀಸಂಜಾತಜಾತೋ[೭]ನ್ನಿಶಿತ[೭]ನಿಶಿತಸೌರಂಭನಾದಂ
ಧರಣೀದಿಗ್ವ್ಯೋಮಭಾಗಾವೃತಧರಿತಘನಧ್ವಾಂತಸಂಭೇದನಾದಂ
ಸುರತಾಸಿಕ್ತಪ್ರಜಾಲಿಂಗನಚಲನಕರಪ್ರೌಢಿತಾನಾದನಾದಂ
ಪರೆದತ್ತು[೮]ಗಳ್[೮] ಪ್ರಮೋದಂ ಶಿವನಿಳಯಕುಳೋತ್ಪಾ[೯]ತಮೀ[೯] ಶಂಖನಾದಂ ೧೬

---

[೧]ಗರ್ಭ(ಸೂ) [೨]ಕರಂ ಶುಚಿಯುಮುಜ್ಜ್ವಳನಂ(ಸೂ) [೩]ತೋ(ಸೂ) [೪]ಯಧಮನೆಂಜನ ಮಾಡಿದನೇದು(ಸೂ) [೫]ವಾಚಾರ(ಸೂ) [೬]ದದೊಲಿ(ಸೂ) [೭]ನ್ನಿಷಿ(ಸ) [೮]ದಂ(ಅ) [೯]ದಮಾ(ಅ)

## ಗತಜಾರೆ :

ದುಗುಲಮನುಟ್ಟು ಕೊಟ್ಟು ಪೊಸಮುತ್ತನೆ ಚಂದನದಣ್ಪನಿಕ್ಕಿ ಮ
ಲ್ಲಿಗೆಯ ಸರಂಗಳಂ ಮುಡಿದು ಚಂಪಕಮಾಲೆಯ ಸುತ್ತಿ ಮೇಲೆ ತುಂ
ಬಿಗಳೆಡೆಯಾಡದಂತೞಯಲಾಗದವೋಲ್ ಚಂದ್ರಿಕಾಮರೀ
ಚಿಗಳೊಡಗೂಡಿ ಪೋದಳಭಿಸಾರಿಕೆ ಮುತ್ತಿನ ಬೊಂಬೆಯೆಂಬಿನಂ ೧೭
(ಲೀಲಾವತಿ ೨-೩೭; ಸೂಕ್ತಿಸುಧಾರ್ಣವಂ ೮-೩೩೮)

ಇನಿಯನಲಂಪಿನಿಂ ತೆಗೆದು ಚುಂಬಿಸಿ ತಂಬುಲಮಿ[1]ಕ್ಕಿ[1] ಸುಯ್ದು ಪೊ
ಯ್ದನುವಿಸಿ ಕೂಡೆ ನೊಂದ ತುಟಿಯಂ ತುದಿನಾಲಗೆಯಿಂದೆ ಪತ್ತಿದಿಂ
ಪನೆ ಸವಿನಂತಿರೇಂಟೆ ಕುಚದೊಳ್ ನಸುನಾಟಿದ ತನ್ನಖಾಂಕಮಂ
ತನುರುಹದೇೞ್ಗೆಯಿಂಡೆಳ[2]ವಿ ನೋಡುತಲಿರ್ದಳು ಸುಪ್ರಭಾತದೊಳ್[2] ೧೮
(ಲೀಲಾವತಿ ೩-೧೬; ಸೂಕ್ತಿಸುಧಾರ್ಣವಂ ೯-೩೪)

ನಸುನನೆದೊಯ್ಯನುಳ್ಳಲರೆ ಪೋೞ್ದಲೆ ಕಂದದೆ ಕೂಡೆ ಬಣ್ಣದಿಂ
ರಸಮೊಸರ್ವಂತಿರೊಕ್ಕ ನಱುದಂಬುಲಕಂ ಮುಡಿಯಿಂ ಕೞಲ್ದು ಬಿ
ೞ್ದಸೆವಲರ್ಗಂ ಮದಾಳಿ ಮೊರೆದೇೞ್ತುಱುಗುತ್ತಿರೆ ಬೀದಿಗಳ್ಳರ
ಪ್ಪಸತಿಯರೆೞ್ದು ಪೋದುದನೆ ಪೇೞ್ವವೊಲಿರ್ದುದು ಸುಪ್ರಭಾತದೊಳ್ ೧೯
(ಲೀಲಾವತಿ ೩-೧೭; ಸೂಕ್ತಿಸುಧಾರ್ಣವಂ ೯-೩೬)

ರಸದ ಮಳಯಜದ ಘುಸೃಣದ
ಕುಸುಮದ ಕಪ್ಪುರದ ಕವಿವ ಸೊವಡಿಂಗಳಿಗಳ್
ಮುಸುಱಿ ನವನೀಲಪಟಮಂ
ಮುಸುಕಿದವೊಲ್ ಜಾರೆಯೊರ್ವಳಡಿಯಿಡುತಿರ್ದಳ್ ೨೦
(ಲೀಲಾವತಿ ೩-೧೨; ಸೂಕ್ತಿಸುಧಾರ್ಣವಂ ೯-೩೨)

ಉಗುತಂ ಪೂಮಾಲೆಯಂ ಸೋರ್ಮುಡಿಯನಡಿಗೆ ಬಿೞ್ಪೆಂಬವೋಲ್ ನೀವಿಯಂ ಸಾ
ವಗಿಸುತ್ತಂ ತೂಕದಿಂದಂ ನಡೆಗೆಡಿಪ ನಿತಂಬಂಗಳಂ ಕಟ್ಟುವಂತ
ಕ್ಷಿಗಳಂ ಮುಚ್ಚುತ್ತೆ ನಿದ್ರಾಜಡತೆಯಿನಡಿಗೋರೊರ್ಮೆ ಭೂಭಾಯೆಯಂ ನುಂ
ಗುಗುಮೆಂಬಂತಾಗಳಕೋರ್ವಯ ಭಯವಶದಿಂ ಪಾೞ್ದೆ ಪೋತಂದಳೊರ್ವಳ್ ೨೧
(ಲೀಲಾವತಿ ೩-೧೪; ಸೂಕ್ತಿಸುಧಾರ್ಣವಂ ೯-೩೩)

---

[1]ತ್ತು(ಸ) [2]ಸಿ ನೋಡುತನೇಂ ಕಿಱಿಜೋಡೆ ಪೋದಳೋ(ಅಸೂ)

ಏಕಾದುದುಃ ಬೆಳಗೀಗಳೆ
ದೇಕಾದುದು ಸುಸಿಲ್ಗೆ ತವಿಲುವೇಕಾದುದುವೆಂ
ದಾ ಕಾಮಿನಿಯರ್ ಸುರಪನ
ಧಿಕ್ಕರಿಸುತ ಜಾರರೊಡನೆ ನುಡಿವುತ ನಡೆದರ್ ೨೨

ನಸು ನಾಣುಬ್ಬುವ ಕಾತರಂ ಜಿನುಗುತಿರ್ಪ ಲಲ್ಲೆ ಸರ್ವೇಚ್ಛೆಯಿಂ
ಮುಸೆದಂಗಂ ಕರಗಿಪ್ಪ ಚಿತ್ರವೊಱಿಪೆದ್ದಾ ಜೀವವೊಂದಾಸೆಯೊಳ್
ಬಿಸುಪಿಂದುಣ್ಮುವ ಘರ್ಮ ಘರ್ಮಜಲವೊರ್ನೊಱಾಗಿ ತಾಂ ಮಾಡುವಾ
ಪೂಸಕೂಟಂ ಮಿಗಿಲಾಗೆ ಜಾರನೊಡನಿರ್ದಾ ಜಾರೆಯೇಂ ಜಾಱಿದಳ್ ೨೩

ಕರ್ದುಕಿಸದಧರಂ ತಾಂ ಪತಿ
ಗೆರ್ದೆಗಾಣಿಸದೆಯ್ದೆ ಕೇಳ್ದು ಮಾಡುವ ರತಿಯಿಂ
ಬರ್ದುಂಕಂ ಕೆಡಲೀಯದಸತಿ
ಬರ್ದಿಲಾಣ್ಮಂ ಮೆಚ್ಚುವಂತೆ ನಡೆತರುತಿರ್ದಳ್ ೨೪

ಇನಿಯನ ಕೂಟದೊಂದು ಸುಖದಿಂದೆರ್ದೆಯಂ ನೆಱೆ ತಾಗಲೊರ್ವಳಾ
ತನಿಸೊಗಸಿಂ ಪೊರಳ್ದು [ತನಿಸೋಂಕಿ] ಜಿನುಂಗುವಳಂತುಟಾಡಿ ಮೇಣ್
ನೆನವಿರದೊಯ್ಯನೋಸರಿಸಿ ಕಣ್ಣರೆದೇಲಿಸಿಯಿಂದಿನಂದವೆಂ
ದಿನದಿನಕಪ್ಪುದೇಯೆನುತ ನಲ್ಲನನಪ್ಪುತ ಜಾರೆ ಜಾಱಿದಳ್ ೨೫

ಮನೆಯೊಳಗಿರ್ದರೊಳ್ ಪೊರೆ ಕರಂ ಪೊಗದಂತೊಳಪೊಕ್ಕು ಮುನ್ನಿ ಪೊ
ಲ್ದನುದಿನ ಗಂಡನಿಚ್ಚೆಗಳನೇ ಹಿತೆಯೆಂಬವೊಲೆಯ್ದೆ ಮಾಡುವಾ
ಮನೆಯೊಳೆ ಮುನ್ನನಟ್ಟ ಕರುಗಂಭದಮಾಟಿಕ್ಕೆಯೊಳಿರ್ಪ ರಾತ್ರಿಯೊಳ್
ನೆನೆವುತಲೆಯ್ದೆ ಬರ್ಪ ಚತುರತ್ವದ ಚೆಲ್ವಿನ ಜಾರೆ ಜಾಱಿದಳ್ ೨೬

ಮುದದಲರ್ದಂಗಮುಬ್ಬುವ ನವಿರ್ ಪರಿತಪ್ಪ ಬೆಮರ್ಕೆ ಸಿಕ್ಕುಗಳ್
ಕದಲದ ಜವ್ವನಂ ಕುಱುಪನಾನದ ಬಾಯ್ದೆಱೆ ತಾಗದಾ ಪೊಯಿಲ್
ಪದಿರ್ಪಡಿ ನೀಳ್ದ ಸುಯ್ ಮಿಡಿಕುವಳ್ಕೆರ್ದೆ ಜರ್ವ್ರವ ಪುರ್ವು ಚಿತ್ರದಿಂ
ದೊದವಿರೆ ಜಾತಿಜಾರೆ ನೆಱೆ ಜಾರನೊಳಿರ್ದು ಜಲಕ್ಕನೆಯ್ದಿದಳ್ ೨೭

## ಗತದೀಪ:

ಸಲೆ ಸಖನಾದೊಡಂ ಬಲವದುಳ್ಳನಿತುಂ ಹಿತವಂತನಪ್ಪನೀ
ಕಲಿಯುಗದಲ್ಲವಂ ಬಡವನಾದೊಡೆ ಬಲ್ಲೆಳೆ ಶತ್ರುವಪ್ಪುದೇ
ನೆಲೆಯಿನಿಪಂದಮಂ ಧರೆಗೆ ತೋಱುವವೋಲುದಯಾನಿಳಂ ಕರಂ
ಬಗಿದು ಗವಾಕ್ಷದೊಳ್ ಪುಗುತೆ ದೀವಿಗೆಯಂ ಕೆಡಿಸಿತ್ತು ನಂದುವೋಲ್ ೨೮

ಉಗುಬ್ಬಿವು ಪೀರ್ದ ಕಟ್ಟಿಲೆಯುನಟ್ಟಿಸಲಾಱದೆ ಕಾಱುವಂತೆ ಕಾ
ಡಿಗೆಗಳನಾಗಳೋಪವರ ಕೇಳಿಗಳಂ ತಲೆಯೆತ್ತಿ ನೋಡುವಂ
ತೊಗೆದುವು ನಾಡೆ ಸೊಣ್ಣೆ ತಲೆಯಂ ತೆಗೆವಂತಿರೆ ಪಾತ್ರಮಧ್ಯದೊಳ್
ತೆಗೆದುಡುಗಿರ್ದ[೧]ವೊ ಬೆಳ್ಗುಡಿಗಳಂ ರತ್ನದೀಪಿಕೆಗಳ್[೧] ನಿಶಾಂತದೊಳ್ ೨೯
(ಲೀಲಾವತಿ ೩–೧೯, ಸೂಕ್ತಿಸುಧಾರ್ಣವಂ ೯–೩೬)

ಕಡುನಲ್ಲಂ ನೆರೆದಿರ್ಪನೆಣ್ಣೆ ಸವೆದಿತ್ತಿಲ್ಲಿನ್ನುಪೋಪೆತ್ತಸೋ
ವರ್ಱಡಿಯಿಂ ಬಿಟ್ಟಿದು ಪುಷ್ಪಮಾಲೆಯೆನುತಂ ಮುಗ್ಧಾಕ್ಷಿ ಚಿಂತಾತುರ
ಕ್ಕೆಡೆಯಾಗಿರ್ಪಿನಮೆಟ್ಟಿದ ಱಂಕೆಯೆಲರಿಂದುದ್ಬುದ್ಧ ಪಾರಾವತಂ
ಸೊಡರಂ ಬೀಸಿಮಪೆಯ್ದೆ ಕೇ[೨]ಳಲೆನೆ[೨]ಸುಂ ತಾನಟ್ಟಿವಟ್ಟಂದದಿಂ ೩೦
(ಲೀಲಾವತಿ, ೩–೧೯; ಸೂಕ್ತಿಸುಧಾರ್ಣವಂ, ೯–೩೮)

## ಪಡುವಣ ಚಂದ್ರ:

[೩]ತಳರ್ದ ವಿ[೩]ಯೋಗಿನೀಹೃದಯವಾಃಕಣ[೪]ದಂತಿರೆ ಕೂಡೆ[೪] ತಾರಕಾ
ವಳಿ ಮಸುಳಿತ್ತು ಯಾಮಿನಿಯ ಬೆನ್ನನೆ ಪೋಪ ದುಕೂಲಚೇಲದಂ
ಚಳಮೆನೆ ಪೋಯ್ತು ಚಂದ್ರಿಕೆ ನಭೋವಧು ಸೂಡಿ ಬಿಸುಟ್ಟ ಮಾಲ್ಯಮಂ
ಡಲದವೊಲಿರ್ದುದಸ್ತಗಿರಿ ಮಸ್ತಕದೊಳ್ ತುಹಿನಾಂಶುಮಂಡಳಂ

(ಜಗನ್ನಾಥವಿಜಯಂ; ೧೬–೧೩೫; ಸೂಕ್ತಿ, ೯–೧೬)
ಪುಷ್ಕರಮಿತ್ರನಂದುದಯಪರ್ವತಮಂ ಪರಿದೇಱಿ ತಾರೆಗಳ್
ನಿಷ್ಕಳಿಯಾಗಿ ಪೋಗೆ ಪೊಗೆಸುತ್ತಿದ ಮುತ್ತಿನೊಲಿರ್ದುವಾಗಳಾ
ಪುಷ್ಕರದೊಂದು ಪಾಂಡುರುಚಿಯಂ ತಳೆದಿರ್ದುದು ಮೂಡಣಾಗಸಂ
ಶುಷ್ಕಪಲಾಶಪತ್ರದವೊಲಿರ್ದುದು ಪೂರ್ವಹಿಮಾಂಶುಮಂಡಲಂ ೩೧

---

[೧] ಬೆಳ್ಗುಡಿಯನಂತರ ದೀಪಿಕೆಗಳ್ (ಸ) [೨] ಳಿಗೆನ(ಸ) [೩] ಕೞವೞ(ಸ) [೪] ಸಂಕುಳದಂತೆ (ಸೂ)

ತೀರ್ದುದು ಸುವರ್ಣಮುಡುಪನೊ
ೞರ್ದಡೆ ಪದೆಪಾಗದೆಂದು ರವಿಯಂ [1]ಪೊರೆಯ
ಲ್ಕಿರ್ದರುಣಕರಗಳೋೞಿಯೊ
ೞರ್ದ[1]ಪನುಱೆ ನಂದಿ ಪಡುವ[2]ಗಡೆ[2]ಯೊಳ್ ಚಂದ್ರಂ ೩೩

[ಅನಂತಪುರಾಣಂ, ೮–೯೦; ಸೂಕ್ತಿ, ೯–೧೦]

ಪೆಱೆದೆಗೆದು ಚಂದ್ರಿಕಾಜಲ
ನಱತೊಡೆ ಕೆಸಱಂತೆ ತೋಱೆ ಗಗನಚ್ಛವಿ ಬಾಂ
ದೊಱೆಯಪರತಟದೊಳೆಳೆಮೀನ್
ಗುಱುಕುವ ಬಕನಂತಿರಿರ್ದುದಿಂದುವ ಬಿಂಬಂ ೩೪

[ಲೀಲಾವತಿ, ೭–೯೯; ಸೂಕ್ತಿ, ೯–೧೧]

ಇಡಿದುದ್ದಂಬೆಳೆದೇೞ್ಗೆವೆಟ್ಟದ ಬಿದಿರ್ಗಾಡೆಲ್ಲಮಂ ಬೇಗೆಗಿ
ಚ್ಚಡರ್ವಂತಿರ್ದುದು ಸಂಜೆಗೆಂಪದಱ ಬಿತ್ತ್ರೊಂಡೊದರಲ್ ತೋರ್ಪಿನಂ-
ಪಿಡಿದಂತಿರ್ದುವು ನಟ್ಟ ಬಾಂದೊಱೆಯ ಮೀನೆಲ್ಲಂ ಕಬಿಲ್ತಂದ ಚೆಂ
ಡೊಡೆಯುಂತಿರ್ದುವು ಪಕ್ಕೆವೆಟ್ಟಡೆಡೆಯೊಳ್ ನೀಹಾರರುಙ್ಮಂಡಲಂ ೩೫

[ಸೂಕ್ತಿಸುಧಾರ್ಣವಂ; ೯–೧೨]

ರಸವೊಸರ್ವ ಜೇನಬಱುವು
ಟ್ಟೆ ಸುರಿದು ಕವಿದಿಟ್ಟ ಕಂದುವಳ್ಳಿಯ ಕೊಡನಾ
ಟಿಸಿ ಮುಡಿಗೆ ಸುತ್ತಿ ಬಿನದದೆ
ಬಿಸುಟ್ಟ ಪೂಮಾಲೆಯೆನಿಸಿದುದು ವಿಧುಬಿಂಬಂ ೩೬

[ಸೂಕ್ತಿಸುಧಾರ್ಣವಂ, ೯–೧೩]

ವಾರುಣಿ ಕಳ್ಳನೀಂಟಿ ಮಱೆದಿಕ್ಕಿದ ಬಟ್ಟಲೊ ಭೀತಿಯಿಂ ನಿಶಾ
ಸ್ವೈರಿಣಿ ಪೋಗಿ ಬಿರ್ದ ಕಿವಿಯೋಲೆಯ ಮೌಕ್ತಿಕಪತ್ರಮೋ ನಭೋ
ವಾರಣದೊಳ್ ಮದೋತ್ಕರದ ಪಾಂಡುರಪಿಂಡಮೊ ಪೇೞೆನಲ್ಕೆ ನೀ
ಹಾರಮಯೂಖಮಂಡಲಮದೇನೆಸೆದಿರ್ದುದೊ ಪಶ್ಚಿಮಾದ್ರಿಯೊಳ್ ೩೭

[ಲೀಲಾವತಿ, ೩–೩; ಸೂಕ್ತಿಸುಧಾರ್ಣವಂ ೯–೧೪]

---

[1] ಕರೆಯಲ್ಕಿರ್ದಲರ ಧಾರೆಯುಱಿ[1]ದವೊಲಿ(ಸೂ) [2] ದೆಸೆ(ಸೂ)

ಮೂಡಣ ಸಂಜೆ ಕೆಂದಳಿರ ಕಾವಣದಂತಿರೆ ಚಂದ್ರಮಂಡಲಂ
ಬಾಡಿದ ಮಾಧವೀಮಧುರಮಂಜರಿಯಂತಿರೆ ತಾರಕಾಳಿ ನೀ
ರೋಡಿ ಕೞಲ್ದು ಬಿೞ್ದ ಕೞಿವೂಗೆಣೆಯಾಗಿರೆ ತಣ್ಣನಪ್ಪೆಲರ್
ತೀಡೆ ತಪೋವನಂಬೊಲತಿಪಾವನಮಾಯ್ತು ನಭಂ ಪ್ರಭಾತದೊಳ್ ೩೮

[ಮಲ್ಲಿನಾಥಪುರಾಣಂ, ೧೦-೧೫; ಸೂಕ್ತಿ, ೯-೨೨]

ಮೀನ್ ಗಗನಾಗ್ರದೊಳ್ ಪೊಳೆಯೆ ಮುತ್ತುವೊಲೊಂದೆರಡಿರ್ದುವಚ್ಚವೆ
ಳ್ದಿಂಗಳನೀಂಟಿ ಬಿಟ್ಟವು ಬೞಲ್ದು ಚಕೋರಿಗಳಸ್ತಶೈಲದೊಳ್
ತಿಂಗಳೊಸರ್ವ ಜೇನ ಬಱಿವುಟ್ಟೆವೊಲಿರ್ದುದು ಚಂದ್ರಮಂಡಲಂ
ಕಂಗೊಳಿಸಿತ್ತು ಮೂಡದೆಸೆ ಕಾಡೆಳವೆಕ್ಕಿನ ಕಣ್ಣ ಬಣ್ಣದಿಂ ೩೯

[ಸೂಕ್ತಿಸುಧಾರ್ಣವಂ, ೯-೨೩]

ಪಾಲ್ ತುಂಬಿದ ರಜತಘಟಂ
ಮೇಲ್ ತೊಱೆದುಗೂಡಿ ತಿಳಿದವೊಲಂಗದ್ರುಗಳ
ಸಾಲ್ ತನ್ನೊಡವರೆ ಚಂದ್ರನ
ರಲ್ತಂದಂ ಪಶ್ಚಿಮಾಚಲಾಗ್ರಕ್ಕಾಗಳ್ ೪೦

ಭೋಗಿಗುಡೆಗುಡದ ಪುತ್ರಂ
ಮೇಗೊಂದು ಫಲಮಿಲ್ಲದಾ ಬಂಜೆವರಂ
ಸಾಗದೆ ಕಾಲ್ಗೆಟ್ಟಿಹ ಮಿಗ
ವೇಗಳಿರಲ್ ನೊಂದು ಚಂದ್ರನುದಧಿಗೆ ಜಗುೞ್ದಂ ೪೧

ಲೋಕದಿ ತಾಯುದರಕೆ ನೆರೆ
ದಾ ಕುವರಂ ಪೋದುದುಂಟೆ ಖರಕರಧಾಟಿಗೆ
ನೂಕಿ ಹೊ ಹೊ ಹೊಕ್ಕನೆನೆ ವಿಧು
ವಾ ಕಡಲೊಳ್ ಪೊಕ್ಕ ಭಯಕದಾರೇಂಗೆಯ್ವರ್ ೪೨

ತಾರಾಂಗನಾಸ್ವತಂತ್ರೋ
ದಾರನುಹತ್ತೇಜವೆಯ್ದೆ ಪೆರ್ಚಿತ್ತೇಂ ಸಾ
ಕಾರದಿನೆಂಬನುನಯದಿಂ
ಘೋರೆನೆ ಕರಗಿದವೊಲಿಂದು ಕರಗಿದನಾಗಳ್ ೪೩

ಕಟ್ಟಿದ ಕುದುರೆ ದಶಂ ಬಿಳಿ
ದಷ್ಟಾದಶ ವಜ್ರಮಮಲ ನೀಲಧ್ವಜದಿಂ
ಕಟ್ಟಿರಲು ಸೂತಶಂಖನ
ಕಟ್ಟಳಿಯಿಂ ಶಶಿಯು ಕೆಡೆದನಸ್ತಂಗಿರಿಯೊಳ್ ೪೪

ಆವರಿಸಿ ನಿಂದು ನಿಜಕಿರ
ಣಾವಳಿಗಳನುಡುಗಿಕೊಂಡು ತೀವಿದ ಕೊಳದೊಳ್
ಕಾವುಡಿದ ಬಿಳಿಯ ತಾವರೆ
ವೂವಾಳ್ದಿವೊಲಾಳ್ದಿನಂಬುನಿಧಿಯೊಳ್ ಚಂದ್ರಂ ೪೫

[ಸೂಕ್ತಿಸುಧಾರ್ಣವಂ, ೯–೧೬]

ವಾರುಣಿಯನೊಲಿದು ಮುಟ್ಟಿದ
ಕಾರಣದಿಂ ಮುಳುಗುವಂತೆ ತನ್ನಯ ಕಳಂಕಯುಂ
ನೀರೊಳಲೆವಂತೆ ಪಶ್ಚಿಮ
ವಾರಿಧಿಯೊಳ್ ಮಗ್ನನಾದನಂದಮೃತಕರಂ ೪೬

[ಲೀಲಾವತಿ, ೩–೬; ಸೂಕ್ತಿ, ೯–೧೮]

ತಾರಗೆಯ ಕುಮುದವನದ ಚ
ಕೋರಂಗಳ ಕಣ್ಗೆ ಕವಿದ ಕತ್ತಲೆಯೆನೆ ನೀ
ಹಾರಕರನಲಸಿ ಪಟಿಕ್ಕಗೆ
ಸಾರಲೊಡಂ ಮುಗುಟಿಱ ಮುರ್ಬು ಪರ್ಬಿತ್ತಾಗಳ್ ೪೭

[ಲೀಲಾವತಿ, ೩–೯; ಸೂಕ್ತಿ ೯–೨೦]

## ಕೋೞಿ :

ಪೊಕ್ಕಂದೀ ಪುರದೊಳ್ ಸುಖ
ವಕ್ಕಾಡಿತು ಚಂದ್ರಸೇಂಬ ರಾಯಂ ಪೋಗಲ್
ದುಷ್ಕರ[1][ವಹ್ನಿಯೆ][1] ತೋಱಿದೆ
ಕುಕ್ಕೂಕೂಯೆಂದು ಕೋೞಿ ಕೂಗಿದುವಾಗಳ್ ೪೮

---

[1] ಪೊಹ್ನಿ (ಸ)

ಕಮಲಕೆಯುಪ್ಪವಳಂ[೧] ಬಿಸಿಲುವಕ್ಕಿಗಮಾತ್ತ ವಚೋವಿಲಾಸಿತಂ
ಕುಮುದಕೆ ಜೋಗುಳಂ ಸಿತಗಸಂತತಿಗಂ ಪುರರಕ್ಷಗರ್ಜಿತಂ
ತಿಮಿರಕೆ ಭಾಸ್ಕರಂ ಪ್ರನಿನದಂ ಸಲೆ ಯೋಗಿಗೆ ಬ್ರಹ್ಮಘೋಷಣಂ
ಸಮನಹುದೆಂಬವೋಲ್ ಬಿಡದೆ ಕೂಗಿಡುತಿರ್ದುವು ತಾಮ್ರಚೂಡಗಳ್ ೪೯

ಸರಸಿಜಮಿತ್ರ ಕೂ ತಮವಿದಾರಣ ಕೂ ಹಿಮಧೂಮಕೇತು ಕೂ
ನರರಜಡಾರಿ ಕೂ ಖಗಮೃಗಂಗಳ ಜೀವನ[೨]ರಕ್ಷಪಾಲ[೧] ಕೂ
[೩]ಕಿರಣಸಹಸ್ರ ಕೂ ತ್ರಿಜಗಲೋಚನ ಕೂಯೆನುತಂ ದಿನೇಶಗಂ
ಪರಿದುಱೆ ಪುಯ್ಯಲಿಕ್ಕುವೊಲು ಕೂಗಿಡುತಿರ್ದುವು ತಾಮ್ರಚೂಡಗಳ್[೩] ೫೦
[ಸೂಕ್ತಿಸುಧಾರ್ಣವಂ, ೯–೨೯

ಸಲಿಲಜಮುತ್ಪಲಂ ಬಿಸಿಲುವಕ್ಕಿ ಚಕೋರವಿಂದುಕಾಂತದೊಳ್
ಗೆಲಲವಿರುದ್ಧಮೀಯಪರಪಕ್ಷದ ಚಂದ್ರಮ ನಿನ್ನಮೇಲ್ ಚತು
ರ್ಬಲವನೆ ಕೂಡಿ ಬಂದು ನೆಱೆ ದಂಡಿೞಿಂದಂ ದಿನನಾಥ ಕೇಳು ಕ
ಗ್ಗೊಲೆಗಿದು ವೇಳೆಯೆಂದು ಕರೆವಂದದಿ ಕೂಗಿದವಂದು ಕೋೞಿಗಳ್ ೫೧

ಹರಿಶೈಲಕ್ಕಾ ದಿನೇಶಂ ಬರುತಿರೆ ಗಗನಂ ಕೆಂಪನಾಳ್ದತ್ತು ನಿದ್ರಾ
ಭರಭಂಗೋನ್ಮೀಲಿತಾಕ್ಷಂ ಬಿದಿರ್ದೆಱಕೆಗಳಂತಿರ್ದ ಮರ್ಮಪ್ರದೇಶಾಂ
ತರಮಂ ಕೆತ್ತುತ್ತೆ ಗೋಣಂ ಕುಸಿದು ನೆಗೆಪುತುಂ ಕೇಸರಂ ಬಿರ್ಚಿ ಕೂಗು
ತ್ತಿರೆ ಘಂಟಾನಾದದಿಂ ಕಾಮುಕರಿಗೆ ವಿರಹೋದ್ರೇಕನಾ ತಾಮ್ರಚೂಡಂ ೫೨

ಕೊರಲೊಳ್ ಕೊಂಕಿರ್ದ ಗೋಣಂ ಬಿದಿರ್ದು ಝಡಿತೆಯಿಂ ಪಾದು ಪಕ್ಕಂಗಳಿಂದಂ
ಬರಿಕೆಯ್ಯಂ ನೀವಿ ಮುಂಪಕ್ಕಮನೆರಡಡಿಯಂ ಚವಿಯಂ ಕೆತ್ತುತಂ ಪಾ
ಯ್ದುರಮಂ ಮುಂಗಾಲೊಳೊಂದುತ್ತೆಡಬಲದಡಿಯಿಂ ಮುಂದನಾರ್ಪೈದು ಪೂರ್ವಾಂ
ಬರಮಂ ನೋಡುತ್ತ ಕೂಗುತ್ತಬುಜಸನಮುಮಂ ಬೀಡಿನೊಳ್ ತಾಮ್ರಚೂಡಂ(?) ೫೩

ಪಕ್ಕದ್ವಂದ್ವಂಗಳಂ ಝಾಡಿಸಿ ಕೊರಳ ನಿಮಿರ್ದೆತ್ತಿ ಮೂಗಿಂದೆ ಗೋಣಂ
ಹಿಕ್ಕುತ್ತಂ ಬಂದು ದೇಹಾವಳಿಗಡಱ ದಿಶಾದೇವಿ ನೀಂ ಪೋಗುಪೋಗೀ
ಗರ್ಕಂ ಪೂರ್ವಾಚಲಕ್ಕೆಯ್ದಿದನೆನುತೆ ಚರರ್ ಸಾಱುವೊಂದಂದದಿಂದಂ
ಕುಕ್ಕೂಕೂಯೆಂಬನಾದಂ ನೆಗೞೆ ನಗರದೊಳ್ ಕೂಗಿತಾ ತಾಮ್ರಚೂಡಂ ೫೪

---

[೧]ಡಂ(ಸ) [೨]ರಕ್ಷಣಾರ್ಥ(ಸ) [೩]ಪಿರಿದುಮುದಾರದಿಂದೆ ತಿಮಿರಂಗಳ ನುಂಗಿದ ಜಾರ ಚೋರರಾ । ಹರಣವಿರೋಧಿ ಕೂ ಎನುತ ಕೂಗುತಲಿರ್ದುದು ತಾಮ್ರಚೂಡನುಂ(ಸೂ)

ಊದಿದುದು ತಣ್ಣೆಲರ್ಗಳಳಿ
ನಾದಂ ಗಾಂಧಾರದೊಳೊಂದಿ ನೆಗೞ್ದುದು ಪದ್ಮಾ
ಮೋದಮಿನಿಸಂ ತೊವರ್ತೊವ
ರಾಮುವು ಕೂಗಿದುವು ತಾಮ್ರಚೂಡಚಯಂಗಳ್ ೫೫

[ಸೂಕ್ತಿಸುಧಾರ್ಣವಂ, ೯-೬೨]

ಮುಟ್ಟುಪಡಾಯ್ತು ಜೊನ್ನದುಣಿಸುಂಬ ಚಕೋರಚಯಕ್ಕೆ ಬಂಧನಂ
ಬಿಟ್ಟುದು ಪದ್ಮಕೋಶವೊಳಕೊಂಡ ಮದಾಳಿಗೆ ಚಕ್ರವಾಕ ನೀಂ
ಬಿಟ್ಟಿರಬೇಡ ನಿಮ್ಮನಿಯರೊಳ್ ನೆರೆಯೆಂದುಱೆ ಸಾಱುವಂತೆ ಜೊ
ಬ್ಬಿಟ್ಟು ಕಡಂಗಿ ಕೂಗಿದುದುವಾಗಳೆ ಕುಕ್ಕುಟನೊಂದು ನಿಚ್ಚಟಂ ೫೬

[ಸೂಕ್ತಿಸುಧಾರ್ಣವಂ, ೯-೨೭]

ಒದವಿದ ನಿದ್ರೆ ಪಿಂಗೆ ಕುಸಿದೊಯ್ಯನಡಂಗಿದ ಗೋಣನೆತ್ತಿ ನೀ
ರದಪಥದತ್ತಲೊರ್ಗುಡಿಸಿ ¹ನೋಡುತ ನೆತ್ತಿಯ¹ ಕೇಸರಂಗಳಂ
ಬಿದಿರ್ದು ತಟಂತಟಂದೆಱಕೆಗುಟ್ಟಿ ತಗುಳ್ದೊಡನೆತ್ತಿ ಕೋೞಿ ಕೂ
ಗಿದುದನುರ್ದಪ್ಪಿದೋಪರೆರ್ದೆ ಪವ್ವನೆ ಪಾಱೆ ನಿಶಾವಸಾನದೊಳ್ ೫೭

[ಸೂಕ್ತಿಸುಧಾರ್ಣವಂ, ೯-೬೬]

ತಲೆಯೊಳ್ ವಿದ್ರುಮಮಂ ನಿಜಾಕ್ಷಿಯುಗದೊಳ್ ಮಾಣಿಕ್ಯಮಂ ಪಕ್ಷಸಂ
ಕುಲದೊಳ್ ಪಚ್ಚೆಯನಿಂದ್ರನೀಲವನಲಂಪಿಂ ಗರ್ಭದೊಳ್ ಮೌಕ್ತಿಕಾ
ವಲಿಯಂ ವಜ್ರಮನಗ್ರಚಂಚುಪುಟದೊಳ್ ಪಾದಂಗಳೊಳ್ ಮಿಕ್ಕು ನಿ
ರ್ಮಳ ರತ್ನಂಗಳನಾವಗಂ ನೆನೆಯಿಸಲ್ ಸಾರ್ದಿರ್ದುವಾ ಕೋೞಿಗಳ್ ೫೮

ಚಲಿಸದ ದೃಷ್ಟಿ ಪುರ್ಬಡರ್ದು ನೀಡಿದ ಗೋಣ್ ನಿಶಿಯಂ ತುಡುಂಕಲ
ವ್ವಳಿಸುವ ಚಂಚುಘಾತಿಯಿಱುವಾರ್ದೊದೆವಾಲಿ ಮಿಡುಂಕುತಿರ್ಪ ತೊ
ಟ್ಟಳಿಕೆ ಚಲಂ ಕವಲ್ತು ಪೆಡಮೆಟ್ಟದ ಬಲ್ಪು ವಿಚಾರಿಸಲ್ಕೆ ಮೆ
ಯ್ಗಲಿತನದಿಂ ತೊಡರ್ಚಿದವು ಕಾಳೆಗಮಂ ಕಡುಗೆಯ್ದು ಕೋೞಿಗಳ್ ೫೯

ನೆಗಪಿರೆ ಚಂಚು ನೀಡಿ ನಿಮಿರ್ದಾ ಕೊರಲೊಳ್ ಕೆದಱಿರ್ದ ಕೇಸರಂ
ಮುಗಿಯದೆ ನಟ್ಟದಿಟ್ಟಿ ಸಲೆ ಜೋಲ್ದರೆವಿರ್ಚಿದೆಱಂಕೆ ಬೇಗದಿಂ
ಬಗೆಯದೆ ಬಂದು ಸಿಂದು ಪುಟವೆೞ್ದು ಪಳಂಚಿರಮೊಂದನೊಂದು ಕೈ
ಮಿಗೆ ಪೆಱಗಾಲ್ಗಳಿಂದಿಱಿಯೆ ಕೌತುಕಮಾದುದು ಕೋೞಿಕಾಳೆಗಂ ೬೦

---

¹ ನೋಡಿ ಶಿರೋಧರ(ಸೂ)

ಯೋಗಿಜನಕ್ಕೆ ತತ್ವಗತಿ ಸಂಸ್ಥಿತಿಯುಂ ಕಳೆಯೊಳ್ ಕಳಾವಿದ
ರ್ಗಾ ಗುರುವೇಧೆಯುಂ ಕವಿಜನಕ್ಕೆ ಕವಿತ್ವದ[1]ಸೌವ್ಯ[1]ವುಂ ಬಹೂ
ದ್ಯೋಗಿಜನಕ್ಕೆ ತದ್ವಿಷಯಸಿದ್ಧಿಗಳಂ ನೃಪರ್ಗನ್ಯರಾಜರಾ
ಜ್ಯಾಗಮ[2]ವೃತ್ತಿ[2]ಯುಂ ಮನಕೆ ಪೆರ್ಚಿಪುದೊಪ್ಪುವ ಸುಪ್ರಭಾತದೊಳ್ ೬೧

[ಸೂಕ್ತಿಸುಧಾರ್ಣವಂ, ೯-೪೦]

## ವಿಕಸಿತ ಪದ್ಮ :

ಕಂದನೆರ್ದೆಯಲ್ಲಿ ತಾಳಿದ
ಚಂದಿರಗಂ ಸೋಲ್ತು ಕುಮುದಿನಿಯ ಬಾಳುವೆಯೇ
ನೆಂದು ನಗುವಂತೆ ಕಮಲಗ
ಳೊಂದೊಂದೆಸಳೊಡೆದು ವಿಕಸಿಸಿದವುದಯದೊಳಂ ೬೨

ಕೆಂಗದಿರನ ಕರಕಿಸಲಯ
ಸಂಗದಿನಾರಕ್ತಮಾದ ಕೆಂದಾವರೆಗಳ್
ಸಂಗಡಿಸಿಯಲರ್ದವಂಗಜ
ನಿಂಗಳವಂ ಬಿರಯಿಗಳ್ಗೆ ನಲಿಗೆದಱುದವೋಲ್ ೬೩

[ಸೂಕ್ತಿಸುಧಾರ್ಣವಂ, ೯-೪೩]

ತರುಣಿಯುರಾಸ್ಯಕಂ ಹರಿಯನೇತ್ರಕೆ ನಾಲ್ಮೊಗನಾದ ತಾಣಕಂ
ಸಿರಿಯನಿವಾಸಕಂ ಮದನನಾರಿಯ ಬಾಣಕೆ ತಾನೆಯಾಗಿ ಸಾ
ಸಿರದಳದಿಂ ಪವಿತ್ರತರಪುಷ್ಪಮದಾದರವಿಂದಸಂಕುಳಂ
ಬಿರಿದುವು ತನ್ನ ಕಂಡು ರವಿಯೆಂತಹ ಸ್ನೇಪಿನ ರೂಪನಪ್ಪನೋ ೬೪

ಕುಮುದಿನಿಗಧಿಕಶ್ವಾಸಂ
ಸಮನಿಸೆ ಕಮಲಿನಿ ನಗುತ್ತ ಕೋಕಂಗಳ್ ತ
ದ್ಭ್ರಮರಧ್ವನಿಯಂ ತೋಱುತೆ
ಸಮಸುಖವಾಯ್ತೆಂದು ರತಿರಸಾಯನಮೆಸೆಯಲ್ ೬೫

---

[1]ಸಾರ(ಸೂ) [2]ವೃದ್ಧಿ(ಸೂ)

ಮುಂದೆ ಮಹಾಸುರಮಥನಂ
ಬಂದೇಱಿದನಮರಗಿರಿಶಿಖಾಗ್ರಮನೆಂದಾ
ನಂದದಿ ಮೊರೆವಳಿಯಂದರ
ವಿಂದೌಘದಿ ಮುಂದೆ ನಿದ್ರೆ ತಿಳಿದವು ಕೊಳದೊಳ್ ೬೬

ಹರಗಿರಿಯಂ ಪರಿದೇಱುವ
ಹರಿಪಾದಕ್ಕಮುಮ ಪರಪಿದಂ ಶಶಿ ನೀಲಂ
ಬೆರಸಿದ ಪೀತಾಂಬರಮೆನೆ
ಬಿರಿದಲರ್ದುವು ತುಂಬಿವೆರಸಿ ಹೊಂದಾವರೆಗಳ್ ೬೭
[ಸೂಕ್ತಿಸುಧಾರ್ಣವಂ, ೯-೪೨)

ನಡು ನಸುಪೊಂಗಿ ಸುತ್ತಿಱಿಯೆ ಪೊತ್ತಿದೆಸಟಿಶ್ಮ್ರೊನೆವೆರ್ಚೆ ತಣ್ಣೆಲ
ರ್ಗೆಡೆದೆಱಪಾಂಗೆ ಪೊಕ್ಕು ಸುಟಿಱಿಯುತ್ತಿರೆ ತಳ್ಪು ಸಡಿಲ್ದಗಲ್ದರಲ್
ಪಿಡಿದುಡುಗಿರ್ದ ಕೇಸರದ ನುಣ್ಗೊನೆ ಸೂಸೆ ಮರಲ್ದು ಚೆಲ್ವಿನೊಳ್
ಗಡಣಿಸಿದತ್ತು ಪುಂಬಗಲೊಳಂಬುರುಹಂ ಸರಸೀಸಮೂಹದೊಳ್ ೬೮
[ಸೂಕ್ತಿಸುಧಾರ್ಣವಂ, ೯-೪೫]

ಜಗಮಂ ಬೆಳಗುತಲಿರ್ಪಾ
ಮಗನಂ ಪೂರ್ವಾಶೆ ಪಡೆದಳೆಂದದ ನಿಟ್ಟಿಸೆ
ಮಿಗೆ ಬರುತಲೊಂದನೊಂದೊಂ
ದಗಲದೆ ಕಾಣುತ್ತ ಕೋಕಗಳ್ ಕೂಡಿರ್ಕುಂ ೭೦

## ಕೋಕಕೂಟ :

ಮನಸಿಜನಂಬು ನಾಂಟೆ ಮನಮುಂ ತನುವುಂ ಮಿಗೆ ನೊಂದು ನೋ
ವಿನೊಳ್ ವನಿತೆಯರಾತ್ಮವಲ್ಲಭರನೆಯ್ದುತೆ ಕಾಣದೆ ತಮ್ಮ ನಲ್ಲರಂ
ವನರುಹಮಿತ್ರನೀಕ್ಷಣವೇ ತಂದಪನೆಂದವು ಪೂರ್ವದಿಕ್ಕಿನೊಳ್
ಜನಿಸುವ ಭಾನುಮಂಡಲಮನೀಕ್ಷಿಸುತಿರ್ದುವು ಜಕ್ಕವಕ್ಕಿಗಳ್ ೬೯

ಪರಿಪರಿತಂದು ಪ್ಪೈಗಳೆರಡಿಲ್ಲೆನೆ ಪಕ್ಕದಿನಪ್ಪಿ ಕಂಗಳಿಂ
ಸುರಿಯೆ ಮುದಾಶ್ರು ಮುಂವಲೆಯ ತುಪ್ಪುಟಿನೊಯ್ಯನೆ ಕರ್ಚಿ ಚಂಚುವಿಂ
ಸರಸಿಜಪತ್ರಕೋಟಿಯ ಕುಸುಂಕುಱಿನತ್ತೆಳದೊಯ್ದು ಕಾಂತನೊಳ್
ನೆರೆದು ರಥಾಂಗಕಾಂತೆಯಿರ್ದೆಯಾಱುದುದಾಗಳೆ ಸುಪ್ರಭಾತದೊಳ್ ೭೧

ಬೆಳಗಪ್ಪ ಜಾವದೈಕಿ
ಲ್ಗೊಳೆ ಶೀತಕ್ಕಾಱದಳ್ಕಿ ತೊಟ್ಟೆರ್ದ ಧರಾ
ತಳವೆಂಬ ಪೆಣ್ಣ ಪೊಸಕಂ
ಚುಳಿಕೆಯ ಪೊಸಮುತ್ತಿನಂತಿರಾದುವು ಪನಿವುಲ್ ೭೨

(ಸೂಕ್ತಿಸುಧಾರ್ಣವಂ, ೯-೩೯]

ಪಡುವಲ್ ಚಂದ್ರನ ಬೆಳ್ವೆಳೆ
ಗೊಡರಿಸುವರುಣೋದಯಾಂಶು ಮೂಡಲ್ ಕೈಕೊಂ
ಡೆಡೆಯಣ ತನುವೊಪ್ಪಿದುದಿರು
ಳುಡುಗಿದ ಕಟ್ಟಿಲೆಯು[1] ಬೆಳೆಯ ಮಱಯೊಗುಪೆಳೆಯೊಲ್[1] ೭೩

[ಅನಂತನಾಥಪುರಾಣಂ, ೮-೬೩; ಸೂಕ್ತಿ, ೯-೫೭]

ಅಳಿದ ಕುರುಳ್ ತಡಂಮುಡಿದ ಸೋರ್ಮುಡಿ ಬೀಗಿ ಬೆಳರ್ತ ದೋರೆವಾಯ್
ಮುಳಿಮುಳಿಸುತ್ತಮಿರ್ಪ ನಗೆಗಣ್ ನಸುಜೋಲ್ದುಡೆ ಕೊಂಕಿದೋಲೆ ಚ
ಪ್ಪಲರ್ದ ಘನಸ್ತನಂ ನವನಖಾಂಕಮುಲಂಕರಿಸಲ್ ನಿರ್ಜೀಟ್ಟಿಯಿಂ
ಸುಳಿವಬಲಾಜನಂ ದಿನಕರೋದಯಕಾಲದೊಳೊಪ್ಪಿ ತೋಱುಗುಂ ೭೪

[ಸೂಕ್ತಿಸುಧಾರ್ಣವಂ, ೯-೬೧]

ಕಱೆದುವು ಪನಿ ಪುಲ್ಲೊಳ್ ಕಂ
ದೆಱೆದುವು ನವಿಲೆರ್ದು ಕರಿಣಿ ಕರ್ಣಂಗಳನೆ
ಚ್ಚಱಸಿದುವಾಗುಳಿಯಿಂ ಬಾಯ್
ದೆಱೆದುವು ಸಿಂಗಂಗಳಲ್ಲಿ ಮುಸ್ನೇಸಱನೊಳ್ ೭೪

(ಕಾದಂಬರಿ ಪೂ. ಭಾ ೧೪೨-೩೪; ಸೂಕ್ತಿ, ೯-೬೪]

ಭುವನಮುನಾವಗಂ ಪುದಿದು ತೀವಿದ ತಣ್ಗದಿರೊಯ್ಯನೊಲ್ದು ಕೈ
ರವವನಮಾದುದೆಯ್ದೆ ಪೊಸಮಲ್ಲಿಗೆಯಾದುವು ಮೌಕ್ತಿಕಂಗಳಾ
ದುವು ಸುರಸಿಂಧುವಾದುವು ಸುಧಾರ್ಣವಮಾದುವು ಚಂದ್ರಕಾಂತಮಾ
ದುವು ಹಿಮಮಾದವಲ್ಲದೊಡೆ ಚಂದ್ರನ ಚಂದ್ರಿಕೆ ಮಾಯಮಾದುದೇ ೭೫

[ಲೀಲಾವತಿ, ೩-೭; ಸೂಕ್ತಿ, ೯-೧೯]

---

[1] ಬೆಱೆಯ ಮಱೆಗಳೆವೆನಿಸಲ್ (ಸೂ)

ಇನನ ಬರವಿಂಗೆ ಪೂರ್ವಾಂ
ಗನೆ ಕುಂಕುಮಪಂಕದಿಂದಲಂಕರಿಸಿದಳೋ
ತನುವನೆನೆ ಸಂಜೆ ರಂಜಿಸಿ
ತಿನನುದಯಮನಱುಪುವಂತೆ ಮೂಡಣದೆಸೆಯೊಳ್ ೭೬
(ಸೂಕ್ತಿಸುಧಾರ್ಣವಂ, ೯–೫೫]

ಕಮಲನಿಗಂ ಕೋಕದ್ವಯ
ಸಮುದಯಕಂ ಕೆಟ್ಟರಱಿದರೆಂದಿನನೆ ಪಸಾ
ಯಮನಟ್ಟಿದಂತೆ ಮೆಱೆದುದು
ನಿಮಿರ್ದರುಣೋದಯದೊಳೆಸೆವ ಸಂಧ್ಯಾರಾಗಂ ೭೭
[ಅನಂತನಾಥಪುರಾಣಂ, ೮–೬೫; ಸೂಕ್ತಿ, ೯–೫೬]

ಅಳಿಗಳ್ ಪಾಡುವಿನಂ ಸರೋಜಿನಿ ನಗುತ್ತುಂ ನೋೞ್ಪಿನಂ ಕೂಡೆ ಪುಂ
ಶ್ಚಳಿಯರ್ ಬೆಚ್ಚುವಿನಂ ರಥಾಂಗಯುಗಳಂ ಪಾರ್ವಿನಂ ತಂಬೆಲರ್
ಕಳಿಪ್ರೂವಂ ಒಱುಗ್ಗುವಿನಂ ರವಿನಟಂ ಬಂದಾಡುವಾಗಳ್ ಸುಪಾ
ಟಳವಸ್ತ್ರಂ ತೆಱೆಯಾದವೋಲ್ ಮೆಱೆದುದಾ ಪೂರ್ವಾಶೆ ಸುಣ್ಗೆಂಪಿನಿಂ ೭೮

ದಿವಿಜಗಜಂ[1] ಚಚ್ಚರದಿಂ
ದವೆ ಪೊಱಮಡೆ ಸುರಪನೊಲ್ದು ಕಟ್ಟಿದ ಮಾಣಿಕ
ದವಿರಳವೊಗವಡಮೆನೆ[1] ಚೆ
ಲ್ವುವೆತ್ತುದಂದುದಯಸಮಯ ಸಂಧ್ಯಾರಾಗಂ ೭೯
[ಜಗನ್ನಾಥವಿಜಯಂ, ೧೬–೧೩೮]

ಕೆಂಪೇಱಿತು ಮೂಡಣದೆಸೆ
ಸೊಂಪೇಱಿತು ಚಕ್ರಮಿಥುನವಬ್ಜಕದಂಬಂ
ಕಂಪೇಱಿತು ಸಕಳಜನಂ
ಪೆಂಪೇಱಿತು ಪದ್ಮಮಿತ್ರನುದಯಿಸುವಾಗಳ್ ೮೦
[ಗಿರಿಜಾಕಲ್ಯಾಣಂ, ೫–೪]

ಉಳ್ಪಲರ್ದ ಪದ್ಮಿನೀಕುಳ
ದೊಳ್ ಕಂಪಂ ಪಡೆಯಲುಷ್ಣಕರನ ಕರಂಗಳ್
ತೆಳ್ಪಗೆ ಮುಂಬರಿದಂದದೆ
ಬೆಳ್ಪನೆ ಬೆಳಗಾಯ್ತು ನೋೞಿಱ್ಪುದಾಕ್ಷಣಕಾಗಳ್

---

[1] ಸಜ್ಜರದಿಂಪರೆಬ್ದುವೆನೆ ಕಾಣಲದ್ರಿಯಾ ದಂತಿಗೆ ಕಟ್ಟುವ ಚೆಸ್ಮಾಗವಡಮೆನೆ(ಅ)

ಪರೆಯೆ ಕುರುಳ್ಗಳಂತೆ ತಿಮಿರಂ ಮುಗಿಯುತ್ತಿರೆ ಸೆಯ್ದಿಲಕ್ಷ್ಮಿಯುಂ
ತಿರೆ ಬೆಮರಂತಿರಾಱುತಿರೆ ತಾರಗೆ [೧]ಕೊಡೆ [೧]ವಿಭಾತಕಾಂತನೊಳ್
ನೆರೆದ ಸುಖಾಂತ್ಯದೊಳ್ ಕರಗುತಿರ್ಪ ಮನೋಹ[೨]ರಮಾ[೨]ರ್ದ್ರಕುಂಕುಮಾಂ
ಬರಮೆ [೩]ಬಟಿಲ್ದವೋಲ್ ಬಳೆದು[೩]ದೈಂದ್ರಿಯ ಸಾಂಧ್ಯಮಯೂಖಮಂಡಲಂ ೮೨
[ಲೀಲಾವತಿ, ೩-೮೦; ಸೂಕ್ತಿ, ೯-೫೪]

ಎಳೆದಳಿರಂತೆ ಪೆರ್ಮರದ ಕೊಂಬುಗಳೊ[೪]ಳ್ ನವ[೪]ಧಾತುನಿರ್ಝರಂ
ಗಳ ಪೊನಲಂತೆ ಶೈಲಶಿಖರಂಗಳೊಳುಜ್ವಲಮು[೫]ಪ್ಪ [೫]ಮಾಣಿಕಂ
ಗಳ ರುಚಿ ಪರ್ವಿದಂತೆ ಸುರಕೂಟ ಕನತ್ಕಲಶಂಗಳೊಳ್ ತಳ
ಥ್ಥಳಿಸಿ[೬]ತು ಪೂರ್ವಭೂಧರದಿ ಭಾಸ್ಕರ[೬]ಚಂಡಕರಾಂಶುಜಾಲಕಂ ೮೩
[ಲೀಲಾವತಿ, ೩-೮೧; ಸೂಕ್ತಿ, ೯-೭೭]

## ಕಿರಣೋದಯ :

ಒಳವು ಮಣಿನಿಕರಮುದಯಾ
ಚಳದೊಳ್ ಗಡಮೆಂದು [೭]ನಿಂದನಗಗ[೭]ಳ್ಗಿಂದ್ರಂ
ಕುಲಿಶದೊಳೆ ಮೀಂಟಿ [೮]ಮೋಗು[೮]
ಜ್ಜ್ವಳಿಸಿದ ಮಾಣಿಕ[೯]ಮನರುಣಕಿರಣಂ[೯] ಪೋಲ್ತಂ ೮೪
[ಸೂಕ್ತಿಸುಧಾರ್ಣವಂ, ೯-೬೯]

ತಡೆಯದೆ ತನುವೆಲ್ಲಮನೊಂ
ದೆಡೆಯೊಳ್ ತಂದೊಟ್ಟಿ ಪೂರ್ವದೆಸೆಯೊಳ್ ಧಾತ್ರಂ
ಸುಡೆ ಸಿಡಿದುರಿವೆರಸಿದೆ ಬ
ಲ್ಗಿಡಿಯಂ ಪೋಲ್ತೆಸೆದನರುಣಕಿರಣಸಹಸ್ರಂ ೮೫
[ಸೂಕ್ತಿಸುಧಾರ್ಣವಂ, ೯-೭೦]

ಜಲಧಿಯ ತೀರದೂರ್ಧ್ವಪುಳಿನಂಗಳೊಳೊಪ್ಪುವ ಸತ್ಪ್ರವಾಳದಂ
ತಲೆವ ಸುದಿಗ್ಗಜಂಗಳ ಶರೀರದ ಮೇಲಣ ರಕ್ತಧೂಳಿನಂ
ತೆಳೆಯ ಮಹಾಪುರಂಗಳ ಸುಕೋಂಟೆಗಳಟ್ಟಳೆಯಲ್ಲಿ ತೋಱುವಾ
ಸುಲಲಿತ ಪದ್ಮರಾಗರುಚಿಯಂತಿನಕಾಂತಿಗಳೊಪ್ಪಿ ತೋಱುಗುಂ ೮೬

---

[೧] ತೀರೆ(ಅ. ಸೂ) [೨] ರಿಯಾ(ಅ. ಸೂ) [೩] ನೆ ಬಾಳ್ದರಾಳ್ದಳಮು(ಸ) ಜಗುಳ್ದವೊಲ್ ಬೆಳತು (ಸೂ) [೪] ಳ್ಪೊಳೆ(ಸ) [೫] ಧ್ಯ(ಸ) [೬] ದೀಕ್ಷದುನ್ಮಿಷಿತಮಂಡಳ(ಸೂ, ಅ) [೭] ಬಂದುನಿಂದ(ಸೂ) ಮಗುಳ್ದು(ಸೂ) [೯] ದಲರುಣದಿರಮುಂ(ಸ)

ಇಳೆಯ ಮುಸುಂಕಂ ಮೆಲ್ಲನೆ
ಕಳೆವುತ್ತೆಚ್ಚಱಿಸುತಂ ರಥಾಂಗಮನಬ್ಜಂ
ಗಳನೆವೆದೆಱೆಯಿಸುತಂ ದೆಸೆ
ಗಳನೆಬ್ಬಿಸುತೆದ್ದವಾಗಳಿನಕಿರಣಂಗಳ್ ೮೭

ಕೊರಗಿಸಿ ಕುಮುದಮನೆಬ್ಬಿಸಿ
ಯರವಿಂದಮನಾತ್ತತಮನುನೋಡಿಸಿ ದೋಷಾ
ಕರನಂ ಕಳೆಗುಂದಿಸಿ ಪರಿ
ವರಿದುವು ತರಣಿಯ ತಳಾರರಂತಿನ ಕಿರಣಂ ೮೮

ಮುಗಿಯಲೊಡರ್ಚಿ ನಿಂದ ಕುಮುದಾವಳಿಯುಂ ಸರಸೀರುಹಂ
ಮುಗುಳ್ನಗೆ ನಗುವಂತಿರಿರ್ದವು ಚಕೋರಿಗಳಸ್ತಗಿರೀಂದ್ರದತ್ತಲು
ಚ್ಚೈಗಸೊಳೆ ನೋಡುತಿರ್ದುವು ರಥಾಂಗಯುಗಕ್ಕೆ ಮನೋಜನಿಸೆ ಮೆ
ಲ್ಲಗೆ ತೊಲಗುತ್ತಮಿರ್ದುದುದಯಾದ್ರಿಗೆ ಗೋಪತಿ ಬರ್ಪ ಪೊೞ್ತಿನೊಳ್ ೮೯

## ಮಂಡಲೋದಯ :

ಮುದಯಿಸುತುಂ ಸರಸಿಜಮಂ
ಬೆದಱಿಸುತುಂ ಕೈರವಂಗಳಂ ಘನಪಥದೊಳ್
ಕೆದಱುತ್ತುಂ ಕಿರಣಾಳಿಯ
ನುದಯಾಚಳಚೂಡದಲ್ಲಿ ಮೂಡಿದನರ್ಕಂ ೯೦

ಕಮಳಾಕರದಮಳ್ವಕ್ಕಿಗ
ಳ ಮನೋರಥವರಳೆ ವಾಸವದಿಶಾಮುಖದೊಳ್
ತಮಮೆಂಬ ಮೆದೆ ಬೇಯುತ್ತಿರೆ
ವಿಮಲಜಗಚ್ಚಕ್ಷು ತೊಳಗಿ ಬೆಳಗುತ್ತಿರ್ದಂ ೯೧

ಜಗದ ತಮಹರಣ ಜನದೊಳೆ
ಗೊಗೆದಾಯುವ ಮೊಗೆದು ಸೂಸುವಧಿಕಗುಣಾಢ್ಯಂ
ಜಗದಂಬಕ ಜಲಜಾಧವ
ಭಗನುದಯಮಹೀಧರಾಗ್ರಕೆಯ್ದಿದನಾಗಳ್ ೯೨

ದೊರೆವೆತ್ತ ಪೂರ್ವದಿಗ್ಭೂ
ಧರಗುಹೆಯಿಂ ಕಿರಣನಖಮುಮಂ ಮಸೆದಿನಕೇ
ಸರಿ ಪೊಱಮಟ್ಟೆಳೆಯ ತಮೋ
ಕರಿಯಂ ಗುಳುಕೆಂದು ನುಂಗಿದತ್ತಾಕ್ಷಣದೊಳ್ ೯೩

ಮುಗಿಯಲನುವಾಯ್ತು ನೆಯ್ದಿಲು
ಮುಗಲಲ್ಕನುವಾಯ್ತು ಜಾರವನಿತೆಯರೆಲ್ಲಂ
ನಗೆಯಂ ತಾಳ್ದವು ತಾವರೆ
ಜಗಮಂ ಬೆಳಗಲ್ಕೆ ಸೂರ್ಯನುದಯಂಗೆಯ್ದಂ ೯೪

ಪಿಡಿನಡುವಿನಮರ್ದ ಜಘನದ
ಕುಡುವುರ್ವಿನ ವೃತ್ತಕುಚದ ನಳಿತೋಳಿಡೆಯೊೞ್
ತೊಡರ್ದಿರಲೀಯದೆ ಮೂಡಿದೆ
ಪಿಡಿನೀನೊಕ್ಕುಡಿತೆ ನೀರನೆಲೆ ದಿವಸಕರಾ ೯೫

ತ್ರಿದಶಾರಿ ಕೇಶಿ ಮಡಿದಪ
ನಿದು ಶುಭದಿನಮೆಂದು ಶಕ್ರ ಮಂಗಳವಸನ
ಕ್ಕುದಯಾಚಲವೇದಿಯೊಳಿಱಿ
ಸಿದ ಪೊಂಗಳಸಂಬೊಲಾಯ್ತು ದಿನಕರಬಿಂಬಂ ೯೬

(ಜಗನ್ನಾಥವಿಜಯಂ, ೫-೪೦]

ಜಲಜಕೆ ಬಾಗಿಲಂ ತೆಗೆಯೆ ರಾತ್ರಿಯ ಪಾಳೆಯಮೆತ್ತಿಪೋಗೆ ನೆ
ಯ್ದಿಲೆಯಗೃಹಂಗಳಂ ಬಲಿಯೆ ಜಾರರು ಚೋರರಡಂಗಿ ಪೋಗೆ ತಿಂ
ಗಳ ತಿಳಿರಶ್ಮಿಗಳ್ ತೊಲಗೆ ತೇಜದಿ ಪ್ರಾರ್ಥಿಸೆ ವಿಪ್ರರೇೞ್ಗೆಯಿಂ
ನುಲಿವುತ ಚೂಣಿ ಸೇರಿದುದು ಭಾನುದಯಾದ್ರಿಯೊಳಿತ್ತನೋಲಗಂ ೯೭

ತಿಮಿರಮಿದೆಂಬುದೇ ಪರೆದ ಕಾಂಡಪಟಂ ಮಿಗೆ ಮೂಡಣಾದ್ರಿ ಚೆ
ಲ್ವಮರ್ದುಱುರಂಗಭೂಮಿ ಲಸದಂಬರವೊಪ್ಪುವ ನಾಟ್ಯಗೇಹಮೆ
ಯ್ದಮಲಕರಂಗಳೊಲ್ದಭಿನಯಂಗುಡುತಿರ್ಪ ಕರಂಗಳಾಗಲಾ
ಕಮಲಿನಿ ನೋಡಲಾಡುವ ಮಹಾನಟನೆಂಬಿನಮರ್ಕನೊಪ್ಪಿದಂ ೯೮

ಕಳವೆಗಳಿಂದೆ ಪೆರ್ಮರ ಲತಾಳಿಯ ಸತ್ಫಲದಿಂದೆ ಪಾಲ್ಮೊಸರ್
ಜಲವಮಳೇಕ್ಷುವಾಜ್ಯದ ಪಯೋಧಿಗಳಿಂದವೆ ನಾಡೆಸೋಡಿ ತೋ
ರ್ಪಿಳೆಯೆನಿಪೊಂದು ಸತ್ರಕುಟಿಯೊಳ್ ದ್ವಿಜನೂಟಕೆ ಸಾರೆ ಮುನ್ನ ತಂ
ದಿಱಿಸಿದ ರತ್ನದಡ್ಡಣಿಗೆಯಂದದೊಳೊಪ್ಪಿತು ಸೂರ್ಯಮಂಡಲಂ ೯೯

ಕಮಲವರಳ್ದು ಕೈರವಮು ಕಂಪಿಸೆ ತಾರಗೆಯೋಡೆ ಚಂದ್ರನಿಂ
ಹಿಮಕಿರಣಂಗಳುಂ ಸರಿಯೆ ಪಕ್ಷಿಗಳ ನಿರ್ಜರವಾರೆ ಕುಕ್ಕುಟಂ
ತಮತಮಗೆಬ್ಬಿ ಸಾಱಿ ಸುರಜಾಲವ ಮನ್ಮಥ ಬೀಱಿ ಧಾತ್ರಿಯೊಳ್
ತಮವು ತೆರಳ್ದೆ ಮೂಡಣುದಯಾದ್ರಿಯನೆಯ್ದಿದನಾ ದಿವಾಕರಂ ೧೦೦

ಸರಸಿಜಮಿತ್ರ ಕಾಶ್ಯಪಸುಪುತ್ರ ತ್ರಿಕಾಲಪವಿತ್ರ ಯಾಮಿನೀ
ಚರಜನಕಾಲಚಕ್ರ ಜಗತೀತಳನೇತ್ರ ತಮಾಬ್ಧಿಭೈತ್ರ ದಿ
ಗ್ವರಮಣಿಛತ್ರ ಸಪ್ತಹಯಪತ್ರ ಬುಧವ್ರತಪಾತ್ರ ಮೇರುವಂ
ತಿರುಗುವಚಿತ್ರ ಮೂಡುತುದಯಾದ್ರಿಯೊಳೊಪ್ಪಿತು ಮಿತ್ರಮಂಡಲಂ ೧೦೧

ಕಮಲವಿಕಾಸ ಮೂಡೆ ಮಧುಪಂಗಳ ಕಂಠದಿ ನಾದ ಮೂಡೆ ಚೆಂ
ಗುಮುದಕೆ ಚಿಂತೆ ಮೂಡೆಯೆಣೆವಕ್ಕಿಯ ತೆಕ್ಕೆಗೆ ಹರ್ಷ ಮೂಡೆ ಬ
ಲ್ತಿಮಿರಕೆ ಚಿಂತೆ ಮೂಡೆ ಕವಿತಾಜನಚಿತ್ತಕೆ ಯುಕ್ತಿ ಮೂಡೆ ಸಂ
ಭ್ರಮ ಜನಕಣ್ಗೆ ಮೂಡೆ ಉದಯಾದ್ರಿಯ ಮೇಲೆ ಜಗಾಕ್ಷ ಮೂಡಿದಂ (?) ೧೦೨

ಉದಯಗಿರೀಂದ್ರಮೆಂಬ ಪೊಸಕಂಭದಿನಾರ್ದು ಗಭಸ್ತಿಕೇಸರಂ
ಬಿದಿರ್ದು ಕರಂಗಳಂ ನೆಗೆಪಿ ಮುನ್ನರುಣೋದಯವಿಸ್ಫುಲಿಂಗಮಂ
ಕೆದಱಿ ತಮಿಸ್ರದೈತ್ಯನೊಡಲಂ ಬಗಿದಾ ಕಮಲಾನುಮೋದದಿಂ
ದುದಯಿಸಿದಂ ದಿನಾಧಿಪನೃಕೇಸರಿ ಧಾತ್ರ್ಯಹರಚ್ಯುತಾತ್ಮಕಂ ೧೦೩

ನಗೆಯುಂ ಪಂಕಜವಕ್ತ್ರದೊಳ್ ದುಗುಡಮುಂ ನೈದಿಲ್ಗಳೊಳ್ ಲಲ್ಲೆಯ
ಪ್ಪುಗೆಯುಂ ಕೋಕಯುಗಂಗಳೊಳ್ ಪದಪಿನಿಂ ಕಣ್ಬೇನೆಯುಂ ಗೂಗೆಯೊಳ್
ಸೊಗಸಂ ದಿಕ್ತಟದೊಳ್ ಪೊದಟ್ದು[1] ಭಯಮುಂ ಜಾರಾಂಗನಾ[1]ನೀಕದೊಳ್
ಮಿಗೆ ಮೂಡುತ್ತುದಯಾದ್ರಿಯೊಳ್ ನೆಲಸಿದಂ ಪಂಕೇಜಿನೀವಲ್ಲಭಂ ೧೦೪
[ಸೂಕ್ತಿಸುಧಾರ್ಣವಂ, ೯–೭೬]

ರವಿಶಶಿಯಂತೆ ತಣ್ಣದಿರ್ಗಳೆಯ್ದುದಯಾದ್ರಿಯ ಮೇಲೆ ಹಸ್ತಪ
ಲ್ಲವದಿನೊರಲ್ದ ಸಾಧುಜನವರ್ಘ್ಯಮನೆತ್ತೆ ಸರೋಜಷಂಡಮಂ
ದವಿರಳಪುಷ್ಪಿತಸ್ಥಿತಿಯಿನೊಪ್ಪೆ ಜಗಜ್ಜನನೇತ್ರಪುತ್ರಿಕೋ
ತ್ಸವಫಲವಾಗಲಿಂದುದಯಶೈಲಮನೇಱಿದನಂಬುಜಪ್ರಿಯಂ ೧೦೫

---

[1] ಜಯಮುಂ ರಥಾಂಗಾ(ಸೂ)

ಯತಿಗಳ ಹೃತ್ಸರೋಜವರಳಲ್ ಮಿಗೆ ಕೌಶಿಕಲೋಚನೋತ್ಪಲೋ
ನ್ನತಿ ಮುಗಿಯಲ್ ಜಗಜ್ಜನದ ಜಾಡ್ಯತಮಂ ಬಿಱುತೋಡೆ ಸತ್ಕವಿ
ಪ್ರತತಿ ಮತಿಪ್ರಕಾಶಕಿರಣಂ ಮಿಗೆ ಸಜ್ಜನಚಕ್ರವಾಕದಾ
ಯತಸುಖಮಪ್ಪಿನಂದುದಯಶೈಲಮನೇಱಿದನಂಬುಜಪ್ರಿಯಂ ೧೦೬

ಕಮಲಾನಂದಕರಂ ತಮೋಹರಕರಂ ಚಕ್ರಪ್ರತಿಷ್ಠಾಪದಂ
ಸುಮನಃಪ್ರೀತಿಕರಂ ಮಹೋದಯನುತಂ ಪೀತಾಂಬರಾಲಂಕೃತಂ
ನಮಿತಾಶಾಮುಖಶೋಭಿತಂ ಬಹಳದೋಷಾರಾತಿಲಕ್ಷ್ಮೀಶನೊಲ್
ತಮದರ್ಪಾಪಹಮೂರ್ತಿ ಸೂರ್ಯನುದಯಂಗೆಯ್ದಂ ಧರಾಧೀಶ್ವರಂ ೧೦೭

ಮುರರಿಪು ಪಾರಿಜಾತಕುಜಮಂ ಕೊಳೆ ಬಿಲ್ವಿಡಿದಂದು ಸೋಲ್ತೆ ನಾಂ
ಪರಿಣತನಪ್ಪೆನಡ್ಡಣಮೊಳೆಂದೊಸೆದರ್ಚಿಸಿ ಮೂಡವೆಟ್ಟದೊ
ಳ್ಗರುಡಿಯೊಳಿಂದ್ರನಾಂತ ಪೊಸಮಾಣಿಕದಡ್ಡಣಮಿಂತಿದೆಂಬಿನಂ
ಕರಮೆಸೆದತ್ತು ಶೋಣರುಚಿಯಿಂದುದಯಾದ್ರಿಯೊಳರ್ಕಮಂಡಲಂ ೧೦೮

[ಜಗನ್ನಾಥವಿಜಯಂ, ೧೬–೧೩೯; ಸೂಕ್ತಿ, ೯–೭೩]

ಸ್ಮರಪರಿತಾಪದಿಂ ಕರಗಿ ಕೋಟಲೆಗೊಂಡೆರ್ದೆಯಾಱೆ ಸುತ್ತಲುಂ
ಪರಿಪರಿದೊಲ್ದ ವಲ್ಲಭೆಯನೀಕ್ಷಿಸಿ ಕಾಣದೆ ಜಕ್ಕವಕ್ಕಿಗಳ್
ಸರಸಮೃಣಾಳಮಂ[1] ಸತಿಗೆ ತೋಱುವವೋಲ್ ಮಱುಗುತ್ತಿರಲ್ಕೆ ತಾಂ[1]
ಕರುಣಿಸಿದಂತೆ ಬಂದುದಯಶೈಲಮನೇಱಿದನಂಬುಜಪ್ರಿಯಂ ೧೦೯

[ಸೂಕ್ತಿಸುಧಾರ್ಣವಂ, ೯–೭೪]

ಜಲಧಿಚಳೋರ್ಮಿಚಾಮರಚಯಂಗೆ ದಿಶಾಧಿಪದಿಗ್ಗಜೇಂದ್ರಸಂ
ಕುಳಪರಿವಾರಭೋಗಿಗೆ ನಭೋಮಣಿಮಂಟಪಮಂಡನಂಗೆ ಕ
ಣ್ಗೊಳಿಪ ಜಗನ್ಮಹಾಪ್ರಭು[2] ನಿರೀಕ್ಷಿಸಲೆತ್ತಿದ ರತ್ನದರ್ಪಣಂ
ಬೆಳಗಿದುದೆಂಬಿನಂ ಸುರಪದಿಕ್ಕಿನೊಳೊಪ್ಪಿತು ಸೂರ್ಯಮಂಡಳಂ[3] ೧೧೦

(ಲೀಲಾವತಿ, ೩–೮೨; ಸೂಕ್ತಿ,೯–೭೧)

---

[1]ಶಿಖಿಗೆ ತೋಱಿದವೊಲ್ ಕರಗುತ್ತಮಿರ್ಪುದುಂ(ಸೂ) [2]ನಿಂಗೆ ಚಂ(ಸ) [3]ಗಭೀಕ್ಷಿಸಲೆತ್ತಿದ ಸುಪ್ರಭಾತ ಮಂಗಳ ಮಣಿದರ್ಪಣಕ್ಕೆ ದೊರೆಯಾಯ್ತುದಯಾದ್ರಿಯೊಳರ್ಕಮಂಡಲಂ(ಸೂ–ಅ)

ನಿಶಿ ಬಿಟ್ಟೋಡೆ ಶಶಾಂಕನುನ್ನತಕರಂಗಳ್ ಬಾಡೆ ಕಂಜಾಳಿ ಸಂ
ತಸಮಂ ಸೂಡೆ [1]ಮದಾಳಿ ಪಾಡೆ ನಲವಿಂ[1] ಚ[2]ಕ್ರಾಹ್ವ[2]ಯಂ ಕೂಡೆ ಶೈ
ತ್ಯಸಮೀರಂ ನೆಱೆ ತೀಡೆ ಕೈರವನಿಕಾಯಂ ಕೋಡೆ ಪೂರ್ವಾದ್ರಿ ಕೆಂ
ಬಿಸಲಿಂದೊಪ್ಪಿರೆ ಮೂಡಿದಂ ಭಗಣಶೋಭಾತಸ್ಕರಂ ಭಾಸ್ಕರಂ ೧೧೧
(ಸೂಕ್ತಿಸುಧಾರ್ಣವಂ,೯–೭೫)

ಉದಯಗಿರೀಂದ್ರಮುದ್ವಹನವೇದಿಕೆ ರಂಜಿಸ ಸಂಜೆಗೆಂಪು ತ
ಳ್ತುದವಿದ ತೋರಣಾವಳಿ ರಥಾಂಗಕಳಧ್ವನಿ ವೇದನಾದದಂ
ದದನಿರೆ ಬೇಗದಿಂ ತಿಮಿರಕಾಂಡಪಟಂ ಪೆಱಪಿಂಗೆ ರಾಗದಿಂ
ದುದಯಿಸಿದಂ ದಿವಾಸುದತಿಯೊಳ್ ನೆರೆನಂದದಿನಂಬುಜಪ್ರಿಯಂ ೧೧೨

ತಮವಿರಮೋಡೆ ಜಾರೆ ಮನೆಗೋಡೆ ತಳಿರ್ಗಳು ಬಾಡೆ ಪೆರ್ಮೆಯಿಂ
ಭ್ರಮರಗಳಾಡೆ ಕಂತು ಪರಿದೋಡೆ ಧರಾತಳ ಕೂಡೆಯೆಲ್ಲರುಂ
ಕ್ರಮದಲಿ ನೋಡೆ ಭೈರವಿಯು ಪಾಡೆ ಹಿಮಂ ಕಱಿದೋಡೆ ಚಕ್ರಸಂ
ಭ್ರಮದಲಿ ಕೂಡೆ ಪದ್ಮ ನಲಿದಾಡೆ ಪ್ರಭಾಕರ ಮೂಡೆ ರಾಗದಿಂ ೧೧೩

ಕಮಲಂ ಕೈಪಱಿಗುಟ್ಟೆ ಚಕ್ರಮಿಥುನಕ್ಕಾನಂದಮಂ ಪುಟ್ಟೆ ಚೆಂ
ಕುಮುದಂ ತಳ್ತಿಸೆದೊಂದುಗುಟ್ಟೆ ವಿಹಗಂ ಕೊಂಬಿಂದಕೊಂಬಟ್ಟೆಲಾ
ಹಿಮ ಹಿಮ್ಮೆಟ್ಟೆ ಶಶಾಂಕನಳ್ಕಿ ಮನದೊಳ್ ದುಃಖಂ ಕರಂ ಪುಟ್ಟೆಲಾ
ಭ್ರಮರಂ ಕಂಪಿನ ಸಾಲಲಟ್ಟೆ ದಿನಪಂ ಪೂರ್ವಾದ್ರಿಯೊಳ್ ಪುಟ್ಟಿದಂ ೧೧೪

ಸರಸೀಸಂಜಾತಮೊಂದೊಂದಲರೆ ಕುಮುದಮೊಂದೊಂದೆಸಳ್ ಮುಚ್ಚೆವೊಂದೊಂ
ದು ರಥಾಂಗಂ ತಮ್ಮೊಳೊಂದುತ್ತಿರೆ ಬಹಳತಮೋಜಾಲ ಬೆಂದೋಱೆ ಪಿಂಗು
ತ್ತಿರಲಾತ್ಮಜ್ಯೋತಿಯಿಂದಂಬರಮನಿರದೆ ಬಂದೇಱಿದಂ ಶಕ್ರದಿಗ್ಭೂ
ಧರಮಂ ಲೋಕಪ್ರದೀಪಂ ಸಕಲಮುನಿಜನಸ್ತೋತ್ರಘೋಷಂ ದಿನೇಶಂ ೧೧೫

ಪರೆಯಲ್ ತಾರಾನುರಾಗಂ ನೆರೆಯಲಿರುಳಗಲ್ದಿರ್ದ ಚಕ್ರಾಹ್ವಯಂ ತಾ
ವರೆಗಳ್ ತಮ್ಮೊಂದಲಂಪಿಂದಲರೆ ದಿವಿಜರಾನಂದದಿಂ ವರ್ಣಿಸಲ್ ಭಾ
ಸುರ ಪೂರ್ವೋತ್ತುಂಗಶೈಲಾಗ್ರದಿನುದಯಿಸಿದಾದಿತ್ಯನಿಂದಂ ಪವಿತ್ರೀ
ಕರಮಾದೀ ಸುಪ್ರಭಾತಂ ಕುಡುಗೆ ನಮಗೆ ಸಂಪ್ರೀತಿಯಂ ಪ್ರೀತಿಯಿಂದಂ ೧೧೬

---

[1]ಮರಾಳಿ ಪಾಡೆಯೊಲವಿಂ(ಸೂ) [2]ಕ್ರದ್ವ(ಸೂ)

ಕಾಯಕ್ಲೇಶವಡೆದೆನ್ನೊಳಾಗೆ ಜಗದೊಳ್ ಮುರ್ಬುರ್ಬಿ ಪೆಯ್ವೆಚ್ಚಿದ
ನ್ಯಾಯಂ ಕೈಮಿಗಲೆನ್ನ ಕಾಂತನನಲಂಪಿಂ ಕೂಡಿದಳ್ ಪಶ್ಚಿಮಾ
ಶಾಯೋಷಿತ್ಕುಟಿಲಾತ್ಮೆಯೆಂದು ದಿವಸಶ್ರೀ ಬೈದು ಜೆಂಬತ್ತಿದಳ್
ಛಾಯಾಸಂಕುಳದಿಂದೆನಲ್ಕೆ ಪಡೆಯಲ್ ಮುಂತಾದುವೆಲ್ಲಾ ನೆಟಿಲ್ ೧೧೭

ಚತುರಾನನಗೊಪ್ಪಿದ
ಸಿತಚಕ್ರವೊ ಧ್ರುವನು ಪಿಡಿದ ಶಂಖದ ಪರಿಯೋ
ಕ್ಷಿತಿಯೊಳ್ ಜಾವದ ವೇಳೆಯೊ
ಳತಿಶಯದಿಂ ನೆಱೆವುತಿರ್ದನಾ ಮಾರ್ತಾಂಡಂ ೧೧೮

ಸುರಪಾಲನೆಂಬ ವಟುಕಂ
ಕಿರಣದ ನೂಲಿಂದೆ ಪಿಡಿಯುತಾಡಿಪ ಬಟುವಿನ
ಸುರಚಿರದ ವಾತಪೂರಣ
ದಿರವಂ ಪೋಲ್ತಿರ್ದನೊಂದು ಜಾವದ ದಿನಪಂ ೧೧೯

## ಮಧ್ಯಾಹ್ನ :

ದಿಕ್ಕುಗಳೆಂಟುಂ ಪೊಳೆಗಳ್
ಪೊಕ್ಕಳಕರ ಬಿಗಿದ ನೇಣುಮಂಬರದೂಲ
ಕ್ಕಿಕ್ಕಿದ ಮಾಣಿಕವಲ್ಲರಿ
ಬೆಕ್ಕಸಮಂಬಡೆದ ಸೂರ್ಯ ಮಧ್ಯಾಹ್ನದೊಳಂ ೧೨೦

ಸುರಪತಿ ಜಾರನಗ್ನಿ ಕಡುಗೋಪಿ ಯಮಂ ದಯಹೀನನಾವಗಂ
ನಿರುತಿ ನಿಶಾಚರಂ ವರುಣನೇಂ ವಿಕಟಾಂಗನು ವಾಯುವೆಂಬವಂ
ಚರಿಸುತಲಿರ್ಪ ಸಂಚಲ ಕುಬೇರನು ಗರ್ವಿತನೀಶ ಭಿಕ್ಷುಕಂ
ಸ್ಥಿರಮಿವರಲ್ಲಮೆಂದು ಗಗನಾಂಗಣಮಧ್ಯದೊಳಿರ್ದ ಭಾಸ್ಕರಂ ೧೨೧

ಧರೆ ಪೊತ್ತಲ್ ಸೂರ್ಯಕಾಂತಂ ಭುಗಿಲಿಡಲುಱೆ ಕಾಯ್ದಾಪಗಾವಾರಿ ಬತ್ತಲ್
ಗಿರಿಗಳ್ ಪೋಟಾಗಿ ಬೀಟಲ್ ದಿಗಿಭಸಮುದಯಂ ಗೀಟಿಡಲ್ ನೋಟ್ಪೊಡತ್ಯಾ
ಸರಮಪ್ಪ ವ್ಯೋಮಕೇಶಾಖ್ಯನ ನೊಸಲುರಿಕಣ್ಣೆಂಬವೋಲ್ ತೀವ್ರತೇಜೋ
ತ್ಕರಮಂ ಬೀಱುತ್ತೆ ಮಧ್ಯಾಹ್ನದ ಸಮಯದೊಳೊಪ್ಪಿರ್ದುದಾದಿತ್ಯಬಿಂಬಂ ೧೨೨

ಸುರಪಥ ವಿಷ್ಣುನಾಭಿಕಮಲಂ ಗಗನಾಂಗನೆ ತೊಟ್ಟ ಮೇಖಲಾ
ಸ್ಥಿರತರಮಧ್ಯನಾಯಕಸುರತ್ನಮನಂತಲಸದ್ಘಟಂಗೆ ಸಂ
ದಿರಿಸಿದ ಬೆನ್ನಕನ್ನಡಿ ನಭೋದ್ವಿಪದಾ ನಡುಗಂಟೆಯೆಂಬಿನಂ
ಕರಮೆಸೆಯುತ್ತ ನೋಡಲಿನನಂಬರಮಧ್ಯದೊಳಿರ್ದ ಭೂಪತೀ ೧೨೩

## ಮೂಱುಜಾವ :

ಧ್ರುವನ ಮೇಲೆತ್ತಿ ವರುಣಂ
ಪವನಿಸುತಂ ಬರುತ ಪಿಡಿಸಿಕೊಂಡನೊ ಶೋಣಿಮ
ನವೀನಛತ್ರಮನೆಂದೆನೆ
ದಿವಕರನೊಪ್ಪಿರ್ದ ಮೂಱುಜಾವದೊಳೊಲವಿಂ ೧೨೪

ಸುರಪತಿ ಪಶ್ಚಿಮಾಂಗನೆಗೆ ಕೊಡುತೋಡನಟ್ಟುವ ರತ್ನದರ್ಪಣಂ
ಹರಿಪದಬಾಲಕಂ ಪಿಡಿಯುತಾಡುವ ಗುಂಜಿಯದೊಂದು ಕಂತುಕಂ
ವರುಣನ ರಾಜಧಾನಿಗೆಸೆದೊಪ್ಪುವ ಹರ್ಮ್ಯದ ಹೇಮಕುಂಭಮೆಂ
ಬುರುತರಭಾವದಿಂ ಕಿರಣಸಾಸಿರನೊಪ್ಪಿದ ಮೂಱುಜಾವದೊಳ್ ೧೨೫

ಓರಂತೆ ಮೆಚ್ಚಿದಂ ಕೃತಿ
ಸಾರಂ ರವಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೨೬

ಗದ್ಯ ॥ ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಸೂರ್ಯೋದಯವರ್ಣನಂ ನವಮಾಶ್ವಾಸಂ

# ಋತುವರ್ಣನಂ

## ವಸಂತಋತುವರ್ಣನಂ

ತರು ಮೃಗ ಪಕ್ಷಿ ಮೇಘ ಜಲ ವಾಯು ದಿಶಾಜನ ಕಾಯಭೋಗ ಭಾ
ಸ್ಕರ ವಿಧು ರಾತ್ರಿ ವಾಸರ ಸುರಾಲಯ ಪರ್ವ ರತೋಪಚಾರ ಸಿಂ
ಧುರ ಮಧುಜನ್ಮ ಯಾನ ಮದನೋದಯ ಸಸ್ಯವಿಶೇಷಭಾವದೊಳ್
ಪರಿಣತನಪ್ಪವಂಗೆ ಋತುವರ್ಣನವಿಸ್ತರಮೊಪ್ಪಿ ತೋಱುಗುಂ ೧

(ಸೂಕ್ತಿಸುಧಾರ್ಣವಂ,೧೦-೧)

ಶಿಶಿರದ ಪೊಸಲತೆಯುಂ
ಪೊಸವಸಂತಸಮಯಪ್ರವೇಶಮುಂ ತಮ್ಮೊಳ್ ಸಂ
ದಿಸಿ ಬಣ್ಣಿಸಲಱಿದಾದೊಡ
ಮೆಸೆವಾಱು ಋತುಸಂಧಿಯಂ ವಿಭಾಗಿಸಿ ಪೇೞ್ವೆಂ ೨

ಮಾಮರ ಪೂ ಪಾಡಿವ ಸಂ
ಕಾಮಿನಿಯರ್ ಬನದೊಳುಯ್ಯಲಾಡುವ ದಿವಸಂ
ಕಾಮನ ಸರಳಿನ ದಿವಸಂ
ಪ್ರೇಮಂ ಪಿರಿದಾಯ್ತು ಧರೆಗೆ ಸುಗ್ಗಿಯ ದಿವಸಂ ೩

ಅಂತು ಬೆಡಂಗನಾಳ್ದ ಕಳಿಕಂ ಕುಸುಮಂ ಸಹಕಾರಭೂಜದಿಂ
ದಂ ತಲೆದೋಱಿದನ್ನಮೊಸೆದನ್ಯಭೃತಂ ತಲೆದೋಱಿದನ್ನಮೋ
ರಂತೆ ವಸಂತಪೆಟ್ಟಿರವು ತೋಱುವವೋಲ್ ಮೊನೆದೋಱಿದತ್ತು ವಾ
ಸಂತಿ ವಸಂತದೂತಿವೆಸರೆಂಬುದು ಸಾರ್ಥಕಮಾಗಿ ತೋರ್ಪಿನಂ ೪

ಮೊದಲೊಳ್ ತಂಬೆಲರ್ಗಾನೆ ಬೋಪಣಿಗೆಗಂಪಂ ಬೀಱಿದೆಂ ಸುಗ್ಗಿ ಬ
ರ್ಪುದುಮೀ ನಂದನಕಾನೆ ಮುಂದುಗೆಡೆದೆಂ ಪುಷ್ಪೇಷುಗಂ ಪುಷ್ಪಬಾ
ಣದ ಮುಂಗಾಣ್ಕೆಯನಿತ್ತೆನಾನೆ ಪೆಱತೆನ್ನಂತಾದುವೇ ಪ್ಯೆಮೆಗಾ
ಸ್ಪದಮೆಂಬಂತೆವೊಲಾಯ್ತು ಮಾಧವಿ ಮದಾಳಿಧ್ವಾನಸಂತಾನದಿಂ ೫

(ಜಗನ್ನಾಥವಿಜಯಂ. ೧೯-೬೩; ಸೂಕ್ತಿ. ೧೦-೮೩)

ನಿನಗೆ ವಸಂತದೂತಿವೆಸರೊಪ್ಪುವುದೆಂತೆನೆ ಮುಂದೆ ಬಂದು ನೀ
ನೆನಗೆ ವಸಂತನಾಗಮನಮಂ ನೆಱೆ ಸೂಚಿಸಿಕೊಟ್ಟೆಯೆಂದು ನಂ
ದನವನಲಕ್ಷ್ಮಿ ಕೀರರವದಿಂ ಪೊಗೞುತ್ತ ಪಸಾಯದಚ್ಚವಮು
ತ್ತಿನ ಪೊಸವಚ್ಚನುಂ ತಳೆದವೋಲದಿರ್ಮುತ್ತೆ ಮುಗುಳ್ತುದೆತ್ತಲುಂ ೬

(ಚಂದ್ರಪ್ರಭಪುರಾಣಂ,೭-೪೧;ಸೂಕ್ತಿ,೧೦-೮೪)

ಪಳಚನೆ ಪೊಳೆವೆಳವೆಂಡಿರ
ಬಿಳಿಯಲರ್ಗಣ್ಣವರ ಚೆಲ್ವನೆಳಕುಱಿಗೊಂಡಂ
ತಳೆದುರ್ ತೊಳಗಿದುವು ಕುಮುದಂ
ಗಳ ಸಿರಿಯೋಸರಿಸಿದತ್ತು ಶಿಶಿರಾತ್ಯಯದೊಳ್ ೭

(ಲೀಲಾವತಿ,೯-೭೬)

ಪೊಸಯಿಸಿ ನಸುಮಿಸುಪೇಱಿದ
ಬಿಸಿಲಿಱಿಯೆ ಬೆಮರ್ತುರ್ ಬಿಂದು ಬಿಡುವವೊಲೆನಸುಂ
ಪೊಸಮುಗುಳಂ ಪೊತ್ತಸೆದುದು
ವಸಂತದೂತಿಕೆ ವಸಂತಮಾಸದ ಮೊದಲೊಳ್ ೮

(ಲೀಲಾವತಿ, ೯-೮೮)

ನೂಂಕಿತರೆ ತೇರನೂಂಕುವ
ತೆಂಕಣೆಲರ್ ಬರ್ಪಿನಂತೆ ಭಯಮುತ್ತವೊಲೇ
ಣಾಂಕನೆಡದೊಲಗಿ ಬರುತಿರೆ
ಪಂಕಜಸಖನುತ್ತರಾಯಣಕ್ಕೆೞ್ತಂದಂ ೯

(ಲೀಲಾವತಿ, ೯-೮೨)

ಕರಮೊತ್ತಿ ಕುತ್ತಿ ಖರಕರ
ಕಿರಣಂಗಳ್ ಪೊಸೆಯೆ ಪುಟ್ಟಿದಗ್ನಿಕಣಂಗಳ್
ಕರಗಿಸಿದುವು ಪೊರೆಯೆತ್ತಿದು
ಪುರುಪಿದುವಾಕಾಶದಲ್ಲಿ ಪತ್ತಿದ ಹಿಮಮಂ ೧೦

(ಲೀಲಾವತಿ,೯-೮೩)

ಮೀಂಗಳ್ ಮಿಗೆ ಮೋಕ್ಷಸ್ನಾ
ನಂಗುಡುವವೊಲೊಡನೆ ಮುಳುಗೆ ತಾನುಗುಳ್ದುದು ಮುಂ
ನುಂಗಿದ ದಿನಕರನಂ ಮಿಗೆ
ಪಿಂಗುತ್ತುಂ ರಾತ್ರಿರಾಹು ಶಿಶಿರಾತ್ಯಯದೊಳ್ ೧೧
(ಲೀಲಾವತಿ,೯–೮೪)

ಶ್ರೀಪದ್ಮದೊಳೊದವೆ ಮನ
ಸ್ತಾಪಂ ಪುಟ್ಟಿದುದೋ ತಮಗೆ ರುಜೆಯಾಯ್ತೊ ದಿವಾ
ಸ್ವಾಪದಿನೆನೆ ನಯಮಿಱಿದವೊ
ಲೊಪ್ಪಿದುವು[1] ಮಧುಪ್ರವೇಶದೊಳ್ ಕುಮುದಂಗಳ್ ೧೨
(ಲೀಲಾವತಿ,೯–೮೬)

ನನೆಯುಂ ಪೊತ್ತುದು ಮಾಧವಿ
ಮೊನಸಿದವಂಕುರಿಪ ತಾಣವಿಮಾವ್ರುಗಳೊಳ್
ಜಿನುಗಿದುದು ಕೋಕವಳಿ ಪಿಕ
ನನಂತರಂ ಬಿಲ್ಗೆ ಮದನನನುಮಾನಿಸಿದಂ ೧೩

ಪೊಳೆವ ದೃಗಂತಿಯಿಂದೆ ನಸವಾಸವೊಡರ್ಚಿದುದನ್ಯಪುಷ್ಪನಂ
ಕಳರುತಿ ಹತ್ತಿ ಸಾರ್ದುದು ನವಾಮ್ರಕುಳಂಗಳೊಳಂಕುರಸ್ಥಳಂ
ತಳೆದುವು ತೆಂಬೆಲರ್ ಜನಿಯಿಸಿರ್ದುದು ಬಾಲ್ಯದೊಳೆತ್ತ ಮಾರನ
ಗ್ಗಳಿಸುವ ಮಾರ್ಗಣಂಗಳೆನೆ ಚಿಂತಿಸುತಿರ್ದನದಾವಕಾಲಮೋ ೧೪

ಮುಗುಳೊತ್ತಿತ್ತದಿರ್ಮುತ್ತೆಯುಂಕುರಿಸಿತಾಮ್ರಂ ಬಂದು ಮಂದಾನಿಲಂ
ಪುಗುತಂದೊಂದಡಿಯಿಟ್ಟನನ್ಯಭೃತನಂತಂತೊಮ್ಮೆ ಕೂಗಿಟ್ಟು ಮೆ
ಲ್ಲಗೆ ಬಿಲ್ಲಂ ಗೊಲೆಗೆತ್ತಿ ಹೂಡಿದನಮೋಘಾಸ್ತ್ರಂಗಳಂ ದರ್ಪಕಂ
ಧಿಗಿಲೆಂದತ್ತು ವಿಯೋಗಿವೃಂದಹೃದಯಂ ವಾಸಂತ ಮಾಸಾಂತ್ಯದೊಳ್ ೧೫

ತಳೆದುದು ಮಾಗಿ ಕೂಗಿದುದು ಕೋಗಿಲೆ ಪಲ್ಲವಿಸಿತ್ತು ಮಾಮರಂ
ತಳವೆಳಗಾಯ್ತು ಪಾಂಥಜನಮೊಲ್ದವರೊಳ್ ನವಭೋಗದುಜ್ಜುಗಂ
ಮೊಳೆತುದು ಕಾಮನೆಸು ಗುಜುಂಗೆಂಡುದು ತಂಡದಿ ನಿಂದ ನಂದನಂ
ತಳೆದುವು ಕೂಡೆ ಕೆಂಪಿನ ಪಸುರ್ಪಿನ ಕಪ್ಪಿನ ಬೆಳ್ಪಿನಂದಮಂ ೧೬

---

[1] ನಿಯಮಿಳಿಪಲುತಾಪದದು(ಸ)

ಮುದದಿಂದಂ ಮಧುದೂತಿಯುಂ ನೊಗನುಲರ್ಚುತ್ತಂ ವಿರಾಜಪ್ಪ ಚೂ
ತದ ಮೆಯ್ಯೊಳ್ ಪುಳಕಂಗಳಂ ನೆಗಪುತುಂ ಸಾರ್ದನ್ಯಪುಷ್ಟಕ್ಕೆ ಕಂ
ಠದ ನಾದಂ ನೆಲೆವರ್ಚಿಸುತ್ತೆ ಬನಮುಂ ವೈವರ್ಣಮಂ ಮಾಡುತು
ಬರ್ದಲಂಪಿಂಡೆ ವಸಂತರಾಜನೊಸೆದೆಟ್ಟಿಂದಂ ಜಗದ್ವಲ್ಲಭಂ ೧೭

ಜನವನುರಾಗವೇಱೆ ಲಲನಾಜನಮುಂ ತೆಗೆದಪ್ಪೆ ಮೀಱೆ ಸ
ನ್ಮನಿನಿಕರಂ ಜಪಂತಪವನೋವದೆ ಬಿಟ್ಟತಿದೈನ್ಯದಿಂ ವಧೂ
ಸ್ತನತಟವೀಕ್ಷರಾಗೆ ಮೃಗವೀಧಿ ಮೃಗೀಕುಲದತ್ತ ಸಾರ್ದು ಬೆ
ನ್ನನೆ ಮಿಗೆ ಪ್ರೋಗೆ ಪರ್ವಿತಿಳೆಯಲ್ಲಿ ವಸಂತ ವಿಲಾಸಸಂಪದಂ ೧೮

ನಡುಗಿ ವಿಯೋಗಿಗಳ್ ಸೆಡೆದು ಜೀವವನೊಪ್ಪಿಸಿ ದರ್ಪಕಂಗೆ ಮುಂ
ದಡಿಯಿಡಲಾಱದೊತ್ತರಿಸೆ ಪಾಂಥಜನಂ ಕಳೆಗುಂದಿ ಕಂದಿ ಪಾ
ವಡರ್ದವೊಲಾಗುತಂ ಹೆದರಿ ನಲ್ಲರ ವೈಸಿರಿ ನವ್ಯಭೋಗದೊಳ್
ತೊಡರ್ದಿರೆ ಬಂದು ನಿಂದು ಕಳೆಯಂ ದಳವೇಱಿಸಿದಂ ವಸಂತಕಂ ೧೯

ಪ್ರೊರವಿಡೆ ಸೋಂಕೆ ತೆಂಕಣೆಲರೂದಲೊಡಂ ಸ್ಮರದಗ್ಧಭೂಜಮುಂ
ಕುರಿಸದೆ ಚಿತ್ರಜನ್ಮನ ಲಸದ್ಭುಜಶಾಖೆಯೊಳೇಕೆ ವೀರಮುಂ
ಕುರಿಸದೆ ಜೀಟಮುಂ ಬಳೆದು ಬಾಟ್ವಿ ಜನಂಗಳ ಚಿತ್ತ್ರಬೀಜಮುಂ
ಕುರಿಸದೆ ಚೂತಮೊಂದೆ ಪೊಸತಂಕುರಿಸಿತ್ತು ವಸಂತಮಾಸದೊಳ್ ೨೦

(ಲೀಲಾವತಿ,೯–೬೫)

ಕೊನರಸೆ ಸಾರ್ದ ಕೋಗಿಲೆಯ ಸತ್ತ್ರಸರಂ ಪೊಸತಾಗಿ ಪುಟ್ಟಿತೆಂ
ಬಿಸಿತೆ ಬನಂಗಳೊಳ್ ಕೊನರ್ವ ಕನ್ನಡವಕ್ಕಿಯ ನಾದಮೆತ್ತ್ರ ರು
ದ್ರನ ಮುನಿಸಿಂದೆ ಬೆಂದತನುವುಂ ಮಱುವುಟ್ಟಿಗನಾದನಂದು ಮಾ
ವಿನ ಕಳಿಕಾರಸಂ ನವಸುಧಾರಸಮಲ್ಲವೆ ಚೈತ್ರಮಾಸದೊಳ್ ೨೧

(ಲೀಲಾವತಿ,೯–೬೬)

ಕಲಿಕೆ ಕವಲ್ತು ಮೂಡಿದುದು ಮಾಮರದೊಳ್ ಬನದೊಳ್ ಪೊರಳ್ದು ಸಾ
ಯಲೆ ಪೊಲಗೆಟ್ಟು ಪೊಕ್ಕುದು ವಿಯೋಗಿ ಮೃಗಾವಳಿ ಕೊಲ್ವುದೆಂದು ಮು
ನ್ನುಲಿಯದೆ ಕೊಂಬುಗೊಂಡುಱಿದ ಕೋಗಿಲೆ ಕಬ್ಬಿನಬಿಲ್ಗೆ ಕೂರ್ತು ಕ
ರ್ಜಿಳ ನನೆಗೊಬ್ಬಿನಿಂ ಕರೆವವೋಲ್ ಕರೆದತ್ತು ವಸಂತಮಾಸದೊಳ್ ೨೨

(ಲೀಲಾವತಿ,೯–೬೭)

ತಳಿರಂ ತಾಳ್ದಿ ಬಟಿಲ್ದು ಪೊತ್ತು ನೆನೆಯಂ ಪೊಗೊಂಚಲಂ ಪೇಱ ಬ
ಳ್ವೆಳನಳ್ಕಾಡುವ ಭೃಂಗ ಕೋಕಿಳಶುಕವ್ರಾತಂಗಳಿಂ ಬಟ್ಕುವೀ
ಸೆಳೆಗೊಂಬುಂ ಕೊನೆಗೊಂಬುಮೆಂತು ಫಳಬಾರಕ್ಕಾರ್ಪುವೆಂದಾಂತವೋಲ್
ಎಳಮಾವಂ ಮಲೆಯಾನಿಳಂ ಬಳಸಿಕೊಂಡಿರ್ದತ್ತು ಚೈತ್ರಾದಿಯೊಳ್ ೨೩

(ಲೀಲಾವತಿ,೯–೬೯)

ಗಿಳಿ ತಳಿರಂ ಮುದಂ ಮುಗುಟ್ದಿ ಕೋಗಿಲೆ ಕೋರಕಮಂ ಮದಾಳಿ ಪೂ
ಗಳನರೆಗರ್ಚಿ ಪಾಱುದುವು ನೂತನಮಂ ನವವಸ್ತುಜಾತಮಂ
ಬಳೆದೊಲವಿಂದವೋಲಗಿಸಿ ಬಂದ ಬಸಂತದ ಸೊಂಪನಟ್ತಿಯಿಂ
ತಳೆದಱಪಲ್ಕೆ ಪೋಪ ಸನಪಾಲಕರಂತೆ ಮನೋಜರಾಜನಾ ೨೪

(ಲೀಲಾವತಿ, ೯–೨೦)

ನನೆಯ ಪುಣಂಬುಮಂ ಮುಗುಳ ಮಿಟ್ಟೆಯುಮಂ ಮಱದುಂಬಿ ಪಾಯ್ದು ಪೂ
ವಿನ ಕವಲಂಬುಮಂ ತೊಡದ ಮುನ್ನವೆ ಮನ್ಮಥನುರ್ಚಿ ಬಂದ ಮಾ
ವಿನ ಮುಗುಳ್ವೆತ್ತ ಮಲ್ಲಿಗೆಯ ಪೂತದಿಮುರ್ತ್ತೆಯ ಕಂಪೆ ಕಂಪಮಂ
ಕೊನರಿಸಿ ಕೊಂದು ಕೂಗಿದುವು ತಾಗಿ ವಿಯೋಗಿಗಳಂ ವಸಂತದೊಳ್

(ಲೀಲಾವತಿ, ೯–೨೧)

ಫುಲ್ಲಶರಶಿಖಿಯ ಪೊಗೆಯೆನೆ
ಪಲ್ಲವಿಸಿದಶೋಕೆಯಿಂದೆ ಪುಗೆ ಬಂದಳಿಗಳ್
ಮಲ್ಲಿಗೆಯಲರ್ಗಣ್ಗಳಿನಲ
ರಲ್ಲೊಕ್ಕುವು ಬಾಷ್ಪಬಿಂದುವೆನೆ ನವಮಧುಪಂ ೨೬

(ಲೀಲಾವತಿ, ೯–೧೧೧)

ಆನೆ ಮದನಂಗೆ ಪೊಸಮದ
ದಾನೆ ಜಗದ್ವಿಜಯಕೆಂದು ಮುಡಿಗಿಕ್ಕುನವೋ
ಲೇನುಕ್ಕಿದುದೋ ವಸಂತಾ
ಸ್ಥಾನಿಕೆಯೊಳ್ ಪಾಟಳದ್ರು ಜಠರಚ್ಛದಮುಂ ೨೭

(ಲೀಲಾವತಿ, ೯–೧೧೩)

ಮದನನ ದಂಡು ಮಲ್ಲಿಗೆಯ ಬಂಡು ಪಿಕಾಳಿಯ ತೊಂಡು ಪೂತಚೂ
ತದ ತನಿಗೊರ್ಬು ಮಾಧವಿಯ ಪರ್ಬು ತಮಾಲದ ಮರ್ಬು ರಾಜಕೀ
ರದ ತನಿಸೊರ್ಕು ಕಾಮಿಜನದುರ್ಕು ವಿಯೋಗಿಯ ಸೆರ್ಕು ಕೂಡೆ ಬಂ
ದುದು ಮಧುಮಾಸರಂ ವಿವಿಧಕೇಸರಮುದ್ಧತಧೂಳಿಮಾಸರಂ ೨೮

ಬಂದಪನಿಂದು ನಾಳೆ ಮದನಂ ವನಕೇಳಿಗೆ ರಾಜಕೀರ ಮಾ
ಕಂದದ ಕಾಪು ನಿನ್ನದು ಮದಾಳಿಯೆ ಪೂಗಳ ಕಾಪು ನಿನ್ನದೆ
ಲ್ತಿಂದಿರು ಬಾಗಿಲೊಳ್ ಪಿಕ ಸರೋವರಮಂ ಕಳಹಂಸ ಕಾಪುಗೊಳ್
ಸಂಧಿಸಿ ಗಂಧವಾಹ ಕೊಳಲೆಂದು ನಿಯಾಮಿಸಿದಂ ವಸಂತಕಂ ೨೯

(ಸೂಕ್ತಿಸುಧಾರ್ಣವಂ, ೧೦-೮೭)

ಮಲ್ಲಿಗೆಯೊಳ್ ಮದಾಳಿ ಫಳದೊಳ್ ಕೋಕಿಲೆ ಕೆಂದಳಿರ್ಗಳೊಳ್
ನಿಲ್ಲದೆ ಹಸೆವಿಂಡು ಕೊಳದೊಳ್ ಕೃತಕಾಜಲದೊಳ್ ಮಯೂರಮಂ
ತೆಲ್ಲವನೋಜೆಯಿಂ ಬಳಸಿ ಮಂದಸಮೀರ ವಿಯೋಗಿವೃಂದಮಂ
ಮೆಲ್ಲನೆ ಸೋವುತಂ ಸುೞಿದನೆಯ್ದೆ ವಸಂತನ ಕಾಪಿನಾಳಿನೊಲ್ ೩೦

ಕೋಡುವ ಕೋಕಿಲಂ ಕೃತಕಶೈಲದೊಳಾಡುವ ಸೋಗೆ ಸೌರಭಂ
ಗೂಡುವ ಮಂದವಾಯು ಕೊಳದೊಳ್ ನಲಿವಂಚೆ ನವೋತ್ಪಲಕ್ಕೆ ಬಿ
ಟ್ಟೋಡುವ ಭೃಂಗಸಂಕುಳವಗಲ್ದಿನಿಯರ್ಕಳ ಬೈದು ಭೀತಿಯಿಂ
ಮಾಡುವ ರಾಜಕೀರತತಿಯೊಪ್ಪಿದುವೆಯ್ದೆ ವಸಂತಕಾಲದೊಳ್ ೩೧

ಶಶಿ ಹಸನಾದನೊಪ್ಪುವ ಬನಂ ಮೊನೆಯಾದುವು ಕೋಕಿಲಾರವಂ
ಮಿಸುಗಿತು ತದ್ವಿಯೋಗಿಜನರೋಪರ ಭಾವಿಸಿದರ್ ಮದಾಳಿಗಳ್
ಕುಸುಮಕೆ ಪಾರ್ದವಂಗಜನು ಪೂರ್ವದ ಕರ್ಬನಬಿಲ್ಗೆ ನಾರಿಯಂ
ಸಸಿನೆ ತೊಡರ್ಚಿದಂ ಮಲಯಮಾರುತನುಣ್ಮಿದನಾ ವಸಂತದೊಳ್ ೩೨

ಮಲ್ಲಿಗೆ ನೂತ್ನ ಪುಷ್ಪಪತಿಯಾಗಿರೆ ಮಾವಿನ ಪೈಗುಳುರ್ಚೆ ಕಂ
ಕೆಲ್ಲಿಗೆ ರಾಗಮುಣ್ಮೆ ಮಧುದೂತಕಿ ಪೂದರೆ ಪಾಟಲವ್ರಜಂ
ಮೊಲ್ಲೆಗೆ ಛತ್ರಮಂ ಪಱಿದಿಡಲ್ ಮಿಗೆ ಮೊಲ್ಲೆಗಳೆಲ್ಲ ಬೀಯಲಾ
ಪುಲ್ಲನೆ ಪೊತ್ತು ತುಂಬಿಗಿಡೆ ಮಾರುತನೊಪ್ಪಿದನಾ ವಸಂತಕಂ ೩೩

ರತಿಗೆ ವಿಳಾಸಮಾಯ್ತು ಮುಳಿಸಿಂಗೆಡೆಯಪ್ಪುದೆಯೆಂದು ಕಾದಲರ್
ನುತವನವೊಕ್ಕು ಮೆಯ್ಗರೆದರಲ್ಲಿ ವಿಯೋಗಿಗೆ ಪುಷ್ಪಬಾಣದಾ
ಹತಿ ಕನಸಲ್ಲಿ ತೋಱಿದುದು ಕರ್ಬಿಗೆ ಕೊರ್ಬುದಿಸಿತ್ತು ಪೂಗಳು
ಬರ್ತೆ ತಿರುಗೆಂದು ತುಂಬಿಗಳ ಬಾರ್ಚಿದನಂಗಜ ಚೈತ್ರಮಾಸದೊಳ್ ೩೪

ಸೊನೆಯೊಳ್ ಮಿಂದುಱೆ ಮಾಲೆದುಂಬಿಗುರುಳಂ ಹೂಹಕ್ಕೆಯೊಳ್ ಬಿಟ್ಟು ಕ
ಮ್ಮನೆಯಂ ಕೊಳ್ಪವೊಲಾರಿಸೊಲ್ದು ಶಿಖಿಯಂ ತಾನುಂಟುಮಾಡುತ್ತೆ ಜೆ
ಳ್ಕನೆಯೊಳ್ ಹಾರಮನಾಂತು ಪಾಂದಳಿರೆ ಪಟ್ಟಂ ಪೊರ್ದಿ ನೋಟ್ಪರ್ಗೆ ನೋ
ಹನದಿಂದಿಷ್ಟಫಲಂಗಳೀವುತೆ ವಸಂತಾಧೀಶನೇನೊಪ್ಪಿದಂ ೩೫

ಎಸೆವ ವಸಂತನ ದೂತಿಕೆ
ಪೆಸೆರ್ವೆತ್ತುದಿರ್ಮುತ್ತೆಯಾಂತ ಪೂನೊಗವಿಂಪಂ
ಪಸರಿಸೆ ಪವನಂ ನಲಿವಂ
ಶಶಿಮುಖಿ ದೂತಿಯರ ವಚನಮೇಂ ಸವಿಯೋ ಶಿವಾ ೩೬

ಎಸೆವ ಬಸಂತಂ ಬಿಸಿಲುಮ
ನೆಸಕಮನಾಗಿಸದೆ ಮಾಣನೆಂದು ವಿಧಾತ್ರಂ
ಶಶಿಮುಖಿಯರ ಕಡೆಗಣ್ಣೊಳ್
ಪೊಸಜೊನ್ನಮನಿರಿಸಿ ಜಗಮನುಳುಹಿದನೊಲವಿಂ ೩೭

ಬಿಂಕಪೆ ದೃಶ್ಯಾದೃಶ್ಯವ
ದಂ ಕಾಣಿಸಿ ನೋಡಲೊಡನೆ ಸೊನೆ ಬೆಮರಾಗಿಸು
ತೌಂಕಿ ರೋಮಾಂಕುರಂಗಳು
ಮಂ ಕಲ್ಪಿಸಿ ವಧುಕುಚಕ್ಕೆ ಮಧುಸಮನಾದಂ ೩೮

ಅತಿರಾಗಂಬೆತ್ತು ಗತಾ
ಗತಭಾವಂದಾಳ್ದಶೋಕಪಲ್ಲವತತಿಯಾ
ಕೃತಿಗೆಯ್ದಿ ಬಂಧುರಾಳಿಯ
ನತವಾತಂಗನೆಯರಂಘ್ರಿಯೋಲ್ ಮಧು ಮೆಱೆದಂ (?) ೩೯

ನವರತ್ನೋಜ್ಜ್ವಲನೂಪುರಕ್ವಣಿತಮೊಪ್ಪುತ್ತಿರ್ಪ ವಾಮಾಂಘ್ರಿಪ
ಲ್ಲವಸಂಘಟ್ಟನದಿಂ ತಳಿರ್ವಲರ್ದು ತನ್ನೊಳ್ ತತ್ಪದಾಲಕ್ತಕಾಂ
ಶುವ ಕೆಂಪುಂ ತಳಿರ್ಗೆಂಪುಮುಳ್ಳಲರಕೆಂಪುಂ ನಾಡೆಯುಂ ಚೆಲ್ವವೀ
ಱುವಿನಂ ಮೂಱಡಿ ಕೆಂಪುವೀಱಿದುದಶೋಕಾನೋಕಹಂ ಚೈತ್ರದೊಳ್ ೪೦

(ಜಗನ್ನಾಥವಿಜಯಂ, ೧೪–೨೮)

ಹಸಿತಾಂಭೋಜಾಸ್ಯೆಯರ್ ಮುಕ್ಕುೞಿಸಿಯುಗುೞ್ವಿನಂತಾವಗಂ ಸಿಂಧುಮಂ ಸೇ
ವಿಸಿ ಸೊಕ್ಕಿಂದೀ ಮಹೀಜಂ ತಳೆದು ಪುಳಕಘರ್ಮಾಂಬುಸಂದೋಹಮಂ ಸಂ
ತಸದೊಳ್ ಪಾಡುತ್ತಮಿರ್ದತ್ತೆನಿಸಿ ಮುಗುಳ್ಗಳಿಂ ಪೂಗಳಿಂ ತಾಳ್ದು ಭೃಂಗೀ
ರಸವದ್ಗೇಯಪ್ರಣಾದಾಕುಳವಕುಳಕುಜಂ ಚೆಲ್ವನೆತ್ತಿರ್ದುದೆತ್ತಂ ೪೧

(ಜಗನ್ನಾಥವಿಜಯಂ, ೧೪–೩೦)

ಲಲನೆಯುದುನ್ನತಸ್ತನದ ಸೋಂಕಿನೊಳೀ ಮರನೇಂ ಪ್ರಮೋದದಿಂ
ಪುಳಕಿತಮಾದುದೋ ಕಾಂತೆಯುರ ಪೆರ್ಮೊಲೆ ಸೋಂಕಿದೊಡಾದೊ ಮಾನವರ್
ಪುಳಕಿತರಾಗದಿರ್ಪರೊ ತನ್ವಿಯ ರುದ್ಧಕುಚಂಗಳೊತ್ತಿನಿಂ
ಬೀದು ನವಾಂಕುರಂ ಕುರವಕೋತ್ಕರದೊಳ್ ಕರಮೊಪ್ಪಿ ತೋಱುಗುಂ ೪೨
(ಜಗನ್ನಾಥವಿಜಯಂ, ೧೪-೨೯)

ಬಂದೆಳಮಾವೆ ಚಿತ್ರಜನ ಬೀಡಿನೊಳಾವುದು ರಾಜವಾರ್ತೆ ಕಾ
ಮಂ ದಯೆಗೆಟ್ಟು ಕಾಮುಕಜನಕ್ಕುಱೆ ಜರ್ವಿ ವಸಂತರಾಜ ಕೊ
ಲ್ಲಿಂದುಱೆ ದಂಡುವೇಟ್ಟಿನದುವಲ್ಲದೆ ಮನ್ಮಥಚಕ್ರವರ್ತಿಯೆ
ಯ್ತಂದಪನಿಂದು ನಾಳೆ ಬದುಕಿಲ್ಲ ವಿಯೋಗಿಗೆ ಪಂಕಜಾನನೆ ೪೩
(ಸೂಕ್ತಿಸುಧಾರ್ಣವಂ, ೧೦-೪೫)

ಜಾತಿಗೆ ಸೊಂಪು ಪೋದುದು ಕುಜಾತಿಗೆ ಪೆಂಪು ತಳಿರ್ತುದುನ್ನಮ
ತ್ವ್ಯಾತಪಮಾಯ್ತು ರಾಜಗರಮಾಱಿ ಪೆರ್ಚಿದುದಾವಗಂ ಜಡ
ಪ್ರೀತಿ ಮನಕ್ಕೆ ಪುಟ್ಟಿದುದು ಮಿತ್ರನೊಳಾಯ್ತದು ಕಾಯ್ಪು ಸಾರ್ದು ಕಾ
ಮಾತುರಮಾದುದೀ ಜಗದಿನೇಂ ಕಲಿಕಾಲಮೊ ಚೈತ್ರಕಾಲಮೋ ೪೪

ಕಳಿಕೆಗಳೆಂಬ ಹರ್ಷಪುಳಕಾವಳಿಯುಂ ತಳೆದಿರ್ಪಳಾಮ್ರಕೋ
ಮಲೆ ಮಧುಪಾವಳೀ ನಿನದಮೆಂಬ ಕಳಧ್ವನಿಯಿಂದೆ ಮಲ್ಲಿಕಾ
ಲಲನೆ ಕಡಂಗಿ ಪಾಡಿದಪಳಬ್ಜಿನಿ ತನ್ನ ಪರಾಗಮೆಂಬ ತಂ
ಬುಲಮಂಗೆ ನಕ್ಕಪಳ್ ವಿಕೃತಿಯಿಂ ಮಧುಸಂಗತಿ ಮಾಡದಿರ್ಕುಮೇ ೪೫
(ಜಗನ್ನಾಥವಿಜಯಂ, ೧೪-೨೩)

ತಿಳಿಪಲ್ ವಾಸಂತಿಯುಂ ಸಂದಿಸಿ ಪುಗಿಲಿನೆ ಪುಂಸ್ಕೋಕಿಳಂ ಕಾರ್ಶ್ಯದಿಂ ಬಂ
ದೊಳಪೊಕ್ಕೊಟ್ಟೈಸಿ ಮಲ್ಲೀಮುಕುಳಕಳಿತ ಭೃಂಗಾವಳೀನೀಳಮುಕ್ತಾ
ಫಳಮಂ ತಂದಿತ್ತು ಪಾಮಂಬಿಡಿದು ನೆಗೆವಿನಂ ಕಂಟಕಂ ಜಾತಿಕಾಕೋ
ಮಳೆಯುಂ ನಿಶ್ಶೇಷದೋಷಂ ಮೆಱೆಯೆ ತಿಳಿಪಿದಂ ಪ್ರೇಮಕಾಂತಂ ವಸಂತಂ ೪೬
(ಅನಂತನಾಥಪುರಾಣಂ, ೬-೭೪; ಸೂಕ್ತಿ ೧೦-೧೦)

ಕರಿ ಚೂತಂ ವಾಜಿ ಕೀರಂ ಪರಿಜನಮಳಿವೃಂದಂ ಸಿತಚ್ಛತ್ರಮಾ ಪಂ
ಕರುಹಂ ವಾರಾಂಗನಾಳೀಕುಳಿಮಬಿಳಮರಾಳವ್ರಜಂ ದ್ವಾರಪಾಲರ್
ಮರುತ್ಪುಟ್ಟಂ ದಂಡನಾಥಂ ರತಿಪತಿ ಕುಳಿರ್ನಂ ಸೋಗೆಯಾಗಳ್ ವಿರಾಗಾ
ತುರರುತ್ಕರ್ತ್ರೀಕಿನಂ ನಂದನತತಿಗಳೊಳಂ ಬೀಡುಬಿಟ್ಟಂ ವಸಂತಂ ೪೭

ತೆಂಬೆಲರೆಂಬ ಸುಯ್ ನಿನಿರೆ ಮಲ್ಲಿಗೆಯೆಂಬ ಬೆರಲ್ಗಳೊಳ್ ಕರಂ
ತುಂಬಿಗಳೆಂಬ ಕಾಡಿಗೆಯ ಕಂಬನಿ ಪೊಣ್ಮೆ ಬೆಡಂಗುವೆತ್ತ ಮಾ
ವೆಂಬ ಲತಾಗೃಹಕ್ಕೆ ವನಲಕ್ಷ್ಮಿ ವಸಂತಕನಂ ಪಿಕಸ್ವನಾ
ಡಂಬರೆ ತಾನದೇನೆಱಿದು ತಂದಳೊ ಸಪ್ರಣಯಪ್ರಕೋಪದಿಂ ೪೮

ಪೊಸಮುಕರಂದನೆಂಬ ಬೆನುರುಣ್ಮಿರೆ ತೆಂಬೆಲನೆಂಬ ಸುಯ್ಯೆಲರ್
ಪಸರಿಸೆ ಗುಜ್ಜನೆಂಬ ಮೊಲೆ ಚಪ್ಪರಿದೊಪ್ಪೆ ಸಿತಾಬ್ಜವೆಂಬ ಕಣ್
ಮಿಸುಪ ಪರಾಗನೆಂಬ ನಸುಗೆಂಪಿನೊಳೊಂದಿರೆ ನಾಡೆ ಕಣ್ಗೆ ಶೋ
ಭಿಸಿದಳಲಂಪಿನಿಂ ನೆರೆದು ನಂದನಲಕ್ಷ್ಮಿ ವಸಂತಕಾಂತನೊಳ್ ೪೯

ವಿಕಸತ್ಪುಷ್ಪಾಟ್ಟಹಾಸಂ ಸ್ಮಿತಕುಸುಮರಜೋಭಸ್ಮವಿಭ್ರಾಜಿ ಮಾದ್ಯ
ತ್ಪಿಕನಾದಂ ಭೃಂಗಸಿದ್ಧಾಂಜನಂ ರಸಘುಟಿಕಂ ಪಲ್ಲವೋದ್ಯಜ್ಜಟಂ ಕ
ಯ್ಯಕಪಾಲಂ ಚಂದ್ರಬಿಂಬಂ ತನಗೆನೆ ಜಗತೀಚಕ್ರಮಂ ಚೈತ್ರಕಾಪಾ
ಲಿಕನೆಂಬಂ ಬಂದದೇಂ ಮೋಹಿಸಿದನೊ ಮಧುಬಿಂದೂದ್ಧಮದ್ಗಂಧವಾಹಂ ೫೦

(ಲೀಲಾವತಿ, ೯–೧೧೯)

ಮಲಯಮರುಚ್ಚಮೂಪತಿಗಲರ್ಗಳಸೌರಭದಂಗಚಿತ್ರಮಂ
ಕಳಪಿಕನಾಯಕರ್ಗೆ ಪೊಸಮಾಂಗೊನರಂಗದಿ ಸೂಱೆಯಂ ಶುಕಾ
ವಳಿಯಪದಾತಿಗಿತ್ತು ತನಿವಣ್ಗಳ ಪೊಟ್ಟಣಮಂ ವಸಂತನ
ಗ್ಗಳಿಕೆ ಬಂದು ಸಂವರಣೆದೋಱಿ ಮನಂಬಡೆದಂ ಮನೋಜನಂ ೫೧

ಹರನುರಿಗಣ್ಗೆ ನೀಂ ಸೊನೆಯ ಸೋನೆಯನಾಗಿಸು ಚೂತ ಕಂಠದೊಳ್
ಗರಳದ ಕರ್ಪನೊತ್ತಿ ಕಳೆ ಚಂದ್ರನು ಪೂಸಿದ ಬೂದಿ ಪಾಱಿ ಮೈ
ಕರಲಿಡೆ ಬೀಸು ಗಂಧವಹ ಕೆಂದಳಿರೊಂದಲಗಿಂ ಕಪರ್ದಿಯೊಳ್
ಬೆರಸು ಬಱಿಕ್ಕೆ ನೀನೆನುತೆ ನೋಡಿದನಂಗಭವಂ ವಸಂತನಂ ೫೨

(ಅನಂತನಾಥಪುರಾಣಂ, ೬–೮೭; ಸೂಕ್ತಿ, ೧೦–೮೬)

ಅರಗಳಿವಿಂಡು ವಾರನದ ಮೋಹರವಾಱಿಡಿವಿಂಡು ಬಿಲ್ಲಬೀ
ರರ ಪಡೆ ಕೊಂಚೆವಿಂಡು ಪೊಳೆವಡ್ಡಣಮೊಡ್ಡಮಳ್ವಕ್ಕಿವಿಂಡು ಮೆ
ಯ್ವಿರಸುವ ಕೊಂತಗಾಱಿರಣೆಯಾಗಿರೆ ಬಂದು ಬಸಂತರಾಜಸಂ
ವರಣೆಯನೆಯ್ದೆ ತೋಱಿ ತಲೆದೂಗಿಸಿದಂ ನನೆವಿಲ್ಲಬೀರನಾ ೫೩

(ಕಬ್ಬಿಗರಕಾವಂ, ೨೦೧–೪೨)

ಕಳಿಕಾಸಂಜಾತಚೂತಂ ಮುಕುಳಿತವಕುಳಂ ಪಲ್ಲವೋಲ್ಲಾಸಿ ಕಂಕೆ
ಲ್ಲಿಲತಾಂತಾಕ್ರಾಂತವಾಸಂತಿಕವೆಸೆದುದು ಯೋಗಿವ್ರಜಸ್ವಾಂತಕುಂತಂ
ವಿಲಸನ್ಮಲ್ಲೀಲತಾಂತಂ ರಟದಳಿಪಟಲಧ್ವಾಂತವಿಂದುಪ್ರಭಾಸಂ
ಕುಲಭಾಭಾಸ್ವದ್ದಿಗಂತಂ ಜಿತಸಕಲಜಗತ್ಕಂತುಕಾಂತಂ ವಸಂತಂ ೫೪

(ಜಗನ್ನಾಥವಿಜಯಂ, ೧೪-೪೨; ಸೂಕ್ತಿ, ೧೦-೧೩)

ಮೃಗಮದಲೇಪನಂ ಲತೆಯ ಮಂಟಪ ಗೋಷ್ಠನಿವಣ್ಣಪಾನ ಮ
ಲ್ಲಿಗೆಯ ಸರಂಗಳುಂ ಪಿಕಕಳಧ್ವನಿಯುಂ ವನಕೇಳಿ ಜಾಯಪೊಳ್
ಸೊಗಸಿನ ನಿಪ್ರೆ ಗೋದವೆಯ ಭೋಜನ ಚೂತಲತಾಂತವಾತ ಪೆ
ಣ್ಣುಗಳೊಡನಾಟ ಸಣ್ಣ ಪೊದಪಿಂ ಮಧುಮಾಸಪೊಳಿರ್ಕೆ ಭೋಗಿಗಳ್ ೫೫

## ಗ್ರೀಷ್ಮಋತು :

ವನಜಲಕೇಳಿಗಿಂಬುಗುಡುವಂತೆ ಪಗಲ್ ಪಿರಿದಾದುದೊಯ್ಯನೊ
ಯ್ಯನೆ ಕಿಱಿದಾದುದಂದನಿರುಳಾಱಿಸುವಂತಿನನಿಂದಗಲ್ದ ಪ
ದ್ಮಿನಿಯ ನಿರೋಧಮಂ ಶಿಶಿರನಿಂ ಮುಳಿದಿಟ್ಟಪಸವ್ಯಗಂಧವಾ
ಹನ ಕರಚಕ್ರದಂತೆ ಬಡಗಲ್ ನಡೆದತ್ತು ಹಿಮಾಂಶುಮಂಡಳಂ ೫೬

(ಅನಂತನಾಥಪುರಾಣಂ, ೬-೪೯; ಸೂಕ್ತಿ, ೧೦-೪೪)

ಇನಿತಾನುಂ ಮೃಗತೃಷ್ಣೆಯಂ ಪಡೆಯುತುಂ ದಿಗ್ಭಾಗದೊಳ್ ತಳ್ತ ಕಾ
ನನದೊಳ್ ಬೇಗೆಯನಿಕ್ಕುತುಂ ಕದಡುತಂ ನೀರ್ದಾಣಮಾದಂತುಟಂ
ಬಿನದಂ ತಪ್ಪೆಡೆಯೊಳ್ ತೆರಳ್ಚಿ ತೊವಲಂ ತಂದಿಕ್ಕುತುಂ ಬೇಂಟೆಗಾ
ಜನವೋಲ್ ಬೇಸಗೆ ಬಂದು ಪೊಕ್ಕು ಕವಿದತ್ತೆತ್ತಂ ಮಹೀಭಾಗಮಂ ೫೭

(ಸೂಕ್ತಿಸುಧಾರ್ಣವಂ, ೧೦-೪೯)

ಪಾವಸೆಯಾಗಿ ಪೋಯ್ತು ನಗನಿರ್ಝರಣಂ ತೊಱೆಗಳ್ ಪದಘ್ನಮಾ
ಯ್ತಾವಗಮೀಕ್ಷಿಸಲ್ಕೆ ಕೆಸಱಾಯ್ತು ಕೊಳಂ ಕೆಱೆ ಬತ್ತಿಪೋದವಿ
ರ್ಪಾವೆಡೆಯೆಂಬಿನಂ ಬಱತು ಬೀಟೆಯನಾಳ್ದುದು ಜೆಂಚೆ ವೋವೊ ಪೆ
ರ್ಬಾವಿಯೊಳಂತೆದೋಡುವಿಸೆಗಂ ತಳಕೋಡಿದುದಾ ನಿದಾಘದೊಳ್ ೫೮

(ಸೂಕ್ತಿಸುಧಾರ್ಣವಂ, ೧೦-೫೦)

ತನುಪಂಕಾಗ್ರಮುಹುರ್ಲುಠಚ್ಛಫರಮಾಬದ್ಧಾಶ್ಮಸಂಧ್ಯಂತರಾ
ಳನಿವಿಷ್ಟೋರುಕುಳೀರಕಂ ತಳನದೀನಿರ್ಮಗ್ನಕೂರ್ಮಂ ಚಿರಾ
ಭ್ಯನುಸಂಧಾನವಿಲೀನದೀನಮುಖಹಂಸಂ ಮ್ಲಾನಕಲ್ಹಾರಕೋ
ಕನದಂ ಕಣ್ಗೆನಿದಾಯ್ತು ತತ್ಸಮಯದೊಳ್ ಶುಷ್ಯತ್ಸರಸ್ಸಂಕುಳಂ ೫೯

(ಚಂದ್ರಪ್ರಭಪುರಾಣಂ, ೯-೮೨; ಸೂಕ್ತಿ, ೧-೯೧)

ಬೆಟ್ಟದಕಲ್ಲಸಂದಿಯೊಳಗೊಯ್ಯನೆ ಪೊಣ್ಮುವ ನಿರ್ಝರಕ್ಕೆ ಕೈ
ಯಿಟ್ಟು ಪಿಪಾಸೆಯಿಂದಲರೆಮೀಳಿತಲೋಚನನಾದ ದಂತಿಯಂ
ತೊಟ್ಟನೆ ಮುಟ್ಟಿ ಕಂಡದಱ ಮೈನೆೞಲಾಸೆಗೆ ಜಾತಿವೈರಮಂ
ಬಿಟ್ಟೊಳಪೊಕ್ಕು ಪಟ್ಟಿತು ಬಿಸಿಲ್ಗಗಿದೊಂದು ಗಜಾರಿ ಬಿಚ್ಚತಂ ೬೦

(ಸೂಕ್ತಿಸುಧಾರ್ಣವಂ, ೧೦-೯೨)

ಬಟ್ಟೆಯ ಪಳ್ಳದೊಳ್ ಪಲೆವೊಜಂತೆಗಳಾದುವು ಕಾಡೊಳಿಟ್ಟ ಕಾ
ಲ್ವಟ್ಟೆಗಳಿಲ್ಲಮೆಯ್ಪ್ವರವು ನೀರ್ನೆಲೆಯಂ ಪೞಿತವಾೞಬಾವಿಯೊಳ್
ಪುಟ್ಟದ ಸೊಪ್ಪು ಪೇೞ್ದುದು ಜಲೋದಯಲೋಭಮನೆತ್ತಿ ಪೊತ್ತು ಡೋ
ಣಿಟ್ಟು ದನಕ್ಕೆ ನೀಱೆತವ ಸಂಭ್ರಮಮುಣ್ಮಿದುದೂರ ಪಕ್ಕದೊಳ್ ೬೧

(ಸೂಕ್ತಿಸುಧಾರ್ಣವಂ, ೧೦-೯೩)

ಕಾನನಮುರಿದುದು ರವಿಕಾಂ
ತಾನಳನಿಂ ನಗದ ಶಿಖರವೊಡೆದುದು ಸಿಡಿಲ್ದ
ತ್ತಾನೆಯ ತಲೆ ಬಿರಿದುದು ಮು
ಕ್ತಾನೀಕಂ ತೋಱೆತ ಬೆಟ್ಟಬೇಸಗೆ ಬಿಸಿಲೊಳ್ ೬೨

(ಸೂಕ್ತಿಸುಧಾರ್ಣವಂ, ೧೦-೯೪)

ಬಿರಿಯದ ಬೆಟ್ಟಮಿಲ್ಲ ಮೞಲಾಗದ ಪೆರ್ದೊಱೆತಯಿಲ್ಲ ಬೆಂದೊಗಲ್
ಪೊರೆವೊರೆಯೆರ್ದು ಸಾಯದ ಮೃಗವ್ರಜಮಿಲ್ಲ ಬಿದಿರ್ ತಗುಳ್ದು ಮಾ
ಱತೂರಸದ ಕಿಚ್ಚಿನಿಂದಡಸಿ ಬೇಯದ ಕಾನನಮಿಲ್ಲ ತೃಷ್ಣೆಯಿಂ
ಮರುಳವ ಪಾಂಥರಿಲ್ಲ ವಿಷಮಾರ್ಕ ಕರೌಘದೊಳಾ ನಿದಾಘದೊಳ್ ೬೩

(ಸೂಕ್ತಿ ಸುಧಾರ್ಣವಂ, ೧೦-೯೫)

ವಿಸರದ್ದಾವಾಗ್ನಿಜಿಹ್ವಾಕಬಳಿತಲತಿಕಾನೋಕಹಶ್ರೇಣಿ ನಿರ್ನೀ
ರಸರಸ್ಸಂತಪ್ತಪಂಕಾಕುಲಿತಕಮಠಪಾಠೀನಸಂತಾನಮುತ್ಯುಗ್ರ
ಸಮೀರಾಘಾತಜಾತಸ್ಫುರದವನಿರಜಃಸ್ಪರ್ಶದುರ್ದರ್ಶಮುರ್ವೀ
ರಸಪಾನೋತ್ತಾನಭಾನುದ್ಯುತಿಯೆನಲೆಸೆದತ್ತುಸ್ತಮೋಘಂ ನಿದಾಘಂ ೬೪

(ಸೂಕ್ತಿಸುಧಾರ್ಣವಂ,೧೦-೯೬)

ಸುರರಾಜಂ ಬಱಿಯಟ್ಟೆಲಾತುರಿಸುವಂ ಮೇಘಕ್ಕೆ ಕಾಯ್ದುಕ್ಕಿ ಸಾ
ಗರದಿಂ ಪೋಗಲೊಡರ್ಚುವಂ ವರುಣನುಗ್ರಂ ವ್ಯಗ್ರನಾತ್ಮೀಯ ಭೂ
ಧರದಿಂದಂ ಹಿಮವನ್ನಗಕ್ಕೆಳಸುವಂ ಪಿಂಗಂ ತಟಿಚ್ಛಾಯೆಯಿಂ
ಹರಿಣಾಂಕಂ ಭುವನಕ್ಕದೇಂ ಭಯದಮಾಯ್ತೋ ಘೋರಘರ್ಮಾಗಮಂ ೬೫

(ಸೂಕ್ತಿಸುಧಾರ್ಣವಂ,೧೦-೯೭)

ನಟ್ಟನಡುವಗಲ ಬಿಸಿಲುರಿ
ಯಿಟ್ಟೊಡೆ ಸುಟ್ಟಪ್ಪುದೆಂಬವೋಲ್ ಪಸರಿಪುದಂ
ಬಿಟ್ಟುಡುಗಿಯೊಂದೆ ಮೆಯ್ಯಂ
ಮೆಟ್ಟಿರ್ಪವೊಲಿರ್ಪುವಂದು ತಾಟಿ ನೆೞಲ್ಗಳ್ ೬೬

(ಸೂಕ್ತಿಸುಧಾರ್ಣವಂ,೧೦-೯೯)

ಪಾಱುವ ಪಕ್ಕಿ ಕೋಡ ಗಱಿ ಸೀಯದವಿಲ್ಲೆಲೆಯಿರ್ದ ಪೆರ್ಮರಂ
ತಾಱದವಿಲ್ಲರಣ್ಯಮೃಗಯೂಥದ ಜೆರ್ ಪುಣಿಚೆರ್ದು ಬಾಯ್ಗಳಿ
ರ್ಪಾಱದವಿಲ್ಲ ಬಿಱಿತ್ತೊಡೆದು ಪಾಱದವಿಲ್ಲ ಪಯೋಧಿ ತಾಯ್ಮಟಿಲ್
ತೋಱದವಿಲ್ಲದೇಂ ಪ್ರಳಯಕಾಲಮೊ ತೀವ್ರ ನಿದಾಘಕಾಲಮೋ ೬೭

(ಸೂಕ್ತಿಸುಧಾರ್ಣವಂ,೧೦-೧೦೦)

ಕುಲಗಿರಿ ಕಾಯ್ದು ಕರ್ಬುನದ ಬೆಟ್ಟುವೊಲಿರ್ದುವು ಧಾತ್ರಿ ಕಾದ ಕಾ
ವಲಿಯವೊಲಿರ್ದುದಂಬುನಿಧಿ [೧]ದಿಬ್ಬಕೆ[೧] ಕಾಸಿದ ತೈಲದಂದದಿಂ
[೨]ಚಿಲಿಚಿಟನುಕುರ್[೨]ತಿರ್ದುವು ದಿಶಾವಿವರಂ ಸಲೆ ಕಾಜುಗಾರನ
ಟ್ಟೊಲೆಯವೊಲಿರ್ದುವೇಂ ಪ್ರಳಯಕಾಲಮೊ ತೀವ್ರನಿದಾಘಕಾಲಮೋ ೬೮

(ಸೂಕ್ತಿಸುಧಾರ್ಣವಂ,೧೦-೧೦೧)

ಒಲೆಗಲ್ಪೋಲ್ ಕಾಯ್ದುವೆಂಟುಂದಿಗಿಭದ ಬಿದುಗಳ್ ಕಾಯ್ದು ಕರ್ಬೊನ್ನ ಪೆರ್ಗಾ
ವಲಿವೋಲಾಯ್ತಾ ನೆಲಂ ಸಂಪಳೆಯನೆಱೆದವೋಲ್ ಕಾಯ್ದು ಚುಯ್ಯೆಂದವೇೞುಂ
ಕುಲಪಾರಾವಾರಮೀ ಜೇಸಗೆಯ ಬಿಸಿಲೊಳೇನಿಂತಿದೇಕಾರ್ಣವಂ ಭೂ
ತಲಮಕ್ಕುಂ ಪೇೞೆನಲ್ ಪರ್ವಿದುದತಿಶಯಿತಗ್ಲಾನಿದಾಘಂ ನಿದಾಘಂ ೬೯

(ಜಗನ್ನಾಥವಿಜಯಂ,೧೭-೭೩;ಸೂಕ್ತಿ,೧೦-೧೦೨)

---

[೧]ದಿಬ್ಬೆಗೆ(ಸೂ) [೨]ತಲೆಬಳೆದುಕ್ಕು(ಸೂ)

ರಸದಾಳಿಂಬದ ಪಣ್ಣ ಬಿತ್ತು ಬಿರುಕಿಂ ತೋರ್ಪಂತೆಯುರ್ಬೆಟ್ಟಿ ಪೆ
ರ್ಬಿಸಿಲಿಂದಿರ್ಬಗಿಯಾದ ಮಸ್ತಕದೊಳಾ ಸದ್ರಕ್ತಮುಕ್ತಾಳಿಗಳ್
ನಸುದೋಱುತ್ತಿರೆ ನೆಮ್ಮಿ ಪೆರ್ಮರನನೊಂದಂ ಕಣ್ಗಳಂ ಮುಚ್ಚಿ ಮೂ
ರ್ಛಿಸಿದಂತಿರ್ದುದು ದಂತವೇಷ್ಟಿತಕರಂ ಮತ್ತೊಂದು ಮತ್ತದ್ವಿಪಂ ೬೦

(ಸೂಕ್ತಿಸುಧಾರ್ಣವಂ, ೧೦-೧೦೩)

ಅಱಿಯದರವಿಂದದಲರಂ
ಪಱಿದುದ ನೆವಮಿಟ್ಟು ಸುಟ್ಟಪಂ ರವಿಯೆನುತಂ
ಮಱುಗಿ ಮೊಱೆಯಿಡುವ ತೆಱದಿಂ
ಮುಱಿದೆತ್ತಿದುದಗ್ರಕರದಿನಿಭವೆಳದಳಿರಂ ೬೧

(ಸೂಕ್ತಿಸುಧಾರ್ಣವಂ, ೧೦-೧೦೬)

ಹುತ್ತಿನೊಳುಬ್ಬೆಗೊಂಡು ಪೊಱಮಟ್ಟು ಪಗಲ್ ಬಿಸಿಲಟ್ಟಿ ಕೆಂಡಮಂ
ಪತ್ತಿಸಿದಂತೆ ಕಾಯ್ವ ಮಣಿಯಿಂ ಪೆಡೆ ಬೇಯೆ ಪೊದಟ್ಟಿ ದೂವೆಯೊಳ್
ಪೊತ್ತಿದ ಧೂಳಿವಟ್ಟೆಯೊಳುರಂ ಪುಗುಳೇೞ ಪೊರಳ್ದು ಪೋಗಿ ಪೊ
ಕ್ಕಿತ್ತಗಿದೊಂದು ಪಾಟಿ ಪಟಿವಾರಿಯ ನೀರ್ದೆಗೆದಿರ್ದ ಬೀಡೆಯಂ ೬೨

(ಸೂಕ್ತಿಸುಧಾರ್ಣವಂ, ೧೦-೧೨೨)

ಭಾನುಕರೋಷ್ಣದಿಂ [1]ಸಿಡಿದು[1] ಕೊಂಬು ಶಿರಂ ಬಿರಿಕೇೞ ತೋರ್ಕೆಪೆ
ತ್ತಾನನದೊ[2]ಡ್ಡು[2] ಬಲ್ಪಿೞಿಯೆ ಜೆಂಗಡಿಪಂ ಕಿಱುವೀಡೆವೀೞ ನ
ಟ್ಟಾನಿಸಿದಂತೆ ಕಾಲ್ಗಳಿರೆ ಕಾ[3]ಡೞಿದೇವರ[3] ನೋಂಪಿಗಿಟ್ಟ ಮ
ಣ್ಣಾನೆಯ ಮಾೞ್ಕೆಯಿಂ ಮಿಡುಕದಿರ್ದುದು ದಂತಿ ನಿದಾಘಕಾಲದೊಳ್ ೬೩

(ಸೂಕ್ತಿಸುಧಾರ್ಣವಂ, ೧೦-೧೦೮)

ಅಡಿಯೊತ್ತುವ ಬೇಸಗೆಯೊಳ್
ಪೆಡೆವಣಿ ಬಿಡೆಕಾಯ್ದು ನೆತ್ತಿ ಛಿಟಛಿಟಿಲೆನುತಂ
ನಡೆಗೊಳ್ಳಿಯಂತೆ ನಡೆದುದು
ಗಿಡುಗಳ ನೆೞಲಾಸೆಗಹಿಪ [4]ಸುಡಲೊಡಲಸುವಿಂ[4] ೬೪

(ಸೂಕ್ತಿಸುಧಾರ್ಣವಂ, ೧೦-೧೧೦)

---

[1]ದೊಡೆದು(ಸೂ) [2]ಳ್ಪು(ಸೂ) [3]ಡೆಳದೇವತೆ(ಸ) [4]ನಸುವಿಡುತುಸಿರಂ(ಸೂ)

ನೆತ್ತಿಯೊಳಾವಗಂ ತಳೆದ ಬಾಂದೊಱೆ *ಮಾಣದೆ ಭಾಳ*ಚೂಳದೊಳ್
ಪತ್ತಿಸಿದಾ ಹಿಮಾಂಶುಕಲೆಯುಪ್ಪಿದ ಹೈಮವತೀಲತಾಂಗಮೊ
ಪ್ಪುತ್ತಿರೆಯುಂ ಪೊದಟ್ಟಿರಿವ ಬೇಸಗೆಯೊಳ್ ನೆಱೆಬೆಚ್ಚಿ ರೌಪ್ಯಭೂ
ಭೃತ್ತಟಸಂದನಾವಳಿಯ ತ+ಣ್ಣೆಟಿ+ಲಂ ಬಿಡನೊರ್ವೆಯುಂ ಮೃಡಂ ೭೫
(ಚಂದ್ರಪ್ರಭಪುರಾಣಂ, ೯-೮೧; ಸೂಕ್ತಿಸುಧಾರ್ಣವಂ, ೧೦-೧೧೪)

ಹಿಮಕರನಂ ತುಱುಂಬಿ ಹಿಮವಾರಿಯ ಗಂಗೆಯನಿಟ್ಟು ಜೂಟದೊಳ್
ಹಿಮಗಿರಿಪುತ್ರಿಯಂ ಮುದದಿನಪ್ಪಿ ಹಿಮಾಂಗದ ನಾಗಮಂಡನಾ
ಘಮನೊಸೆದಾಂತು ತಾಪಹರನೊಪ್ಪಿದನೀಶನುದರ್ಕದರ್ಶಿಮು
ನ್ನಮೆ ಸಮಕಟ್ಟಿ ನಿಂದನೆನೆ ಬೇಸಗೆ ಬೇಸಱಿಸಿತ್ತು ಲೋಕಮಂ ೭೬
(ಜಗನ್ನಾಥವಿಜಯಂ, ೧೦-೭೭, ಸೂಕ್ತಿಸುಧಾರ್ಣವಂ, ೧೦-೧೧೪)

ಗಂಟಲುವಂಬರಂ ಬಱಿತು ಗೋಣೆಬಿಲಲ್ ಕಡುಸೇಡೆಯಿಂದೆ ಪ್ಕೆ
ಟೆಂಟಣಿಸುತ್ತೆ ಕೋಡ ಗಱಿ ಸೀದು ಮುರುಂಟೆ ವಿಹಂಗಸಂಕುಲಂ
ಗೆಂಟಱೆಗೂಳೊಂದಿ ತಾರೆಯ ಮರಂಗಳ ತೂಱಲುಗೊಂಬುಗೊಂಬಿನೊಳ್
ಸುಂಟಗೆಗೋದ ಮಾಟಿಕ್ಕೆಯವೊಲಿರ್ದುವು ತೀವ್ರ ನಿದಾಘಕಾಲದೊಳ್ ೭೭
(ಸೂಕ್ತಿಸುಧಾರ್ಣವಂ, ೧೦-೧೦೯)

ಜಲನಿಧಿತಲ್ಪನುಂ ಜಲರುಹೋದರನುಂ ಜಲಜಾತನೇತ್ರನುಂ
ಜಲಧಿಸುತೇಶನುಂ ಜಲದವರ್ಣನುಮೆಂಬುದನೀ ನಿದಾಘಮುಂ
ಕಳೆಯಲೆ ಪಣ್ಣಿಕೊಂಡನಸುರಾರಿಯೊಲಾವನನಾಗತಜ್ಞನೆಂ
ದಿಳೆ ನುಡಿವಂತು ಪೆರ್ಚಿಸಿಲನುರ್ಚಿಸಿತುರ್ಚಿ ನಿದಾಘಮುರ್ಚಿಯೊಳ್ ೭೮
(ಜಗನ್ನಾಥವಿಜಯಂ, ೧೭-೭೬; ಸೂಕ್ತಿ, ೧೦-೧೧೬)

ಬಹುತಾಪಕ್ಕೆ ಬಿಗುರ್ತು ವಿಷ್ಣು ಪಡೆದಂ ಮತ್ಸ್ಯಾವತಾರಕ್ಕೆನಂ
ತುಹಿನಾದ್ರೀಂದ್ರಮನೊತ್ತಗೊಂಡು ನಡೆವಂ ದೇವರ್ಕಳಾಗ್ನೇಯಮೆಂ
ದು ಹಪಿಭಾಗಮನೊಲ್ಲದಿಂದುಕಳೆಯಂ ಕೊಳ್ವರ್ ಮೃಡಂ ಪಾರ್ವತೀ
ಸ್ಪೃಹೆಯಂ ಬಿಟ್ಟು ಮರುತ್ತರಂಗಿಣಿಯನಂದಾಲಿಂಗನಂ ಮಾಡುವಂ ೭೯
(ಪಂಪರಾಮಾಯಣಂ, ೭-೯೮; ಸೂಕ್ತಿ, ೧೦-೧೨೧)

---

*ಬಾಳವಿಮೂಳ(ಸ) +ಣ್ಬುಟಿ(ಅ)

ಸ್ಮರರಾಗಕ್ಕಂತರಾಯಂ ಜಲನಿಧಿಗೆರ್ದೆಗಿಚ್ಚೀಕ್ಷಣಕ್ಕಂಕುಶಂ ಪು
ಲ್ಲುರಿ ದಿಗ್ಜಾಲಕ್ಕೆ ಶೈಲಕ್ಕಶನಿ ಕರಗಸಂ ಹಸ್ತಿಮಸ್ತಕ್ಕೆ ಪಾಂಥ
ಗೆರ್ರಿಯುಯ್ಯಲ್ ತಾರುಗುತ್ತಂ ತರುಗೆ ತಪನ[೧]ಕೋಚೀ[೧]ಸಮೂಹಕ್ಕೆ ದಾಹ
ಜ್ವರಮುತ್ಕ್ಯದ್ಧಾಮಭೀಮಾತಪ[೨]ಮೆನಲುರಿದತ್ತ[೨]ಂದಿಳ[೩]ೌಘಂ ನಿದಾಘಂ ೮೦
(ಸೂಕ್ತಿಸುಧಾರ್ಣವಂ, ೧೦-೧೨೬)

ಬೇಸಗೆಯ ಬಿಸಿಲಿನೊಳ್ ಕೈ
ಲಾಸನಗಂ ನೆಱೆಯೆ ಕರಗಿ ಕಣ್ಣಿಟ್ಟು ಕರಂ
ಸೂಸಿ ಪರಿದಪ್ಪುದು ದೆಸೆಗೆ[೩]ನ
ಲಾ[೩]ಸುರಮಾಗಿರ್ದುದೊಗೆದ ಮೃಗತೃಷ್ಣಿಕೆಗಳ್ ೮೧
(ಚಂದ್ರಪ್ರಭಪುರಾಣಂ, ೯-೭೧; ಸೂಕ್ತಿ, ೧೦-೧೩೨)

ಒದವಿದ ಬೆಟ್ಟಬೇಸಗೆಯ ಪೆರ್ಬಿಸಿಲರ್ಬಿಸೆ ಬೆಚ್ಚಿ ವಾಯುವೇ
ಗದಿ ಹರಿಣಂ ಸಮುತ್ಸಕದಿನಿಂದುವಬಿಂಬವನೋಡಿ ಪೊಕ್ಕು ಮ
ಧ್ಯದೊಳೊಸಱುತ್ತಮಿರ್ಪ ಸುಧೆಗಂ ಕುಳಿರ್ವಾಲನೆಟಿಲ್ಗಮಲ್ಲಿ ಪೋ
ಗದೆ ನೆಲಸಿರ್ದುದಲ್ಲದೊಡದೆಲ್ಲಿಯದೇಣಶಶಾಂಕಸಂಗಮಂ ೮೨
(ಚಂದ್ರಪ್ರಭಪುರಾಣಂ, ೯-೭೬; ಸೂಕ್ತಿ, ೧೦-೧೩೬)

ಸರಸೀಜಾತಸಖಂ ಸಹಸ್ರಕರದಿಂ ಸರ್ವೋರ್ವಿಯೊಳ್ ಕೆಂಡಮಂ
ಪರಪುತ್ತಿರ್ದನೊ ಮೇಣ್ ದವಾನಲಶಿಖಾಸಂತಾನಮಿಂತೀಗಳು
ರ್ವರೆಯೊಳ್ ಮೂರ್ತಿಯನಾಂತು ನಿಂದುದೊ ದಿಟಂ ಪೇಱೆಂಬಿನಂ ಕಾಯ್ಪು ನಿ
ರ್ಭರದಿಂ ಕೈಮಿಗಲಂದು ಬಂದುದು ನಿದಾಘಂ ಮಾಘಸಂಹಾರಕಂ ೮೩

ಖರಕರತಾಪದಿಂದವನಿ ಹೆಚ್ಚಳಿಸಿತ್ತಖಿಳಾದ್ರಿಗಳ್ ಭಯಂ
ಕರಮೆನೆ ಕಾವ ಕಬ್ಬುನಮವ್ಪೋಲ್ ಮಿಡಿದತ್ತು ವನೋಹಕವ್ರಜಂ
ಮುರುಟಿದುದಧ್ವಗರ್ ಮಿಡುಕಿ ಕಿಚ್ಚಿನಕ್ರೀಡೆಯೊಲಾದರಾ ದಿಶಾಂ
ತರವನಲಾಶಿಯಾದವೆನಲೇವೊಗಟಿತ್ತಂ ಕಡುಪಿಂ ನಿದಾಘಮಂ ೮೪

ವನಮೃಗರಾಜಿಗಳ್ ತೃಷೆಯ ಕೋಟಲೆಯಿಂ ವನಮಂ ತೊಱೆ
ಲ್ದಿನ ಕಿರಣಂಗಳಿಂ ಕೆಡೆದು ಜೀಷ್ಟಿಸೆ ಕಂಡು ಮರೀಚಿಕಾಜಲ
ಕ್ಕನುನಯದಿಂ ಪರಂಪರಿದು ಲಂಘಿಸುತುಂ ನೆಗೆ ಮೆಯ್ಯ ತಾಪುತ
ಟ್ಟೈಸಲಸುವಿಂದಗಲ್ದುದಿನಿತಿಲ್ಲ ದುರಾಸೆಯೊಳಾರೊ ಬೀಱಿದರ್ ೮೫

---

೧ರಾಜೀ(ಸೂ) ೨ತಪನಕರಂ ಪ್ಪಾಂ(ಸ) ೩ನೆಮಾ(ಸೂ)

ಪೊಸಬಿಸಿಲಕುದುರೆಯೇಱುತೆ
ವಸುಧೆಯೊಳಂ ಧಾಳಿಮಾಡೆ ಬೇಸಗೆರಾಯಂ
ಮಿಸುಪ ಖುರಪುಟದ ಧೂಳಿನ
ಲೆಸಗಿತು ರಜತಪ್ರದಾನಮಾ ಬೇಸಗೆಯೊಳ್ ೮೬

ಮೊಗಸಿ ವನವಹ್ನಿ ಮನಮಂ
ಮಿಗೆ ತದ್ವನಜೀವಜಾಲಮಂ ಸುಡುವೆಡೆಯೊಳ್
ಮೃಗಮೊಂದು ಶಶಕನೊಂದುಂ
ನಗಮೊಂದುಂ ವಿಧುವ ಸೇರಿ ಬದುಕಿದುವಾಗಳ್ ೮೭

ರವಿರೋಚಿಸ್ಫುರದುಷ್ಣಮುರ್ವಿಯಜನಂ ನೀರಾಟ್ಟಿನಂ ದಿಗ್ಗಜಂ
ತವೆ ಕಾಲ್ಗೆಟ್ಟಿರುತಿರ್ಪಿನಂ ಧರತಳಂ ಕೆಂಪಪ್ಪಿನಂ ಗೈದನೂ
ರುವನಾವಾಜಿಯನೇಱಿ ಬಪ್ಪ ರಥಮುಂ ಕಾದತ್ತದಂತಲ್ಲದೇಂ
ಭುವಿಯೊಳ್ ಶ್ರೀಪ್ರಭುಕೋಪಮೆಂಬುದನಿಶಂ ಸಾರ್ದಿರ್ದರೇಂಗೆಯ್ಯರೋ (?) ೮೮

ಕಾಯ್ದುದು ನೆಲನನಿತೆಲ್ಲಂ
ಸುಯ್ದುದು ಪಥಿಕಪ್ರತಾನಮಾ ವಿರಹಿಜನಂ
ಬೈದುದು ವಿಧಿಯಂ ಮೀಂಗಳ್
ತೊಯ್ದರೆಗೆಸಱಲ್ಲಿ ಪೊರಳುತಿರ್ದುವು ನೋಡಲ್ ೮೯

ದೋಷಿಯನು ಪೆರ್ಚಲೀಯದೆ
ಪೊಷಕರಂ ಪೆರ್ಚಿಸುತ್ತೆ ಪರಜೀವನಮಂ
ಶೋಷಿಸಿರಾ ಜಲದಿಂದಂ
ಭಾಷಿಸಲೇಂ ಗ್ರೀಷ್ಮಧರ್ಮರಾಜಂ ಮೆಱೆದಂ ೯೦

ಉಸಿರಿಂದೂದಿದ ಕೆಂಡಮ
ನಸಿಗೆಯ್ಯದೆ ಕಡಿದು ಕಾಷ್ಠವಿಡಿದರ್ಕೋಪಲ
ವಿಸರದುರಿ ಮಸಗಿತಾಹಾ
ಪೊಸಬೇಸಗೆಯೆನಿಸುವಿಂದ್ರಜಾಲಕನಿಂದಂ ೯೧

ಅಹಿಕಮಲಂ ದಹಿಕಮಲಂ
ದಹಿಕಮಲಂ ದಹ್ಯಕಮಲಮಾದುದು ಚಿತ್ರಂ
ಬಹುಕುಮುದಂ ಬಹುಕುಮುದಂ
ಬಹುಕುಮುದಮುದಾಯ್ತು ನೋಱಿತ್ತೊಡಾ ಬೇಸಗೆಯೊಳ್ ೯೨

ಸುರಸಾಪಾಂಶುವಿರಾಜಿತಂ ಗುರುಶುಚಿಸ್ಥಾನಂ ಸುದೇಶಂಬೊಲು
ದ್ಧರಗೋಪಂ ಕಮಲಾಯುತಂ ಕವಿಪದಂ ಭೀತಾಪಕಾರಾಸ್ಪದಂ
ವಿರಸಂಬೋಲಾ ಜಗಮಾನಸಾಮರಚಿತಂ ಲೋಕಾರ್ಥಸಾರಪ್ರದಂ
ವರಮಂತ್ರೀಶನವೋಲ್ ನಿದಾಘಸಮಯಂ ಸ್ವರ್ಗಾಪಮಾನಾಪಹಂ (?) ೯೩

ದೆಸೆಯಂ ಕಾಯ್ಪೇಱುಸುತ್ತುಂ ತೃಣಕುಲಲತೆಯಂ ಸೀದು ಕರ್ಪೇಱುಸುತ್ತುಂ
ರಸೆಯಂ ಸಂತಾಪಿಸುತ್ತುಂ ಜಳಭರಿತತಟಾಂಕಗಳಂ ಶೋಷಿಸುತ್ತಂ
ಸಸಿಯಂ ವೃಕ್ಷಾಳಿಯಂ ಸುಟ್ಟುರಿಪುತೆ ಮೃಗಮಂ ಬೇಯಿಸುತ್ತದ್ರಿಯಂ ದ
ಳ್ಳಿಸಿ ಸೀಳುತ್ತಂ ವಿಶಾಳಂ ದವಶಿಖಿಯವೊಲೆಟ್ಟಿತ್ತಮೋಘಂ ನಿದಾಘಂ ೯೪

(ಗಿರಿಜಾಕಲ್ಯಾಣಂ, ೯-೧೭)

ಪೊಸಬೇಸಗೆಯೊಳ್ ಮೃಗತತಿ
ಯುಸುಮೆರಸಿರವೇೞ್ಕುಮೆಂದು ಕರುಣಿಸಿ ಮಿತ್ರಂ
ಬಿಸಿಲಂ ಹಿಂಡಲ್ ಬೆನ್ನೀ
ರೊಸರ್ವಂತಿರ್ದುದು ಮರೀಚಿಕಾಜಲಮೆತ್ತಂ ೯೫

(ಗಿರಿಜಾಕಲ್ಯಾಣಂ, ೯-೧೮)

ತರದಿಂದಂ ತೆರೆಮುಸಗುವ
ಮರೀಚಿಕಾಜಲಮನಿಳೆಯಜಲಮೆಂದು ಕರಂ
ಹರಿಣಂಗಳ್ ಪರಿತಂದಾ
ತುರಿಸುತ್ತಂ ಬಿಸಿಲಬಯಲನೀಂಟಿ ಬೞಲ್ಗುಂ ೯೬

(ಗಿರಿಜಾಕಲ್ಯಾಣಂ, ೯-೧೯)

ವಹ್ನಿ ಧರೆಯೊಳಗೆ ತೀವಿರೆ
ಚಿಹ್ನಮಿದೆಂಬಂತೆ ಬಿಸಿಲ ಬೇಗೆ ಕರಂ ಮ
ಧ್ಯಾಹ್ನದೊಳಳುರ್ದೊಡೆ ಮೃಗತತಿ
ಜಾಹ್ನವಿಯೊಳ್ ಪುಗಲೆ ಬಯಸಿದುವು ಬೇಸಗೆಯೊಳ್ ೯೭

(ಗಿರಿಜಾಕಲ್ಯಾಣಂ, ೯-೨೦)

ಘರಿಘರಿಲೆಂದು ಸೀದುವು ವಿಹಂಗಕುಲಂ ಕೆಱೆ ಬಾವಿ ಬೆಂಚೆಗಳ್
ಪುರಿವರಳೆಬ್ಬಿದುವೀ ಮನುಜರಾತಪತಾಪಮೊಳಳ್ಕಿ ಬೞಲ್ಕಿದರ್
ಕರಿಮುರಿವೋಯ್ತರಣ್ಯಮುಱಿ ಬೆಂದು ಮೃಗಾವಳಿ ಪೊಂದಿದತ್ತು ನಿಂ
ದುರಿದುವು ಬೆಟ್ಟಮಿಂಗಿದುವು ವಾರಿಧಿ ಕಾಯ್ದುದು ಭೂರಿ ಭೂತಳಂ ೯೮

(ಗಿರಿಜಾಕಲ್ಯಾಣಂ, ೯-೨೧)

ಮೃಗಶಿಶುಗಳ್ ಕರಿಮುರಿ ಕ
ಣ್ಗೊಗೆವ ಮರಂ ಘುರಿಘುರಿಲ್ ಗಜಂ ಚಿಮಿಚಿಮಿಯಿಂ
ದಗನಿಕರಂ ಛಿಳಿಛಿಟಿಲೆನೆ
ಮಿಗೆ ಸೀದವು ಬೆಂದುಮುರಿದುವೊಡೆದುವು ಬಿಸಿಲೊಳ್ ೯೯

(ಗಿರಿಜಾಕಲ್ಯಾಣಂ, ೯–೨೨)

ಮರದಡಿಯೊಳ್ ಕಾನನದೊಳ್
ಗಿರಿತಟದೊಳ್ ಬಟ್ಟಬಯಲಂಬರತಳದೊಳ್
ಕರಿಯ ಬಸಿಲುರಿಯ ಬಿಸಿಲ
ಚ್ಚರಿಯ ಬಿಸಿಲ್ ಸಿರಿಯ ಬಿಸಿಲಖಂಡಿತದ ಬಿಸಿಲ್ ೧೦೦

(ಗಿರಿಜಾಕಲ್ಯಾಣಂ, ೯–೨೩)

ನಡೆಯಲ್ಕೊಂದಡಿಯಿಟ್ಟು ಕಾಯ್ದು ನೆಲನಂ ಕಾಲ್ಸುಟ್ಟೆ ಚುಯ್ಯೆಂದು ಬೆಂ
ದೊಡೆ ಮತ್ತೊಂದಡಿಯೆತ್ತಲಾಱದಟಲಿಂ ಕಣ್ಮುಚ್ಚಿ ಹಸ್ತಾಗ್ರಮಂ
ಕಡೆವಾಯೊಳ್ ಸೆಱೆಯಿಟ್ಟು ನೆತ್ತಿ ಬಿರಿಯುತ್ತುಂ ಮುತ್ತುಗಳ್ ಸುತ್ತಲುಂ
ಸಿಡಿಯುತ್ತಿರ್ಪಿನಮಿರ್ದುದೊಂದತಿಮದೇಭಂ ಭೀಷ್ಮದೊಳ್ ಗ್ರೀಷ್ಮದೊಳ್ ೧೦೧

(ಗಿರಿಜಾಕಲ್ಯಾಣಂ, ೯–೨೪)

ಎಲೆಲೆಲೆ ನೋಡುನೋಡು ಕೆಲನುಂ ಬಲನುಂ ನೆಲನುಂ ದವಾಗ್ನಿ ಸು
ಟ್ಟೊಲೆಯುವೊಲಾಗೆ ಮೆಟ್ಟಿದಡಿಯೆತ್ತಿದ ಕಾಲುಱೆ ಸೀಯ್ಯೆ ನಿಂದಿರಲ್
ಚಲಿಯಿಸಲಾಱದಾತಪದೆ ಹಸ್ತಮನೆತ್ತಿಯೊಳಿಟ್ಟು ಘೀಳಿಡು
ತ್ತೊಲೆದುಮ ಚೇಷ್ಟೆಗುಂದಿದುದು ಜೋಲ್ದುದು ಬೀಳ್ದುದು ಬೆಂದುದೊಂದಿಭಂ ೧೦೨

(ಗಿರಿಜಾಕಲ್ಯಾಣಂ, ೯–೨೫)

ಜಳಜಸಖನನಿಲಸಖನೆಂ
ದಿಳೆಯೊಳ್ ರಸವೆಸರನಾನದಿರ್ದೊಡೆ ಸೂರ್ಯಾ
ನಳರಿಂತು ಸಂತಮಿರ್ಪರೆ
ಘಳಿಲೆನೆ ನಿಂದುರಿದುಹೋಗರೇ ಬೇಸಗೆಯೊಳ್ ೧೦೩

(ಗಿರಿಜಾಕಲ್ಯಾಣಂ, ೯–೨೬)

ಪಸಿವಿಂ ದಾವಾನಳಂ ಸುಟ್ಟುರಿಪೆ ತರುಗಿರಿವ್ರಾತಮಿಲ್ಲಾದುದೋ ನಾ
ಲ್ದೆಸೆಯೊಳ್ ಸೂರ್ಯಂ ಕ್ಷುಧಾಪೀಡಿತನಱಿಸುತೆ ಕೆಯ್ನೀಡೆ ನಿಸ್ಸಾರಕಾಷ್ಠ
ಪ್ರಸರಂ ಕೌಱ್ತಬ್ದುದೋ ನಿಂದನುಪಮತೃಷಿತಂ ವಾಡಬಂ ಪೀಱ್ತ ತಾಂ ಶೋ
ಷಿಸಿತೋ ವಾರಾಶಿಯೆಂಬುಷ್ಣಮನೊದವಿಸಿತತ್ಯುಗ್ರಯೋಗಂ ನಿದಾಘಂ ೧೦೪
(ಗಿರಿಜಾಕಲ್ಯಾಣಂ, ೯-೨೮)

ಪೊಸತೊಂದಾದತ್ತೆನಲ್ ಕಾರಿರುಳೆನೆ ಶಿಖಿಗಳ್ ಸಂಜೆಯುಂ ನಿಸ್ಫುಲಿಂಗ
ಪ್ರಸರಂ ತಾರಾಳಿಯಂ ಕರ್ಬೊಗೆ ತಮದೊದವಿಂ ಪೆರ್ಚಿಗುರ್ಬಾದೊಡಂ ಯೆ
ಣ್ದೆಸೆವೆಂಗಳ್ ತೊಟ್ಟ ಕರ್ಣೋತ್ಪಲಮಲರ್ದುವು ಸಪ್ತಾರ್ಚಿಪೇಳಾತರಂಗಂ
ಬಿಸುಸುಯ್ವುತ್ತಭ್ರಗಂಗಾಂಜುಳಿ ಮುಗಿದುದಪೇಂ ರೌದ್ರಮೋ ಶೈಲದಾಹಂ ೧೦೫

ಕೆಸಱುಬ್ಬುಬ್ಬೇೞ್ತ ನೀರ್ ಜೊಬ್ಬುಳಿಸೆ ಬುಳುಬುಳೆಂದಿಂಕೆವಂದೆಯ್ದೆ ಕಂಪಿ
ಲ್ಲೆಸಗುತ್ತಿರ್ಪ್ಪೇಡನೇಂ ಪೆಂಪಡದರೆಗೆರೆಗಳ್ ಬೀಡೆಯಾಗಿರ್ದು ಮಣ್ಣೀ
ರೊಸೆದಾಣಂ ಬಾವಿಗಾಡತ್ತೊಸೆದು ಪರಿವ ಪೆರ್ಬಳ್ಳದಿರ್ಬಕ್ಕದೊಳ್ ಕಿ
ತ್ತೊಸೆದಂದಂ ಜಾಳಿಸುತ್ತಿರ್ದುದು ಜಳಸಪರಿಕಾಳಕೂಟಂಬಕೋಟಂ (?) ೧೦೬

ಎಳನೇಸಱ್ತೀೞ್ತ್ಗ ನಟನ
ಗ್ಗಳ ಕಣ್ಣುರಿಯೆನಿಸಿದತ್ತು ದಾವಾ
ನಳ ಭೀಷ್ಮಾಂತರಸಾಧ್ವಗ
ತುಳ ಪರ್ಷಂ ಪ್ರಬಳವಾರ್ಧಿಶೋಷ್ಮಂ ಗ್ರೀಷ್ಮಂ (?) ೧೦೭

ಉಱ್ತ ಕಾಯ್ದಾ ಸೂರ್ಯರಶ್ಮಿಗೆ
ನೊಱ್ತಯಿಡಲೆಂದೆತ್ತಿಪಿಡಿದ ತೋವಿದೆಂಬಿನೆಗಂ
ತುಱುಗಿರ್ದಾವರೆಗೊಂಬಂ
ಮುಱಿದು ನೆೞಲ್ಮಾಡಿಕೊಂಡು ನಡೆದರ್ ಪಥಿಕರ್ ೧೦೮

ಸಾರಲುಮಿರ್ದಮರಂಗಳ
ತೂರಲುತುದಿಗೊಂಬನೇಱೆ ಬುರುಲೆಗಳಡ್ಡಂ
ಬಾರಿದವಳ್ಳೆದೆ ಪೌವ್ವನೆ
ಪಾರೆ ಕುಣಿಲ್ದಾಱ್ತ ಪಥಿಕಜನಸಂತಾನಂ (?) ೧೦೯

ಮುಸೆದಿರ್ದ ಲೋಹತಾಪ
ಪ್ರಸರಂ ಕಾಲ್ಪರಡಮೆಲ್ಲಮಂ ಮೆಯ್ವೆರಸಾ
ರಸಮಂ ಗೋಪತಿ ತವೆ ಕುಡಿ
ಯಿಸಿದಂ ನಿಜಗೋಸಹಸ್ರಮಂ ಬೇಸಗೆಯೊಳ್ (?) ೧೧೦

ಕೆಱೆನೀರ್ ತವುತರೆ ಬಱು
ಗೆಱೆಯಾದುವು ತೊಱೆಗಳುರ್ಕುಗೆಟ್ಟಱತು ಬಯ
ಲ್ದೊಱೆಯಾದುವು ಬಾಂದೊಱೆ ಬಿಸು
ದೊಱೆಯಾದುದು ಕಾಲವಶವದೇನಾಗಿಸದೋ ೧೧೧

ಎಸೆವೆಮ್ಮಯ ಮತಿನಾಮದೆ
ಪೆಸರ್ವೆತ್ತರ್ ದಿವಿಜಸತಿಯರೆನಲೇಂ ಸೋೞ್ಪಿಂ
ಗಸದಳವೆಂದು ಬೆಡಂಗಂ
ಪಸರಿಸುವಂತಿರ್ದುವಲರ್ದು ಹೊಂದಾವರೆಗಳ್ ೧೧೨

ಶಿವ ತುಹಿನಾದ್ರಿಯುತ್ತ್ರೈಳಸಿಯುಂ ಮೃಗವೊಂದು ಹಿಮಾಂಶುಬಿಂಬಮ
ಧ್ರುವಸೊಳಕೊಂಡುಮನ್ಯಗತಿಶೂನ್ಯವಿಭಾಸನಮಾತ್ಮ......ರಾಂ
ಬುವನೆ ನಿರಂತರಂ ತೆಗೆದು ಹರ್ಷದಿನೀಂಟಿಯುಮಂಗತಾಪಮಂ
ತವಿಕುಮೆ ರೌದ್ರಮೀ ಬಿಸಿಲೆನಲ್ ಬಿಸಿಲಳ್ಕಿದುದಧ್ವಗರ್ಕಳಂ ೧೧೩

ತರುಣಿಯರಲ್ಲಿಗಲ್ಲಿಗಱವಟ್ಟಿಗೆಯೊಳ್ ಕಡುಗಾಡಿವೆತ್ತ ತಂ
ಗರಗಮನೆತ್ತಿ ನೀರೆಱೆಯೆ ಸಾಲ್ಪುದೆನಲ್ ಮಱೆದಾಡೊಡಮೀಂಟುತಂ
ಬರೆ ಬಿಸಿಲಬ್ಧಿ ಕೋಳ್ವೆಸಕದಿಂ ಬಿಸಿನೀರ ಕರಂಗದಂಡದಿಂ
ದಿರೆ ಬಸಿಱತ್ತು ಬಾಯೊಣಗಿ ಪಾಂಥಜನಂ ನಡೆದತ್ತು ಮಾಳದೊಳ್ ೧೧೪

ಬಿಸುಮಂ ಪಚ್ಚದ ಮುತ್ತುಮೆತ್ತೆ ಸರಸಶ್ರೀಖಂಡ ತಂಪೈದೆ ಖಂ
ಡಿಸೆ ಘರ್ಮಾಂಬುವನಾಂತ ಮಲ್ಲಿಗೆ ಕರಂ ತಮ್ಮಲ್ಲಿ ಕೋೞ್ಕಿಂಪನೆ
ಯ್ದಿಸೆ ಸಾರೋದಯಮಾಗೆ ಸಾರಘನಸಾರಂ ಬಾಳವೇ ಚಪ್ಪರಂ
ಬಿಸಿಲಂ ಚಪ್ಪರಿಸಲ್ಕೆ ಭೋಗತತಿಯಿರ್ಕುಂ ಭೋಗಿದಾಣಂಗಳೊಳ್ (?) ೧೧೫

ಲತಿಕಾಮೂಲಪ್ರಸೂನಂ ಕನಕವಿತತಿಮುಕ್ತಾಕ್ಷತಂ ದರ್ಪಣಾಗ್ರಂ
ದ್ಯುತಿಪುಂಜಂ ಮುಗ್ಧಚಂದ್ರಾತಪ ಕಳಿಕೆಯೆನಲ್ ಕಾಂತಕಕ್ಷಾಘನೋರಾ
ಜತಳಂ ಚಂಚತ್ಕಪೋಲಂ ಸ್ಫುರಿತ ನಿಟಲಘರ್ಮಾಂಬು ಚೆಲ್ವಾಗೆ ಸೊರ್ಕಿಂ
ಸತಿಯರ್ ಕರ್ಪೂರಪಾಟೀಕೃತ ಸತಿಯರೆನಲ್ ನಲ್ಲರೊಳ್ ಕಂಪುದಂದರ್ ೧೧೬

ಆಸವಟಿಂದಿಂಪುಕೆಂಪು ಕಡೆಯಾಣಿಯ ಪೊನ್ನರಸಕ್ಕೆ ಕೂಡಿದಂ
ತೆಸವುದಿದರ್ಕೆ ನಲ್ಮೆಯುದಿನೊರ್ಮಡಿಗಿರ್ಮಡಿದೋಱುತಂ ಸುಧಾ
ರಸಮನೆ ತೀವಿದೊಳ್ಪಸದಮಾವಿನಪಣ್ಗಳನಿಟ್ಟಳಂಗಳಿಂ
ದೊಸರ್ದೆಡೆಯೂಱಿ ಪೀರ್ದಮರ್ದುಪೀರ್ದವರಂ ನಗುಗುಂ ಜಗಜ್ಜನಂ ೧೧೭

ಹಿಮತಾಂಬೂಲೋರುರಾಗಾಧರಮದೃಢಘಸಿ[೧]ತಂ[೧]ಬಾಂಬರಂ ತಾಲವೃಂತೋ
ತ್ಥಮರುದ್ವ್ಯಸ್ತಾಲಕಂ ನಿಸ್ಸೃ[೨]ತಮಧುಲವಸಾದ್ರೋರ್ದ್ಗಮಾಲಂಬಿಕೇಶಂ
ವಿಮಲೋದ್ಯದ್ಯಂತ್ರಧಾರಾಜಲಕಲುಷಿತನೇತ್ರಾಂಜನಂ ಚಂದನಾಪಾಂ
ಡಿಮಗಾತ್ರಂ ಗ್ರೀಷ್ಮಸಾಯಂಸಮಯದೊಳೆಸೆದತ್ತಂದು[೩] ಬಾಲಾಕಳಾಪಂ ೧೧೮
(ಚಂದ್ರಪ್ರಭಪುರಾಣಂ- ೯-೮೨, ಸೂಕ್ತಿ, ೧೦-೧೨೫)

ಪೂಸಿದ ಚಂದನಂ ಮುಡಿದ ಪಾದರಿ ತೊಟ್ಟೆಳೆಮುತ್ತು ಸುತ್ತಿನೊಳ್
ಮಾಸದ ತೆಂಗಿನೋಲೆ ಹದನಾಱಿದ ಜೆಳ್ಮಡಿ ಮೆಲ್ಪ ಪಚ್ಚೆನೀ
ರ್ವಾಸು ತಗುಳ್ದ ಗಂಜಣಿಯೊಳೊಂದಿದ ಬಾಳದ ಬೇರಚಪ್ಪರಂ
ಬೇಸಗೆ ಸಂದ ಭೋಗಿಗೆ ವಿಲಾಸದ ದೇಸೆಯನುಂಟುಮಾಡುಗುಂ ೧೧೯
(ಸೂಕ್ತಿಸುಧಾರ್ಣವಂ ೧೦-೧೩೯)

ಪೂಸುವ ಬೀಸುವ ಮುಡಿಯಂ
ಪಾಸುವ ನೀರ್ಗುಡಿಯಲೆಱೆವ ಕಿಱುಗ್ಗ್ರೈಸೆಸದೊಳ್
ವಾಸಂತಂ ವಿಟಗಾದುದು
ಬೇಸಗೆಗಾದುದು ಬೊಜಂಗತನಮಬಲೆಯರೊಳ್ ೧೨೦
(ಸೂಕ್ತಿಸುಧಾರ್ಣವಂ, ೧೦-೧೪೦)

## ವರ್ಷಋತು

ನಲಿದುದು ಸೋಗೆ ತಂಪನೆಡೆಗೊಂಡುದು ಚಾದಗೆವಕ್ಕಿ ಮಿಕ್ಕ ಪೂ
ವಲರ್ದುದು ಸೊಂಪಿನಿಂ ಕದಪು ಕಂಪನೆ ಬೀಱುದುದೆಯ್ದೆ ಬಿಟ್ಟುಬಂ
ದಲರ್ದುದು ಪಶ್ಚಿಮಾನಿಲನು ಮುಚ್ಚಿತು ಕೇವಗೆ ಪೂಮೊಡಂಬೆಯಂ
ಬಿಲದೊಳು ಪೊಕ್ಕವಂಚೆ ಮುಗಿಲೊಡ್ಡಣೆಯೊಡ್ಡಿತು ಕಾರಕೊರ್ಬಿನೊಳ್ ೧೨೧

ಹರುಷಂ ಮಿಗೆ ನಲಿದಾಡು
ತ್ತಿರೆ ಚಾದಗೆಯುರ್ವಿ ನಲಿಯೆ ನಾಲ್ಕುಂದೆಸೆಯುಂ
ಕರಿಯುಂತಿರೆ ಗಿರಿಯುಂತಿರೆ
ಧರೆಯುಂತಿರೆ ನೆಗೆದವಂಬರಕ್ಕಬ್ದಕುಲಂ ೧೨೨

---

೧ ಶಾಂ(ಸ) ೨ ದ್ಭಾಸ್ಥಳಾಂಕಂಶೃತ(ಸ) ೩ ತ್ತಾದ(ಸ)

ಮದಮುಡುಗಿತ್ತು ಬೇಸಗೆ ಕರಂ ತಲೆದೋಱುದುವಲ್ಲಿಗಲ್ಲಿಗಂ
ಬುದನಿಕರಂ ಸುರುಳ್ದುದು ಬಿಸಿಲ್ ನೆಗೆದತ್ತು ತಟಿಲ್ಲತಾಂಕುರಂ
ಬೆದಱುದುವಂಜಿಯಾಡಲಡಿಯಿಟ್ಟವು ಸೋಗೆಗಳೆಯ್ದೆ ಪಲ್ಲವಂ
ಪುದಿದ ಕದಂಬದೊಳ್ಮುಗುಳನೆಬ್ಬಿಸಲಿರ್ದುದು ಪಶ್ಚಿಮಾನಿಲಂ ೧೨೩

ಚಾದಗೆ ನಾಟಕಂ ನಲಿದುದದ್ರಿಕುಜಂಗಳ ಕೋಟರಂಗಳೊಳ್
ಪೋದಗೆ ತತ್ತಿಯಿಕ್ಕಿದುವು ಮಾನಸಪದ್ಮವನಕ್ಕೆ ಪೋಪ ಚಿ
ತ್ತೋದಯಮಂ ಚೆಗಾಯ್ತು ಮಱುಗೋಗಿಲೆಗಳ್ ಗಱುವೊಯ್ದವಾಗಳುಂ
ಪೋದುವು ಪಾಱಿ ವಾಯಸದ ಗೂಡುಗಳಿಂದವೆ ಮೇಘಕಾಲದೊಳ್ ೧೨೪

ಬೆಟ್ಟದ ತೋಳನಿಂಬಱುದು ಸಾರ್ದುವು ಬೇಡರ ಪಳ್ಳಿ ಕಾಗೆಗೂ
ಡಿಟ್ಟುವು ತತ್ತಿಯಿಕ್ಕಿದುವು ಪೋದಗೆ ಮೇಲ್ಗವಲಲ್ಲಿ ಹಂಸೆಗಳ್
ತೊಟ್ಟನೆ ಪಾಱಿಪೋದವು ಜಲಾಶಯದಿಂ ಮರದಿಂ ಮರಕ್ಕೆ ಧಿಂ
ಕಿಟ್ಟು ಕಳಾಪಿ ಕೇಗಿದುವು ಚಾದಗೆಯೇಱುದುವಭ್ರಮಾರ್ಗಮಂ ೧೨೫

(ಸೂಕ್ತಿಸುಧಾರ್ಣವಂ, ೧೦-೧೫೨)

ತರದಿಂ ಶಿಖಿ ಚಾದಗೆ ಮಧು
ಕರನಂಚೆ ಪಯೋಧರಂಗಳನುನಯದಿಂದಂ
ಕರೆದುವು ಮೊರೆದುವು ಪರೆದುವು
ತೊರೆದುವು ಬೇಗದಿ ನಿರಂತರಂ ಕಾರ್ಮುಗಿಲೊಳ್ ೧೨೬

ಹರುಷಂ ಮಿಕ್ಕಭ್ರಮಾತಂಗಮನತಿಭರದಿಂ ನೋಡಲೆಂದೆಳ್ದುವೋ ದಿ
ಕ್ಕರಿಗಳ್ ದೇವೇಂದ್ರನೊಳ್ ಕಾದುವ ಕಡುಮುಳಿಸಿಂದೆಳ್ದುವೋ ಗೋತ್ರಶೈಲೋ
ತ್ಕರವೀಶಂಗಾ ಹಿರಣ್ಯಾಕ್ಷನಿಗೊಗೆದ ಮನೋದುಃಖಮಂ ದೂಱಲೆಂದಾ
ತುರದಿಂದೇಳ್ದತ್ತೊ ಧಾತ್ರೀತಳಮೆನೆ ನಭದೊಳ್ ತೀವಿತಭ್ರಪ್ರತಾನಂ ೧೨೭

ಮುಂ ಬಿಸಜೋದ್ಭವಂ ಸಮೆದನಂಬುದಮಂ ಪವಮಾನಧೂಮತೇ
ಜೋಂಬುಗಳಿಂದವೆಂಬ ನುಡಿ ತಥ್ಯಮದಲ್ಲದೊಡುಂತೆ ಕಾರಕಾ
ದಂಬಿನಿ ಮಾಳ್ಕುಮೇ ಬಿರಯಿಗಂಗಜವಹ್ನಿವಿಜೃಂಭಮಂ ವಿಲೋ
ಲಾಂಬಕವಾರಿಯುಂ [1]ತನುನಿದಾಘಮು[1]ನುತ್ಕಳಿಕಾಪ್ರಪಂಚಮುಂ ೧೨೮

(ಚಂದ್ರಪ್ರಭಪುರಾಣಂ, ೪-೩೩; ಸೂಕ್ತಿ, ೧೦-೧೬೦)

---

[1]ತನುವಿದಾಹಮು(ಸ) ಹೃದಯತಾಪ(ಅ)

ಘನವಜ್ರಜ್ವಾಲಧೂಮಾವಳಿಯೊ ಗಗನಗಂಗಾತಟೋದ್ಯತ್ತಮಾಳೀ
ವನವೋ ವಿದ್ಯುನ್ನಟೀಕರ್ಬುರಜವನಿಕೆಯೋ ಚಾರುಮೇಘಾಗಮಶ್ರೀ
ವನಿತಾಪಿಂಛಾತಪತ್ರಪ್ರಕರಮೊ ವಿಯದುತ್ತುಂಗಮಾತುಂಗ[೧]ರುಕ್ಷಾ[೧]
ಜಿನಪಕ್ಷತ್ರಾಣಮೋ ಪೇೞೆನೆ ನೆಗೆದುದಳಿಶ್ಯಾಮಳಂ ಮೇಘಜಾಳಂ ೧೨೯

(ಚಂದ್ರಪ್ರಭಪುರಾಣಂ, ೪-೩೧; ಸೂಕ್ತಿ, ೧೦-೧೫೫)

ಒಟ್ಟಿದ ವಾರಿದೇರುಗಳವೋಲ್ ಕೆಲವೊಪ್ಪಿರೆ ದೂರಭಾಗದೊಳ್
ಕಟ್ಟಿದ ಗಂಧವಾರಣದವೋಲ್ ಕೆಲವೊಪ್ಪಿರೆ ತಳ್ತ ಕರ್ಪೊಡಂ
ಬಟ್ಟಿಸೆದೆತ್ತಿದೋಳಿಗುಡಿವೋಲ್ ಕೆಲವೊಪ್ಪಿರೆ ನೀರದಂಗಳೊಂ
ದಿಟ್ಟಳವೊಪ್ಪಿದತ್ತು ಮೞೆಗಾಲದ ಬೀಡಿನವೋಲ್ ನಭಸ್ಥಳಂ ೧೩೦

(ಸೂಕ್ತಿಸುಧಾರ್ಣವಂ, ೧೦-೧೫೬)

ಜಳದೌಘಶ್ಯಾಮಧೂಮಪ್ರತತಿ ಚಳತಟಿನ್ಮಾಳಿಕಾಲೋಲಕೀಲಾ
ವಳಿ ಸಂಜಾತೇಂದ್ರಗೋಪಪ್ರಸರವಿಸರದರ್ಚಿಃಕಣಂ ಪಶ್ಚಿಮಾಶಾ
ನಿಳಕಾಂತೋಜ್ಜೃಂಭಿತಂ ಬಂದುದು ವಿರಹಿತರುವ್ರಾತಮಂ ಪರ್ವುವುಗ್ರಾ
ನಳನೆಂಬಂತಬ್ದಕಾಲಂ ಸ್ತನಿತಧಗಧಗಧ್ವಾನರೌದ್ರಾಯಮಾನಂ ೧೩೧

(ಚಂದ್ರಪ್ರಭಪುರಾಣಂ, ೪-೨೯; ಸೂಕ್ತಿ, ೧೦-೧೫೮)

ಸ್ತನಿತಘನಬೃಂಹಿತಂ ದು
ರ್ದಿನಮದಪೂರಂ ಪಯೋದಗಜಘಟೆ ಸುೞಿದ
ತ್ತಿನರುಚಿಪಲ್ಲವಕಳಿಕಬ
ಳಿನಲೀಲೆಯಿನಂತರಿಕ್ಷ ಕಕ್ಷ್ಯಾಂತರದೊಳ್ ೧೩೨

(ಚಂದ್ರಪ್ರಭಪುರಾಣಂ, ೪-೩೨; ಸೂಕ್ತಿ, ೧೦-೧೫೯)

ಇಂಬುಗಿಡಿಸಿದುವು ದೆಸೆಗಳ
ನಂಬರಮಂ ಪೀರ್ದುವಹಿಮಹಿಮಕರಕಿರಣಾ
ಡಂಬರಮಂ ನೊಣೆದುವು ಪಿರಿ
ದುಂ ಬೇಸಱಿಸಿದುವು ಬಿರಿಯಿಯುಂ ಜಲದಂಗಳ್ ೧೩೩

(ಚಂದ್ರಪ್ರಭಪುರಾಣಂ, ೪-೩೪; ಸೂಕ್ತಿ, ೧೦-೧೬೧)

---

[೧] ಭೂಷಾ(ಸೂ)

ಘುಳುಘುಳು ಘುಡುಘುಡು ಘುಡುಗುಳು
ಛಿಳಿಚಿಟಿ ಗುರ್ಘುಳಘುಳಧಾಳಂದಾಂದಳಚಿಂ
ಛಿಳಿಭಿಂ ಭಿಭಿಂ ಚಟಂ ಛಟಿ
ಘುಳುಘುಳು ಘುಳುಯೆಂದು ಮೊೞಗು ಮೊೞಗಿತ್ತಾಗಳ್ ೧೩೪

ಹರಿಗೋಪಾಲಪದಕ್ಕೆ ತೂರ್ಯಪಟುಘೋಷಂ ಕೇಕಿನಾಟ್ಯಕ್ಕೆ ಬಂ
ಧುರಷಕ್ಕಾನಿನದಂ ವಿಯೋಗಿನಿವಹಕ್ಕಂಗೋದ್ಭವಜ್ಯಾಲತೋ
ದ್ಧುರನಾದಂ ಕಳಹಂಸಯೂಥಗಮನೋದ್ಯೋಗಕ್ಕೆ ಭೇರೀಗಭೀ
ರರವಂ ತಾನೆನೆ ನವ್ಯಮೇಘನಿನದಂ ಪೊಣ್ಮಿತ್ತು ರೋದೋಂತದೊಳ್ ೧೩೫
(ಜಗನ್ನಾಥವಿಜಯಂ, ೪–೮; ಸೂಕ್ತಿ, ೧೦–೧೬೩)

ನಲ್ಲರನಪ್ಪೆ ಮುಗ್ಧೆಯರು ದುರ್ಭಯು ಸಂಭ್ರಮದಿಂದೆ ಹಂಸೆಗಳ್
ಸಿಲ್ಲದೆ ಪಾಱಿಪೋಗೆ ಕೊಳದಿಂ ನವಿಲೊರ್ಮೆಯೆ ಕೇಳ್ದು ನರ್ತನೋ
ತ್ಸಲ್ಲತೆಯಂ ನೆಗೞ್ಚೆ ಮೊೞಗಿತ್ತು ಮುಗಿಲ್ ಘನಕಾಲ ಭೂಮಿಭೃ
ದ್ವಲ್ಲಭದಿಗ್ಜಯೋದ್ಯಮಮಹೋತ್ಸವದುಂದುಭಿ ತಾನಿದೆಂಬಿನಂ ೧೩೬

ತಳದಾರ್ತಾತ್ಮಾಲಯದಿಂದಿರುಳ್ ಸುೞಿವ ಜಾರಸ್ತ್ರೀಯ ವಕ್ತ್ರೇಂದುವಂ
ಚಳವಿದ್ಯನ್ನಯನಾವಲೋಕನದೆ ಕಂಡನ್ಯಾಯಮಾಯ್ತೀ ವಿಯ
ತ್ತಳಚೂಡಾಮಣಿ ಚಂದ್ರನೇಂ ಕೞಿತದನೀ ವರ್ಷಾಂಬುವಂ ಕೂಡೆ ಭೂ
ವಳಯಕ್ಕೆಂದುಲಿವಂತದೇಂ ಮೊೞಗಿತೋ ಮೇಘಂ ನಿಶೀಥಂಗಳೊಳ್ ೧೩೭
(ಜಗನ್ನಾಥವಿಜಯಂ, ೪–೨೮; ಸೂಕ್ತಿ, ೧೦–೨೧೭)

ಪಿಕಮೌನಪ್ರತದುಂದುಭಿಧ್ವನಿ ಬಲಾಕಾದೃಶ್ಯಚೂಡೋದಯಾ
ನಕರಾವಂ ಶಿಖಿನೃತ್ಯವಾದ್ಯರುತಿ ಪೋತಕ್ಕುದ್ಭಗರ್ಭೋತ್ಸವೋ
ತ್ಸುಕವಾದಿತ್ರರವಂ ಮರಾಳಗಮನಾತೋದ್ಯಸ್ವನಂ ಚಾತಕೋ
ದಕಕೇಳೀಕೃತತೂರ್ಯನಾದಮೆಸೆದತ್ತಂಭೋದನಿರ್ಘೋಷಣಂ ೧೩೮
(ಚಂದ್ರಪ್ರಭಪುರಾಣಂ, ೪–೩೫; ಸೂಕ್ತಿ, ೧೦-೧೬೪)

ರಸನಾಲಂಪಟನಾಜ್ಯವಾಂಛಿತನಸಂತುಷ್ಟಂ ಸದಾಸರ್ವಭ
ಕ್ಷಣನುಸ್ತಾಟವಿಭುಂಜಿತೋಗ್ರನೆನಿಪೀ ದಾವಾಗ್ನಿಯಂ ಕಾಲ್ಗಳಿಂ
ಪೊಸೆವೆಂ ಕಾೞ್ಚಿಪನಲಿಂ ಪೊರಳ್ಚುವೆನರಣ್ಯಶ್ರೀಯೆ ಕೇಳೆಂದು ಗ
ರ್ಜಿಸಿ ಮೇಘಂ ನುಡಿವಂದದಿಂ ಸ್ತನಿತಘೋಷಂ ಪೊಣ್ಮಿತಂದೆತ್ತಲುಂ ೧೩೯
(ಸೂಕ್ತಿಸುಧಾರ್ಣವಂ, ೧೦–೧೬೫)

ತಲೆ ಬೆಳೆದು ಪರ್ವತಾಕಾ
ಶವನೇಱಿದ ಮುಗಿಲ ನೀರ ಸೇದೆಯುಂ ಮಿಗೆ ದು
ಶ್ಚ್ಯವನಂ ಬಿಡಿಸುವ ಘನಶ
ಸ್ತ್ರವಣಂ ಪೊಳೆವಂತೆ ಮಿಂಚು ಮಿಂಚಿತ್ತಾಗಳ್ ೧೪೦

ಜಳಮಂ ವಾರಾಶಿಯೊಳ್ ಮಿರ್ಗ ಬೆರಸು ಮೊಗೆತರಲ್ ಮೇಘವಾ ಬಾಳೆಮೀನ್ಗಳ್
ಪೊಳೆದಾಡುತ್ತಿರ್ದುವಾಕಾಶದೊಳೆನಲವಿಭಿನ್ನಾಂಜನಚ್ಛಾಯೆಯಿಂ ಗೊಂ
ದಳಿಸಿರ್ದಂಭೋದದಿಂದುಚ್ಚಳಿಸಿ ಪೊಳೆವ ವಿದ್ಯುಲ್ಲತಾಜಾಳವಾಗಳ್
ತಳೆದತ್ತಾಶ್ಚರ್ಯಮಂ ಕಟ್ಟಿಲೆ ಬಿಡೆ ಬಿಸಿಲಂ ಕಾಱುದೊಂದಂದದಿಂದಂ ೧೪೧
(ಜಗನ್ನಾಥವಿಜಯಂ, ೪-೧೫; ಸೂಕ್ತಿ ೧೦-೧೬)

ಜಳನಿಧಿಯೊಳ್ ಮುಗಿಲ್ ಸಲಿಲಮಂ ಮೊಗೆದೆಯ್ತರುವಲ್ಲಿ ಬಾಡಬಾ
ನಳನನು ನುಂಗಲಂತದುದರಾಂತರಮಂ ಸುಡೆ ತಾಳಲಾಱದು
ಮ್ಮಳಿಸುತಲುಂ ಭುಗಿಲ್ ಭುಗಿಲನೇಂ ಕಡುವೇಗದಿ ಕಾಱುದಪ್ಪುದೆಂ
ದಿಳೆಯ ಜನಾಳಿ ಬಣ್ಣಿಪೊಲು ಮಿಂಚಿಸೆದಿರ್ದುದು ಕಾರಕೊರ್ವಿನೊಳ್ ೧೪೨

ರಾಗದಬಳ್ಳಿ ಚಾದಗೆಗೆ ಕಾಂಚನಚಂಚಲಲಾಸ್ಯತರ್ಜನಂ
ಸೋಗೆನವಿಲ್ಗೆ ಮೇಖಲೆ ಘನಾಗಮಲಕ್ಷ್ಮಿಗೆ ದೀಪಮಾಲೆ ಜಾ
ರಾಗಮನಕ್ಕೆ ಜಂತ್ರದುರಿಯೆಣ್ಣೆ ವಿಯೋಗಿಜನಕ್ಕೆನಲ್ ನಭೋ
ಭಾಗಮನೆಯ್ದೆ ಬಿತ್ತರಿಸಿದತ್ತು ತಟಿಲ್ಲತೆ ಲಾಸ್ಯಲೀಲೆಯಂ ೧೪೩
(ಪಂಪರಾಮಾಯಣಂ, ೭-೧೪೮, ಮಲ್ಲಿನಾಥಪುರಾಣಂ ೮-೮೮; ಸೂಕ್ತಿ ೧೦-೧೬೭)

ಸ್ತನವತಟೋಪಳಸ್ಫುರಿತಮನ್ಮಥರಾಗಸುವರ್ಣರೇಖೆ ನೂ
ತನಜಳವಾಹಕೇಭನಿಗಳಂ ನವಚಂಪಕಮಾಲೆ ವಾರಿಭೃ
ಜ್ಜನಪತಿಹಸ್ತಖಳ್ಗಲತೆ ಮೇಘಗೃಹೋಜ್ವಳದೀಪಮಾಲೆ ತಾ
ನೆನೆ ಕಡುಗಾಡಿಯಂ ತಳೆದು ಮಿಂಚಿಸೆದತ್ತು ನಭೋವಿಭಾಗದೊಳ್ ೧೫೪

ಭೂತಳದ ಗೋತ್ರಗಳ ಪುರು
ಹೂತಂ ಮಿಗೆ ಗೆಲ್ದು ಮತ್ತನಲಬಾಣದೊಳಂ
ಪಾತಾಳದ ಗಿರಿಗಳನಿ
ಟ್ಟಾ ತೆಱದೊಳ್ ಸಿಡಿಲು ಬಿರ್ದುದಭ್ರಾಗಮದೊಳ್ ೧೫೫

ಘನಸಮಯನೃಪಾಲಕನೊಳ್
ಘನಪಾಣಿಗ್ರಹಣಮಾದ ಭೂವನಿತೆಗೆ ಮು
ತ್ತಿನಸೇಸೆಗಳಂ ಗಗನಾಂ
ಗನೆ ಸೂಸಿದಳೆನಿಸಿ ಬೀೞ್ದವಾಲಿವರಲ್ಗಳ್ ೧೪೬

ಪಳುಕಿನ ಬಟ್ಟುಗಳ್ ಗಗನದಿಂದುದಿರ್ದಪ್ಪುವೊ ಚಿತ್ರವೆಂಬಿನಂ
ಘಳಘಳನಭ್ರದಿಂದೆ ಮಿಡುಕೆಂಬನಿ ಸೂಸೆ ಬೞಿಕ್ಕ ವೃಷ್ಟಿ ಕಂ
ಗೊಳಿಸಿದುದಂದು ತೀವ್ರಪವನಾಹತಿಯಿಂ ತಟಿದಂಶವೆಂಬ ಕೆಂ
ದಳಿರ್ಗಳನಾಂತು ಮೇಘಲತೆಯಿಂದಲರೋಗುತಲಿರ್ದವೆಂಬಿನಂ ೧೪೭

ಸುರಗೋಪಂಗಳುಮಾಲಿಕಲ್ಲುಮೆಳವುಲ್ಲುಂ ಕೆಂಪಿನಿಂ ಬೆಳ್ಪಿನಿಂ
ಹರಿತಚ್ಛಾಯೆಯಿನಲ್ಲಿಗಲ್ಲಿಗೆಸಗುಂ ಮಾಣಿಕ್ಯದಿಂ ಮುತ್ತಿನಿಂ
ಗರುಡೋದ್ಗಾರದ ಪಚ್ಚೆಯಿಂ ಸಮೆದ ನಾನಾಭೂಷಣಾನೀಕಮಂ
ಧರಣೀವಲ್ಲಭೆಗಂಬುದಾಗಮವಿಟಂ ಕೈಗೆಯ್ಸಿದೊಂದಂದದಿಂ ೧೪೮
(ಜಗನ್ನಾಥವಿಜಯಂ, ೪–೨೦, ಸೂಕ್ತಿ, ೧೦–೨೨೨)

ವಸುಧಾವಲ್ಲಭೆ ಮೇಘಕಾಲವಿಟನೊಳ್ ಸಂಭೋಗಮಂ ಮಾಡೆ ಬ
ಣ್ಣಸರಂ ಪೊರ್ಕುಳಿಯಿಂದಲೇ ಪಱಿದು ಸೂಸಿತ್ತಲ್ಲದಂದೆತ್ತಣಿಂ
ಪೊಸಮುತ್ತುಂ ಕಿಸುಗಲ್ಗಳುಂ ಕೆದಱಿ ಕಣ್ಗೆಂಬಾದುವೆಂಬಂತದೇ
ನೊಸೆದೊಪ್ಪಿರ್ದುವೊ ಸೂಸಿದಾಲಿವರಲುಂ ತಳ್ತಿಂದ್ರಗೋಪಂಗಳುಂ ೧೪೯
(ಪಂಪರಾಮಾಯಣಂ, ೭-೧೮೬; ಮಲ್ಲಿನಾಥಪುರಾಣಂ, ೮–೮೬, ಸೂಕ್ತಿ, ೧೦–೧೮೫

ವಾಸವಚಾಪಮೆಂಬ ಮಣಿಮಂಟಪದೊಳ್ ಮೊೞಗೆಂಬ ವಾದನಂ
ಘೋಷಿಸೆ ಮೇಘಮೆಂಬ ತೆರೆಯಿಂದೆ ತಟಿನ್ನಟಿ ಬಂದು ನಾಟ್ಯವಿ
ನ್ಯಾಸದೆ ಕೊಂಕಿ ನಿಂದು ಕುಸುಮಾಂಜಳಿಯಂ ಕುಡೆ ಮುತ್ತುಮಾಣಿಕಂ
ಸೂಸಿದುವೆಂಬಿನಂ ಪರೆದುವಾಲಿವರಲ್ಗಳುಮಿಂದ್ರಗೋಪಮುಂ ೧೫೦
(ಅನಂತನಾಥಪುರಾಣಂ, ೯–೧೨; ಸೂಕ್ತಿ, ೧೦–೧೮೬)

ಘನರಾವಂ ಪೊಣ್ಮೆ ಮೀನುಂ ಮೊಸಳೆಯುಮೊಡವಿಟ್ಟಿತ್ತೆನಲ್ ಮೇಗಣಿಂದಂ
ಬಿನ ಕಟ್ಟಂ ಬಿಟ್ಟವೋಲ್ಸಂಧಿಸಿ ಕೊಡಗೊಡದೊಳ್ ಪೊಯ್ದವೋ[೧]ಲ್ಮುಗ್ಗಿ[೧]ಭೋರ್ಬ್ಬೋ
ರೆನುತಂ ಸಂವರ್ತಮೆತ್ತಂ ಜಳಚಳಕುಳದೊಂದಂದದಿಂ ಗೋಕುಲಂ ಬ
ಲ್ಪೊಸಲೊಳ್ ತೇಂಕಾಡುವನ್ನಂ ಕಱೆದುದು ಮೞೆಯುಂ ನೂತ್ನಜೀಮೂತಜಾ[೨]ತಂ[೨]
(ಸೂಕ್ತಿಸುಧಾರ್ಣವಂ, ೧೦–೨೨೪)

---

೧ ಲಾಗೆ (ಸೂ) ೨ಲಂ (ಸೂ)

ವಿಳಸಲ್ಲೋಲಪ್ರವಾಳಪ್ರತತಿಯಿನಪರಾಂಭೋಧಿವೀಚೀಚಯಂ ಕೆಂ
ದಳಿರಿಂ ತದ್ವಾರ್ಧಿವೇಳಾವನಸಮಿತಿ ದವಜ್ವಾಲೆಯಿಂ ನೀಳಶೈಲಾ
ವಳಿ ಕೈಕೊಂಡಭ್ರಮಂ ತಳ್ತಡರ್ದವೊಲಡರ್ದತ್ತೆತ್ತಲುಂ ಬಳ್ಳಿಮಿಂಚಂ
ತಳೆದಾಶಾಮಂಡಲಂ[೧]ಕಗ್ಗನೆಗ[೧]ನಿಯೆ ಜಳಃಪೀತಜೀಮೂತಜಾತಂ ೧೫೨
(ಜಗನ್ನಾಥವಿಜಯಂ, ೪-೧೪)

ಒದವಿದ ಕೇಕಿ ನೀಳ್ದ ಕೊರಲೆತ್ತಿದ ಪಕ್ಷಮುರಲ್ಚುತಿರ್ಪಿನಂ
ಮದನನ ಪಂಚರತ್ನಮಯ ಖೇಟಕದಂತಿರೆ ಬಿರ್ಚಿ ಬರ್ಹಮಂ
ಪಡೆದು ನವಿಲ್ಗಳಾಡೆ ಚಪಲಾಕ್ಷಿ ಘನಾಗಮ ಲಕ್ಷ್ಮಿ ಕಂಡು ಹ
ರ್ಷದಿನುಗುತಿರ್ಪ ಕಂಬನಿಯ ಸೋನೆಯೊಲಾದುದು ಭೂರಿವೃಷ್ಟಿಗಳ್ ೧೫೩

ಗಗನಂ ಕೆಟ್ಟದು ಚಂದ್ರಸೂರ್ಯರಟಿಿದರ್ . . . . . . .
. . . . . . . . ಜಲದೊಳ್ ಪೂಟ್ದಿತ್ತು ಧಾತ್ರೀತಳಂ
ಖಗಸಂಚಾರತೆ ಶೂನ್ಯಮಾದುದು ನಿರುದ್ಯೋಗಕ್ಕೆ ಪಕ್ಕಾದುದೀ
ಜಗಮೆಂದೆಂಬಿನಮೆಯ್ದೆ ಕಟ್ಟೆ ಕರೆದತ್ತಾಸಾರಮೀ ಲೋಕದೊಳ್ ೧೫೪

ಮೊಟಗುವ ಮೇಘ ನೀಳ್ದುಜುಪಳಂಚುವ ಮಿಂಚು ನಭಕ್ಕೆ ಧೂಳಿಯಂ
ಬಟಿಸುವ ಘಾಳಿ ಚೂಣಿಯ ಬಿದಿರ್ವನಿ ಪೆರ್ಚುವ ಸೋಗೆ ಶೋಕಮಂ
ತಟಿಿವ ಮರಾಳ ಮಂದಮತಿಯೆಯ್ದುವ ಕೋಗಿಲೆ ರಾಗದೇಟಿಿಗೆಯೊಳ್
ಮುಟುಗುವ ಜಾರೆಯರ್ ಕುಣಿಯೆ ಕಾರೆಸೆದತ್ತು ನವಪ್ರದೇಶದೊಳ್ ೧೫೫

ಪರಿವ ಮುಗಿಲ್ ಪಳಂಚೆ ಖಚರೀನಿಚಯಸ್ತನತೋಗಹಾರವ
ಲ್ಲರಿ ಪರಿಯಲ್ ಪೊದಟ್ದು ಬಿಡುಮೀವಿಘನೋಪಳದೊಂದು ರೂಪದಿಂ
ಸುರಿಯಲನಂತರಂ ಬಜುಯದಾರತಿಟಿಲ್ಧಪುದೆಂಬ ಚೆಲ್ವನಾ
ವರಿಸಿದುದಂದು ಸಂದಣಿಸಿ ನೀಳ್ದ ಪಯೋಧರ ವಾರಿಧಾರೆಗಳ್ ೧೫೬

ಶುಕನಿಕುರುಂಬಮುಗ್ಗಡಿಸೆ ಕೋಕಿಳನಾದದ ತಾಳಮುಣ್ಮೆ ಸೌ
ಖ್ಯಕರ ಕದಂಬಪುಷ್ಪರಸದಿಂ ದಣಿದೊಯ್ಯನೆ ಪಾಡೆ ಷಟ್ಪದಂ
ವಿಕಸಿತಪಕ್ಷ್ಮಮೂರ್ಧಗಳನುಣ್ಮೊಗದುಚ್ಚರಿತಸ್ವನಂ ಬಳಾ
ಹಕ ನಿನದಕ್ಕೆ ಪೆಕ್ಕಣವನಾಡಿದುದೊಂದು ಮಯೂರನರ್ಥಿಯಿಂ ೧೫೭

———

[೧] ಕಟ್ಟನೆಕು (ಅ)

ನನೆವಿಲ್ಲಂ ಬಿಟ್ಟು ವಿದ್ಯುಲ್ಲತೆಯನೆ ತಿರುವೊಯ್ದಿಂಪ್ರ ಕೋದಂಡಮಂ ಕೊಂ
ಡು ನಿಜಸ್ಕಂಧಾಗ್ರದೊಳ್ ಕೇದಗೆಯೆಸಳಲಗೆಂಬಂಬು ಕೂರಂಬು ತೀವಿ
ದರ್ ನಿಷಂಗಂ ಕಣ್ಗೊಳಿಲ್ ಪೊಗ್ಗಿಯ ನನೆಗಣೆಯಂ ತೂಗುತುಂ ಕಂತುವೀ ಬಂ
ದನೆಸುತ್ತಂ ಗರ್ಜಿಪಂತಾದುದು ವಿರಹಿಗಳಂ ಕೇಕಿಭೇಕಪ್ರಣಾದಂ ೧೫೮

ಬಱಬಱನಾಗಿ ತಾಳಿಸುತಲುರ್ವರೆಯಂ ರವಿಸುಟ್ಟನೆಮ್ಮನಿಂ
ತಱಿದಿಱಿಯೆಂದು ವಾರಿದಕೆ ಮುದ್ದಿಸಿ ಹುಯ್ಯಿಲನಿಕ್ಕುವಂವದಿಂ
ಯೆಱಯೆಱ ಟಿಂಕುಟಿಂಕುಟ ಟಟಱ್ರ ಬಱಟ್ಟವೆಂದು ಕೂಗಿ ತಾ
ಕೆಱೆಕೆಱೆ ಭಾವಿಬಾವಿ ತೊಱೆಪೆರ್ದೊಱೆದಪ್ಪುದೆ ದರ್ದುರವ್ರಜಂ ೧೫೯

ಅಡದೊರ್ಂಡೊಂದಱ ಬೆನ್ನಂ
ಗಡ ಮೊಗದಿಂ ಪತ್ತಿಕೊಂಡು ವಿಷಯಾತುರದಿಂ
ಗಡ ದಬಕುತಿಹ ಗಡಗೀಡ
ಗಡಕೆಂವಪ್ಪ ಕಾರಕಪ್ಪೆ ಕೆಱೆಗಳ ತಡಿಯೊಳ್ ೧೬೦

ಗಗನಸ್ತ್ರೀಯ ವಿಚಿತ್ರವಸ್ತ್ರವಿಲಸತ್ಸವ್ಯಾನವೆಂಬಂತೆ ಕಾ
ರ್ಮುಗಿಲೆಂಬಾನೆಯ ರನ್ನದಗ್ಗರಣೆಯೆಂಬಂತಬ್ಜಗರ್ಭಾಂಡಭೂ
ರಿಗೃಹದ್ವಾರದುದಾರತೋರಣವಿದೆಂಬಂತಭ್ರದೊಳ್ ನಾಡೆ ದಿ
ಟ್ಟಿಗೆ ಚೆಲ್ವಾಯ್ತು ಬಹುಪ್ರಭಾಶಬಳಿತಂ ಗೀರ್ವಾಣಬಾಣಾಸನಂ ೧೬೧

ಪೊಲ್ಲೆ ಮುಗುಳ್ತ್ತುದಂದು ಗಿರಿಮಲ್ಲಿಗೆ ಪೊಲ್ಲನರಲ್ದುದಂದು ಕಂ
ಕೆಲ್ಲಿ ಪಸುರ್ತುದಂದು ಬಿದಿರೊಳ್ ಕುಡಿ ಮೂಡಿದುದಂದು ಕೆಂದಳಿರ್
ಪಲ್ಲಿಕಿಗಾದುದಂದು ರಸವೇಱಿದ ನೇಱಿಲ ದೋರೆವಣ್ಗಳಂ
ತಲ್ಲುಗುತಂದುವಂದು ತಲೆದೋಱಿದುವಂದು ಶಿಲೀಂಧ್ರಕಂದಳಂ ೧೬೨

(ಸೂಕ್ತಿಸುಧಾರ್ಣವಂ; ೧೦-೨೦೩)

ಕೆಂಗೊಸರಾಯ್ತು ಸಪ್ಪಿಕೆ ಕದಂಬಮುಮಲ್ದುದು ಜಂಬು ದೋರೆಪ
ಜ್ಜೊಂಗಲನಾಂತುದತ್ತಮಳಿಕಂ ಪರಿಲೊತ್ತಿದುದಿತ್ತ ಕೇತಕಂ
ಸ್ರೊಂಗಱಿಗಟ್ಟಿದತ್ತು ಪಲವಕ್ಷಿಯುಸೀಕ್ಷಿಸುವಂತಿರಾದುವೆ
ತ್ರಂ ಗಿರಿಕುಂಜದೊಳ್ ನಲಿದು ಕೇಗುವ ಸೋಗೆಯ ಕಣ್ಣ ಪೀಲಿಗಳ್ ೧೬೩

(ಅನಂತನಾಥಪುರಾಣಂ, ೯-೬; ಸೂಕ್ತಿ, ೧೦-೧೫೧)

ಕಡವಲರ್ದುವು ಮೊಲ್ಲೆಯ ಪೂ
ಗುಡಿ ನಿಮಿರ್ದುವು ಸೋಗೆ ಕೇಗಿದುವು ಕೇದಗೆ ಬಿ
ಳ್ಪೊಡೆಯೋದುವು ಚಾದಗೆಗಳ್
ಕಡಂಗಿ ನುಂಗಿದುವು ತೋರವನಿಯಂ ಕಾರೊಳ್ ೧೬೪

(ಪಂಪರಾಮಾಯಣಂ, ೨-೫೨; ಸೂಕ್ತಿ, ೧೦-೨೨೦)

ಎಱಗದೆ ತನ್ನೊಳ್ ಮಧುಕರ
ನೆಱಗಿರೆ ಕೇದಗೆಯೊಳೆಯ್ದೆ ಕಂಬನಿವಱಿಯಂ
ಕಱೆವಂತಿರೆ ಕೞಿವೂಗಳ್
ನೆಱೆ ಬೀತುವು ಸುರಗಿ ಹೊನ್ನೆ ಮಲ್ಲಿಗೆ ವನದೊಳ್ ೧೬೫

(ಜಗನ್ನಾಥವಿಜಯಂ, ೪-೫; ಸೂಕ್ತಿ, ೧೦-೨೦೭)

ಮನದನುರಾಗದಿಂ ನೆಗೆದು ನೀಡಿದ ಕಂಠಮುರಲ್ದ ತುಪ್ಪುೞಿ
ರ್ಬನಿಮಿಷನಾದ ಕಣ್ ತೆಱೆದ ಚಂಚು ವಿಜೃಂಭಿಪೆಱಂಕೆ ರಂಜಿಸಿ
ತ್ತೆನೆ ನಲವೇಱೆ ತೋರವನಿ ಕಣ್ಣನಿ ಮುಂಬನಿಯೆಂಬ ಕಾರ್ಮುಗಿ
ಲ್ವನಿಯನಲಂಪಿನಿಂದಮಿದಿರ್ಗೊಂಡು ಕರ್ದುಂಕಿದುದುದ್ಧಚಾತಕಂ ೧೬೬

(ಜಗನ್ನಾಥವಿಜಯಂ, ೪-೧೭ ಸೂಕ್ತಿ, ೧೦-೧೮೨;)

ನೆಗೆದುದು ಪೊರ್ದಿ ಸಾರ್ದುದಮರಿತ್ತು ತುಳುಂಕಿತು ಬೆಂಗೆ ನೀರಧಾ
ರೆಗಳುಱೆ ನಾಂಟಲೀಂಟಿದುದು ನೇಹದಿನೋಡಿದುದಂಚೆ ಚಂಚುವಿಂ
ದುಗಿದುದು ಪಕ್ಕದಿಂ ಪೊಡೆದುವಂಘ್ರಿಗಳಿಂದೊದೆಯಿತ್ತು ನೆತ್ತಿಯಂ
ನೆಗಪಿದುದಪ್ಪಿ ತಳ್ತಿಱಿದುದಂಬುಕಣಂಗಳನೊಂದು ಚಾತಕಂ ೧೬೭

ತೀಡುವ ಪಕ್ಷಿಮಾನಳನ ತೀಟದಿನುತ್ಕಟಮಾಗೆ ರಾಗಮಿ
ರ್ಪೋಡಿದ ಚಂಚುಮಂ ತೆಱೆದೆಱಂಕೆ ನೆಱಲ್ದಿರೆ ಕಂಠನಾಳಮಂ
ನೀಡಿ ವಿಯತ್ತಳಕ್ಕೊಗೆದು ಕಾರಮುಗಿಲ್ವನಿಯಂ ಮನಂ ಕುಳಿರ್
ಕೋಡುವಿನಂ ಕರ್ದುಂಕಿ ನಲಿದಾಡಿದುದೋಡಿದುದೊಂದು ಚಾತಕಂ ೧೬೮

(ಪಂಪರಾಮಾಯಣಂ, ೭-೧೪೬; ಮಲ್ಲಿನಾಥಪುರಾಣಂ, ೮-೮೮; ಸೂಕ್ತಿ,೧೦-೧೮೦)

ಇದಿರ್ಗೊಂಡಾಯ್ಕುಳಿಗೊಂಡು ಕೊರ್ಬಿದ ನವಾಂಭೋಬಿಂದುವಂ ನುಂಗಿ ಪೆ
ರ್ಚಿದಲಂಪಿಂ ಜಲಧಾರೆಯಂ ಕರ್ದುಕಿದತ್ತೆಯ್ತಂದು ಮುಂಡಾಡಿದ
ತ್ತೊದೆದತ್ತೀಡಿಱಿದತ್ತು ಚಂಚುಪುಟದಿಂ ಪೊಯ್ದತ್ತು ಪಕ್ಷಾಗ್ರದಿಂ
ಬಿದಿರ್ದತ್ತೋಕುಳಿಯಾಡಿದತ್ತು ನಿಜತೃಷ್ಣಾಘಾತಕಂ ಚಾತಕಂ ೧೬೯

ಜಲಧರಮುಕ್ತನವ್ಯಜಳಬಿಂದುಗಳಂ ನೆನೆದಾಯ್ದು ನುಂಗಿ ಕ
ಣ್ಮಲರ್ಗಳೊಳೊತ್ತಿಕೊಂಡು ಕುಣಿದಾಡಿದುದುಜ್ವಲಮುಪ್ಪ ಧಾರೆಯೊಳ್
ಗಿಲಿಗಿಲಿಗಂಭವಾಡಿದುದೆಱಂಕೆಗಳಂ ಕೆದಱುತ್ತು ಮುದ್ದಿನಿಂ
ಕೆಲಕೆ ಸಿರಾಕುಳಂ ತೆಗೆದುದಪ್ಪಿದುದೊಪ್ಪಿದುದೊಂದು ಚಾತಕಂ ೧೭೦

ನವನೀಳಾಂಭೋದವಂಭೋದದಿನೆಱಗುವ ಧಾರಾಳಿ ಧಾರಾಳಿಗಳ್ ಸೂ
ಸುವಿನಂ ತಳ್ಪೊಯ್ವ ಜಂಝಾನಿಳನನಿಳನಿನಾಮೋದಮಂ ಪೇಱು ಪೂವೇ
ಱುವ ಕುಂದಂ ಕುಂದದೊಳ್ ತಳ್ತಳಿಗಳಳಿಗಳಂ ಪಣ್ಗಳಿಂ ಗೆಲ್ದ ಜಂಬೂ
ನಿವಹಂ ಚೆಲ್ವಾಗೆ ಚೆಲ್ವಾದುದು ಚಟುಲತಟಿಜ್ಜಾಲವಂಭೋದಕಾಲಂ ೧೭೧

(ಜಗನ್ನಾಥವಿಜಯಂ, ೪–೨೭; ಸೂಕ್ತಿ, ೧೦–೧೯೦)

ನೆರೆದ ಮುಗಿಲ್ ಕಲಂಕುವುದನೀಕ್ಷಿಸಿ ತನ್ನ ಮನಂ ಕಲಂಕಿ ಕ
ರ್ಗಿರೆ ಮಱಿದುಂಬಿವಿಂಡನೊಳಕೊಂಡಿರುಳೊಳ್ ಮುಗಿದಿರ್ದ ಪಾಂಡುಪಂ
ಕರುಹದ ಭಂಗಿಯಂ ತಳೆದು ವಿಸ್ಮಿತಮಾನಸರಾಗಿ ಮಾನಸರ್
ಪರಿಕಿಸೆ ಮಾನಸಕ್ಕೆ ನಡೆಗೊಂಡುದು ಕೂಡೆ ಮರಾಳಮಂಡಲಂ ೧೭೨

(ಸೂಕ್ತಿಸುಧಾರ್ಣವಂ, ೧೦–೧೯೧)

ಮುಗಿಲಿದಿರೇಱಿತ್ ಕಾದಲಲರೇಱಿತ್ ಪೊಲಂ ಪಸುರೇಱಿತ್ ಕಾಡಮ
ಲ್ಲಿಗೆ ನನೆಯೇಱಿತ್ ಮೊಲ್ಲೆ ನಯವೇಱಿತ್ ಬಿಸಿಲ್ ಕಡುದಣ್ಣಸೇಱಿತ್ ಕೇ
ದಗೆ ಸುೞಿಯೇಱಿತ್ ಹಂಸೆ ಭಯವೇಱಿತ್ ನವಿಲ್ ನಲವೇಱಿತ್ ಕಾಮಬಾ
ಹುಗೆ ಜಯವೇಱುದತ್ತು ವಿರಹಿಪ್ರಕರಕ್ಕೞಲೇಱುತಿರ್ಪಿನಂ ೧೭೩

(ಜಗನ್ನಾಥವಿಜಯಂ, ೪–೪; ಸೂಕ್ತಿ, ೧೦–೧೫೩)

ಸಿಳಿಯುದ ಸೂರಿನೊಳ್ ತರದೆ ಮುತ್ತಿನಸೂಸಕದಂತೆ ನಂದನಂ
ಗಳ ತರುಪತ್ರದೊಳ್ ಮುಕುಳಮಂಜರಿಯಂತೆ ಚರತ್ಪುರಾಂಗನಾ
ವಳಿಯ ಕುರುಳ್ಗಳೊಳ್ ತಳೆದ ಸೇಸೆಗಳಂತೆಳೆವುಲ್ಗಳೊಳ್ ಘನೋ
ಪಳಕುಳದಂತೆ ತೋಱುದುವು ನವಘನಚ್ಯುತ ತೋಯಬಿಂದುಗಳ್ ೧೭೪

ಮರಕತರುಚಿಯೊಳ್ ದೂರ್ವಾಂ
ಕುರಮಂ ನಿಶ್ಚೈಸದಿರ್ದ ಮೃಗಶಿಶುಗೆ ಸಗಾಂ
ತರದಲ್ಲಿ ಹರಿಣನಿತ್ತುದು
ಕರುಣಿಸಿ ಸೃಕ್ವೆಯೊಳು ದೂರ್ವೆಯಂ ಕಾರ್ಮೊಗದೊಳ್ ೧೭೫

ದರಿಗೊಂಡೀಡಿಱುದಾಡುತುಂ ಕೊಣಕುತುಂ ಬಾರುತ್ತ ಮೆಲ್ಗೋಡೊಳಾ
ದರದಿಂ ಮೇದೆಳೆವುಲ್ಗಳಿಂ ತೊಱೆದೊಡಂ ಪಾಲ್ಗೆಚ್ಚಲಿಂದೆಚ್ಚು ಪಾ
ಯ್ತುರಪಟ್ಟಿರ್ದುಮೆಬಿಲ್ವ ಕರ್ಣಪರಿಮುಚ್ಚಿರ್ದಕ್ಷಿ ತಳ್ಪೊಯ್ವ ಸುಯ್
ನೊರೆಯಿಂದುಣ್ಮುವ ಸೃಕ್ವನಂಡೆಸೆಯೆ ಮೆಲ್ಕೊತ್ತಿತ್ತು ಕಾಡೆಮ್ಮೆಗಳ್ ೧೭೬

ಅವಿಶಾಲಾಂಬರಮಪ್ರಸನ್ನದಿವಮಸ್ಪಷ್ಟಾಧ್ವಮಸ್ವಚ್ಛತೋ
ಯವನುದ್ಯೋಗಜನೌಘಮಸ್ತ್ರದನಮಸ್ಮೇರಾಬ್ಜಮಶ್ಲಷ್ಣಕೈ
ರವಮಕ್ರೀಡಿತಹಂಸಮಸ್ಫುರಿತ ಚಂದ್ರಾದಿತ್ಯಮಶ್ಲಿಷ್ಣಕೋ
ಕವಯೂನಾಧ್ವಗಮಸ್ವರಾನ್ಯಭೃತಮಂದೊಪ್ಪಿರ್ದುದಭ್ರಾಗಮಂ ೧೭೭

(ಜಗನ್ನಾಥವಿಜಯಂ, ೪-೨೬; ಸೂಕ್ತಿ, ೧೦-೨೧೧)

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱ್ ತುಷಾರಮಿಡುಕುಂಬನಿ ತಂ
ದಲ್ ಸೋನೆ ನಟ್ಟಬಡಪಮೆ
ನಲ್ ಸುರಿದುವು ಬಿಡದೆ ಮೞೆಗಳಿರುಳುಂ ಪಗಲುಂ ೧೭೮

(ಜಗನ್ನಾಥವಿಜಯಂ, ೪-೩೨; ಸೂಕ್ತಿ, ೧೦-೧೯೮)

ಕೆಱೆ ಕಾಲ್ಪುರದಿಂ ತೀವಿರೆ
ಕೆೞೆಗಳ ಕಡೆಗೋಡಿ ಪಳ್ಳಮುಂ ಪಳ್ಳಂಗಳ್
ತೊೞೆಯುಂ ತೊೞೆಗಳ್ ಬಾಂದೊಱೆ
ಯೆಱೆಯನನೊಲವಿಂದೆ ಕೂಡಲಳ್ಕುಱೆ ಪಥಿಕರ್ ೧೭೯

(ಜಗನ್ನಾಥವಿಜಯಂ, ೪-೩೩; ಸೂಕ್ತಿ, ೧೦-೨೨೩)

ಆ ಮಿಂಚಿನೊಳಗಿನಲ
ಪ್ಧಾಮಾಂಬುದನಿಕರದಿಂದೆ ರಸೆ ದೆಸೆ ಗಗನಂ
ತಾನಱಿಯಲ್ಬಾರದವೋ
ಲೇನೆಸೆದುದೊ ತೊರೆದುದಿಳೆಯ ಹರ್ಷಂ ವರ್ಷಂ ೧೮೦

ಮಿಗೆ ಕಾರರಸಂ ಪಗೆ ಬೇ
ಸಗೆಯಂ ಸುರಧನುವಿನಿಂದೆ ಮುಗಿಲಂಬುಗಳಿಂ
ತೆಗೆದೆಸೆಯಲ್ ಬಹುಸರಳವ
ನಿಗೆ ಬೀೞ್ವಂತಿರ್ದುವಂಬುಧಾರಾನಿಕರಂ ೧೮೧

ಜೆಂಗೆಟ್ಟೋಡುವ ಬೇಸಗೆ
ಯಂ ಘರ್ಜಿಸುವಭ್ರಸಮಯನೃಪಘನಮದಮಾ
ತಂಗಾಕುಲದಾನಧಾರಾ
ಭಂಗಿಯನೊಡರಿಸಿತು ಕಟ್ಟಿ ಕಱೆವಾಸಾರಂ ೧೮೨

ಗಗನದಿನೆಱಗುವ ಮೞೆ ನೀ
ನಗಲವೆ ಸಲಹೆಂದು ವರುಷನರಪಂಗಿಳೆಯಂ
ಮುಗಿಲಗಲದ ಹಸ್ತದಿನಾ
ಗಗನಾಂಗನೆ ಧಾರೆಯೆಱೆದ ತೆಱನಾಯ್ತಾಗಳ್ ೧೮೩

ಧಾರೆಗಳವನಿಯನೊಳಪೊ
ಕ್ಕೋರಂತುಚ್ಚಳಿಸಿ ಬೀೞುತಿರೆ ನಭದೊಳ್ ಭೋ
ರ್ಭೋರೆನುತಿರುಳುಂ ಪಗಲುಂ
ಜೋರೆನುತುಂ ತೆಱಪುಗುಡದೆ ಕಱೆದುವು ಮೞೆಗಳ್ ೧೮೪

ಒತ್ತರಿಸುತ್ತಂಬರಮಂ
ಮುತ್ತುತ್ತುಂ ದಿಕ್ಪ್ರಾತನಮಂ ಧರಣಿಯ ತೀ
ವೃತ್ತುಂ ಕತ್ತಲಿಸುತ್ತಂ
ಸುತ್ತುಂ ಜಿನುಗಿದುವು ಸೋನೆಯಿರುಳುಂ ಪಗಲುಂ ೧೮೫

ಮೇಘಂಗಳ್ ಪರಿಗತದ ನಿ
ದಾಘಂಗಳ್ ಕಮಳವಿಮಳಜೀವನಭರಿತಾ
ಮೋಘಂಗಳ್ ಶಿಖಿನಿಕರ
ಶ್ಲಾಘಂಗಳ್ ಕಱೆದವತುಳ ಶೀತಳಜಲಮಂ ೧೮೬

ನೋಡುತ್ತಿರೆ ಸಕಲಜನಂ
ಕೂಡುತ್ತಿರೆ ಚಾತಕಂಗಳಿಳೆ ಜಲದೊಳ್ ತೇಂ
ಕಾಡುತ್ತಿರೆ ಶಿಖಿಕುಲವೆ
ಬ್ದಾಡುತ್ತಿರೆ ತುಱುಗಿ ಕಱೆದು ಸೊಱೆದುವು ಮೇಘಂ ೧೮೭

ವೃಷ್ಟಿಗಳವು ಶಿಖಿಚಾತಕ
ತುಷ್ಟಿಗಳವು ಘನತಟಾಕವಿಮಳನದೀಸಂ
ಘಟ್ಟಿಗಳವು ಜೀವರ್ಕಳ
ದೃಷ್ಟಿಗಳವು ಬಿಡದೆ ಕಱೆದನವನೀತಳದೊಳ್ ೧೮೮

ಸುರಿದುದು ಮೞೆ ತಣಿಯಿತ್ತಿಳೆ
ನೆರೆದುದು ಬೆಳೆ ಕಾನನಂಗಳೊಳ್ ನೆಱೆ ವಿಸಟಂ
ಬರಿದುದು ಹೊಳೆ ನಾಡುದು ಶಿಲೆ
ಧರಿಣಿಯನೆಡಬಿಡದೆ ಪಿಡಿದರಳೆ ಮೞೆಗಾಲಂ ೧೮೯

ಒದವಿದ ಕಾರೊಳದ್ರಿಗಳ ಜೇಗೆ[೧] ತೆರಳ್ಚಿ[೧]ದುದು[೨] ಜೇಡಹು[೨]ಂಡನಾ
ದುದು ಬಿಸಿಲೆೞ್ಗ ಕಟ್ಟೆದುದು ಸಂಬಳಮುಂ ಕಳಹಂಸಮಾಲೆ ಮೆ
ಟ್ಟೆದುದು ತುಡುಂಕಿ ಸೋಗೆ[೩]ಮೞೆ[೩]ಯೊಳ್ ಮಿಡುಕುತ್ತೆಳಮಿಂಚು ಕೆತ್ತಲೆ
ತ್ತಿದುದು ಪಯೋಧಾರಾವಳಿ ತ[೪]ಳರ್ನಡೆ[೪]ಯಿಟ್ಟುದು ಪಶ್ಚಿಮಾನಿಳಂ ೧೯೦

(ಅನಂತನಾಥಪುರಾಣಂ, ೯-೫; ಸೂಕ್ತಿ, ೧೦-೧೮೫)

ಮುತ್ತುದು ನೇಸಱ ತೇಜಂ
ಸತ್ತುದು ದಾವಾಗ್ನಿ ಪಡುವದೆಸೆ ಮೞೆಮುಗಿಲಂ
ಪೊತ್ತುದು [೫]ಕಡಲಿನ ಕಂಪಂ[೫]
ಪೆತ್ತುದು ಮಧುಕರಕುಳಕ್ಕೆ ಪಶ್ಚಿಮಪವನಂ ೧೯೧

(ಸೂಕ್ತಿಸುಧಾರ್ಣವಂ, ೧೦-೧೮೮)

ಎೞ್ದುದು ತಣ್ಣೆಲರ್ ವರುಣದಿಙ್ಮುಖದಿಂದದೞೊಂದೆ ಕಿಟ್ಟದಿಂ
ಬೞ್ದುದು ತೃಷ್ಣೆಯಿಂದಿೞಿದ ಚಾತಕ ಚಾತಕಚಿತ್ತಮೆಕ್ಕೆಯಿಂ
ಬಿೞ್ದುದು ಬಟ್ಟೆ ಸಂಬಳಕೆ ಬಾಳಮೃಣಾಳಮನಂಚೆ [೬]ತಣ್ಪೊಲ[೬]ಂ
ಬೇೞ್ವುದು ಕೂಡೆ ಧಾತ್ರಿ ಮೃಗಶೀರ್ಷವಿಭಾಗಮನರ್ಕನಾಳ್ವುದುಂ ೧೯೨

(ಸೂಕ್ತಿಸುಧಾರ್ಣವಂ. ೧೦-೧೮೯)

ಸ್ಫುರಿತ ತಟಿತ್ಪ್ರಭಾಪ್ರತತಿ ಕೞ್ತಲೆಯಂ ಸುರಗೋಪಕಾಂತಿ ಪಾಂ
ಡುರತೆಯನಂಬುವಾಹತತಿ ಶೋಷಣಮಂ ಘನವಾರಿಧಾರೆ ನಿ
ಷ್ಠುರಪರಿ[೭]ಕಾಲ್ಪೆಯುಂ[೭] ಕುಟಜಕುಂದ ನವೋದ್ಗಮರಾಜಿ ರಾಗಮಂ
ವಿರಹಿಜನಕ್ಕೆ ಮಾಡಿದುದು ನೋಡುವೊಡೆಯ್ದೆ ವಿರುದ್ಧಮೆಂಬಿನಂ ೧೯೩

(ಕಾದಂಬರಿ ಉ.ಭಾ, ೫೩೪; ಸೂಕ್ತಿ, ೧೦-೧೯೫)

---

[೧]ತಗುಳ್ಚಿ(ಸ) [೨]ದೊಡುವಮುಂ(ಸೂ) [೩]ಮೊಳೆ(ಸೂ) [೪]ಳಿರ್ದಡೆಯು(ಸ) [೫]ಕವಲಿನತಂಪಂ(ಸೂ) [೬]ತಣ್ಪೆಲರ್(ಸೂ) [೭]ತೋದಮುಂ(ಸೂ)

ಪಸುರ್ವುಲ್ಲಂ ಮೇದು ಸಂದೊಂದೆಡೆಯೊಳವೊಡಲಿಂಬಿಲ್ಲೆನಲ್ ಕೊರ್ಬ್ಬಿ ಕೆಚ್ಚಲ್
ಕುಸಿವನ್ನಂ ಬೀಗಿ ಪಾಲಂಬರಿವಿಡೆ ಮೊಲೆಯಿಂ ವತ್ಸಪಿತಾವಶೇಷಂ
ಪೊಸಗಾರೊಳ್ ತಾಱಲೊಳ್ ಕಣ್ಮಲರ್ ಮುಗುಳ್ದಿರೆ ಸೃಕ್ವಂಗಳಿಂ ಸೂಸೆ ಫೇನ
ಪ್ರಸರಂ ಪೆಲ್ಮೊತ್ತ್ತತುಂ ನಿಂದುದು ವನಮಹಿಷೀವೃಂದಮಾನಂದದಿಂದಂ ೧೯೪
(ಪಂಪರಾಮಾಯಣಂ, ೭-೫೭; ಮಲ್ಲಿನಾಥಪುರಾಣಂ, ೮ ೯೯; ಸೂಕ್ತಿ ೧೦-೧೯೬)

ತಿಪುವಿಲ್ಲದ ಸುರಧನುವಂ
ಸುರಭಿಶರಂ ಗೆಲ್ದು ಮತ್ತೆ ಕೂರಂಬುಗಳಿಂ
ಬರಹಿಗಳೆಂದು ರತಿಪತಿ
ವಿರಚಿಸಿದಂತಿರ್ದುವೆೞ್ದು ಕಳ್ಳನ ಕೊಡೆಗಳ್ ೧೯೫
(ಸೂಕ್ತಿ ಸುಧಾರ್ಣವಂ, ೧೦-೨೦೪)

ಒಡಪಂ ಬೆಂಬತ್ತೆ ಪೇಪಂ ತೊಱೆದು ಬಿಡದೊಡಲ್ಕೂಡಿ ತನ್ನಿಚ್ಚೆಗೆಟ್ಟೊ
ೞ್ಪೊಡೆಯೊಳ್ ಬೆಚ್ಚಂತೆ ಬಾಲಂ ನಿಲೆ ನವಿರೊಡೆದುರ್ವೆೞ್ದು ಬೆಂಡಾಗಿ ಕಾಲೊಳ್
ನಪುಕಂ ವೈಪೆರ್ಚೆ ಗಂಟಲ್ ಕುಸಿದು ಕಿವಿಯೆೞಲ್ತಂದು ನಿಂದಿರ್ದುದೋರೊಂ
ದೆಡೆಯೊಳ್ ನಾನಲ್ಗಿಳೊತ್ತಂಬಿಡಿದು ಮೃಗಮೃಗೀವೃಂದಮೋರಂದದಿಂದಂ ೧೯೬
(ಚಂದ್ರಪ್ರಭಪುರಾಣಂ, ೪-೪೭; ಸೂಕ್ತಿ, ೧೦-೨೦೮)

ಹೆೞವುಗೊಳಿಸಿತ್ತು ಜನಮಂ
ಮೞೆಗಾಲಂ ತೀವ್ರಪವನನಿಂ ದುರ್ದಿನದಿಂ
ಮೊೞಗಿಂ ಸಿಡಿಲಿಂ ಮಿಂಚಿಂ
ಮೞೆಯಿಂ ದೆಸೆದೆಸೆಗೆ ಪರಿವ ಪೊನಲಿಂ ಕೆಸಱಿಂ ೧೯೭

ಇನಸಿದಿರೇೞ್ವ ಕಾರ್ಮುಗಿಲ ಬಾಧೆಗೆ ಬೀೞ್ದನೊ ತಕ್ತ ಒಳ್ಳಿಮಿಂ
ಚಿನ ಬಲೆಯುಲ್ಲಿ ಸಿಲ್ಕಿದನೊ ಪೊಯ್ವ ಸಿಡಿಲ್ಗೊಳಗಾಗಿ ನೊಂದನೋ
ಘನಜಲಧಾರೆಯೊಳ್ ಕರಗಿಪೋದನೊ ತನ್ನನೆ ಕಾಣನೆಂದು ಪ
ದ್ಮಿನಿ ನಲವೋಡಿ ತನ್ಮಧುಕರಧ್ವನಿಯಿಂದೆ ಪಲುಂಬಿ ಪಾಡಿದಳ್ ೧೯೮
(ಸೂಕ್ತಿಸುಧಾರ್ಣವಂ, ೧೦-೨೧೦)

ಕೆಸಱೊಳ್ ಜಾಱುವ ಜಾಱು ಬೀೞ್ವ ಮೞೆಯೊಳ್ ಪ್ಪೆನಾಂಬ ನಾಂಬೊಚ್ಚತಂ
ಬಸಿಯುತ್ತಿರ್ಪ ಜನಂಗಳಂ ಸುರತಲೀಲಾಗೇಹನಿರ್ವ್ಯಾಹದು
ದ್ದಿಸದೊಳ್ ತಳ್ಕಿಸಿ ಸಂತಪಿರ್ದಿನಿಯರೋರೊರ್ವರ್ಗೆ ಕಣ್ಣೆತ್ತಿ ತೋ
ಱಿ ಸಖೀಸಂಗತಹಾಸ್ಯದಿಂ ನಲಿಯೆ ರಮ್ಯಂ ತಪ್ಪಯೋದಾಗಮಂ ೧೯೯
(ಸೂಕ್ತಿಸುಧಾರ್ಣವಂ, ೧೦-೨೧೨)

ಜಂಭಾರಿಯ ಪೇಘದೊಳಂ
ಕುಂಭಿನಿಯಂ ಸಲಹಲೆಂದು ಗಗನದಿನಿೞಿಯಲ್
ಕುಂಭೀನಸಗಳ ಬಿಟ್ಟೊಲ್
ಕುಂಭದ್ರೋಣಂಗಳಾಗಿ ಸುರಿದುವು ಮೞೆಗಳ್ ೨೦೦

ನೆಗೆದು ಮುಗಿಲೆಂಬ ನೀಲಾ
ದ್ರಿಗಳಂ ನಿರ್ಝರಮೆ ಸೂಸಿ ಸುರಿದಪುದೆಂಬ
ನ್ನೆಗಮಂತರಿದುವು ಪೆರ್ಮೞೆ
ಜಗಮೆಲ್ಲಂ ಸಲಿಲಪೂರದಿಂ ತೇಂಕುವಿನಂ ೨೦೧

ವಿಕಚಾಂಭೋರುಹಷಂಡಮುನ್ಮದಮರಾಳಾನೀಕಮುತ್ಫುಲ್ಲ ಚಂ
ಪಕಮಾಕಂದಮಹೀಜಮುಜ್ವಳವಿಯತ್ಪ್ರಂಗಂ ಸ್ಫುಟತ್ಕೋಕಿಳ
ಪ್ರಕಟಾರಾವಪರಂಪರಾಪರಿಗತಾಶಾಕುಂಜಮುಕ್ಷೀಬಕೇ
ಕಿಕದಂಬಂ ಜಗತೀಜನಕ್ಕೆ ಪಡೆದತ್ತಭ್ರಾಗಮಂ ರಾಗಮಂ ೨೦೨

(ಕಾವ್ಯಾವಲೋಕನಂ, ೪೭೨)

ಪರೆದ ಕಚಂ ಮುಗಿಲ್ ಕರತಳಾಹತಿಯಿಂ ಪಱಿದೊಕ್ಕ ಮೌಕ್ತಿಕಾ
ಭರಣದ ಮುತ್ತುಮಾಲಿವರಲಾ ಸುಗಳಧ್ವನಿ ಮೇಘನಿಸ್ವನಂ
ಸುರಿವ ಬೆಮರ್ ತಗುಳ್ದ ಮೞೆ ಕಾಮರಸಂ ಪೊನಲಾಗೆ ಕಾದಲರ್
ನೆರೆವೆಡೆಂಪೊಳ್ ಮನೋಭವನ ಸೃಷ್ಟಿವೊಲಾದುದಪೊಂದು ಕಾರ್ಗಂ ೨೦೩

(ಸೂಕ್ತಿಸುಧಾರ್ಣವಂ, ೧೦–೨೧೩)

ಬಂದಪೆನೆಂದು ಪೋದನಿನಿಯಂ ಜಲದಾಗಮನಕ್ಕೆ ಕಾರ್ಮುಗಿಲ್
ಬಂದುದು ಶಕ್ರಚಾಪಲತೆ ಬಂದುದು ಪೆರ್ಚಿದ ಸೋಗೆಯಿಂಚರಂ
ಬಂದುದು ಚೆಲ್ವನೆತ್ತು ನಭದೊಳ್ ಪೊಳೆದೊಪ್ಪುವ ಬಳ್ಳಿಮಿಂಚು ತಾಂ
ಬಂದುದು ಬಂದನಿಲ್ಲ ಪತಿಯೆಂದು ಲತಾಂಗಿ ಪಲುಂಬಿ ಪಾಡಿದಳ್ ೨೦೪

(ಸೂಕ್ತಿಸುಧಾರ್ಣವಂ, ೧೦–೨೧೪)

ಎಳೆವೆರಲ್ ನಿಂದಿರ್ ಸವಿರಾಲಿ ಲೋಲನಯನಂ ಗೀರ್ವಾಣಬಾಣಾಸನಂ
ನಳಿತೋಳಾಡುವ ಸೋಗೆ ಸೋರ್ಮುಡಿ ಪೊನಲ್ ರೋಮಾಳಿ ಮಿಂಚೋಲೆ ಪಲ್
ಜಳದಂ ಪೆರ್ಮೊಲೆ ಶಕ್ರಚಾಪವದನಂ ತಾನಾಗೆ ಕಾರೆಂಬನ
ಪ್ಪೆಳೆ ಬಪ್ಪಂತತಿಕಾಮುಕರ್ಗೆ ಮನದೊಳ್ ಮಾಡಿತ್ತತಿಪ್ರೀತಿಯಂ ೨೦೫

ವಿಲಸಿತ ಕಂಪಳಂ ವಿನಿಪತತ್ಕರಕಂ ಕ್ಷುಭಿತೋರುವಾಹಿನೀ
ಕುಳನಿನದಂ ಗಳತ್ ಸರಸಮುಗ್ರಮುದಗ್ರಸಪರ್ವಚಾಪಮುಂ
ಡಳಲಲಿತಾಂಬರಂ ವಿಹರಿರಶ್ಮಿ ಸಮುತ್ಕರದಂಡಗುರ್ವದೇಂ
ತಳೆದುದೊ ಪೋಲ್ತು ಯುದ್ಧಸಮಯಾಂತರಮಂ ಜಲದಾಗಮಕ್ರಮಂ (?) ೨೦೬

ವಿದಳಿತಮಾದ ಕಂಟಕಕದಂಬದಿನುರ್ವಿದ ವಾಹಿನೀಸಮೂ
ಹದಿನಭಿವೃದ್ಧಿವೆತ್ತ ಭುವನಾಶ್ರಯದಿಂ ಬಗೆಗೊಳ್ವ ಕುಂದದ
ಭ್ಯುದಯದಿನೇೞ್ಗೆಗೆಟ್ಟಳಿಪಿ ಪೋದ ಮಹೋದ್ಧತ ರಾಜಹಂಸತೇ
ಜದಿನೆಸೆದತ್ತು ರಾಜವಿಭವಂ ಜಳದಾಗಮ ಚಕ್ರವರ್ತಿಯಾ

ತೊರೆದಾಕಾಶಾಂಬರಂ ನೀರ್ವನಿ ಜಡೆದುಱುಗಲ್ ಮುತ್ತದಂತಾಲಿಕಲ್ಲಾ
ಗಿರೆ ನೀಲಂ ಮೇಘದೇಹಂ ಮೊೞಗು ಡಮರುಗಂ ಮಿಂಚು ಚಂಚತ್ತ್ರಿಶೂಲಂ
ಸ್ಫುರಿತಂ ಕಣ್ಗೊಪ್ಪಿ ತೋರ್ಪ ಸುರಧನು ಕಟಿಯಿಂ ಕಟ್ಟಿದಾ ವ್ಯಾಘ್ರಚರ್ಮಾಂ
ಬರ ತಾಂ ಕಾಲಾರಿ ನಿಂದಂ ಪುಟ್ಟಿಯೆನಿಪಭವಂ ಧಾತ್ರಿಯಾಧಾರದಿಂದಂ ೨೦೮

ತವೆ ಮುಂ ತೀರ್ದ ನಿದಾಘಸಲ್ಲಕಿಯನಾದಿತ್ಯೇಂದು ಪಿಂಡಂಗಳಂ
ಕವಳಂಗೊಂಡು ಸಿಡಿಲ್ಗಳೆಂಬ ಕಿಸುಗಣ್ ಬಿಟ್ಟಾಸುರಚ್ಚಾಪಮೆಂ
ಬ ವಿಚಿತ್ರಾಂಬರಮೆಂಬ ಚಿನ್ನಮಿಳಿಯುಂ ಮಿಂಚೆಂಬ ಕೊಂಬಿಂ ಕರಾ
ಳವೆನಲ್ ಘರ್ಜಿಸಿದತ್ತಗಲ್ದಿನಿಯರಂ ಕಾರೆಂಬ ಮಾರದ್ವಿಪಂ ೨೦೯

ಉಗುೞುತ್ತುಂ ಸಿಡಿಲೆಂಬ ತೋರಗಿಡಿಯಂ ಕಾಲಾಜಿ ಭೂಭಾಗದೊಳ್
ಗಗನಾಭೋಗಮನೆಯ್ದೆ ನೀಳ್ದ ಘನವೇಣೀಬಂಧನಂಗೆಯ್ದು ಮಿಂ
ಚುಗಳೆಂಬುಳ್ಕುವ ದಾಡೆಗಳ್ ಪೊಳೆಯೆ ಚಂದ್ರಾದಿತ್ಯರಂ ನುಂಗಿ ಬೇ
ಸಗೆಯಂ ಬೆರ್ಚಿಸಿ ಘರ್ಜಿಸುತ್ತಮೊಗೆದಂ ಕಾರೆಂಬ ಕಾಳಾಸುರಂ ೨೧೦

(ಪಂಪರಾಮಾಯಣಂ,೭-೧೫; ಮಲ್ಲಿನಾಥಪುರಾಣಂ, ೮-೯೪; ಸೂಕ್ತಿ, ೧೦-೧೮೮)

ಎಳಮಿಂಚಂ ತಳೆಯಿಕ್ಕಿ ಚಾದಗೆಗಳಂ ಬಿಟ್ಟೋಡಿ ಬಲ್ಗೆಚ್ಚಲಿ
ಟ್ಟೆಳನೀಳಾಂಬುದದಿಂ ಬೞಿಲ್ವಗಗನಶ್ರೀಧೇನುವಂ ಕೋಮಳಾ
ಮಳದೀರ್ಘಾಮೃತಧಾರೆಗಳ್ ಸುರಿಯೆ ಭೋರ್ ಭೋರೆಂಬಿನಂ ಶಕ್ರಚಾ
ಪಲತಾದಾಮಕದಿಂದೆ ಕಟ್ಟಿ ಕಱೆದಂ ಕಾರೆಂಬ ಗೋಪಾಲಕಂ ೨೧೧

(ಸೂಕ್ತಿಸುಧಾರ್ಣವಂ, ೧೦-೧೮೯)

ಸೂಡಿದ ಕೇತಕಂ ಪಱಿತಯ ನೆಲ್ಲಿನ ಭೋಜನ ಪಟ್ಟುವಸ್ತ್ರ ಕಂ
ಪೂಡಿದಗಿಲ್ ಕದಂಬ ಬಿಸಿನೀರಿನ ಪಾನಕಮುಂ ಗವಾಕ್ಷಿಯೊಳ್
ಬೀಡು ಕುಮಜ್ಜನಂ ಮಿಗಿಲು ಧೂಪ ಮಯೂರನ ನಾಟ್ಯವೀಕ್ಷಣಂ
ಕೊಡುವ ಮುಗ್ಧತಿಂಗಳೊಳು ಭೋಗಿಗಳಿರ್ಪರು ವರ್ಷಕಾಲದೊಳ್ ೨೧೨

## ಶರದೃತು ವರ್ಣನೆ :

ತೊಲಗದ ಮೋಡಮೋಡಿದುದು ತಂದಲಗುಂದಲೆಯಾಯ್ತು ಮೇಘಮಂ
ಡಳವಳಱತ್ತು ಮಿಂಚುಮೆಳಗುಂ ಚಿರಮಾಯ್ತು ಶಿಖಂಡಿ ತಾಂಡವ
ಕ್ಕಲಸಿದುದೆಯ್ದೆ ಕುಂದಲತೆ ಕುಂದಲೊಡರ್ಚಿದುದಂಚೆ ಚಂಚುವಿಂ
ನಲಿದು ಮೃಣಾಳಮಂ ಸವಿದುದಾಯ್ತು ಶರತ್ಪ್ರವೇಶದೊಳ್ ೨೧೩

ಚಾದಗೆಯು ಸೊರ್ಕು ತೀರ್ದುದು
ಕೇದಗೆಯುಗೆಯೆತ್ತಿಪೋಯ್ತು ಗಿರಿಮಲ್ಲಿಗೆಯಾ
ಮೋದಂ ಕಱಿದುದು ದರ್ಬಿಸಿ
ಪೋದುದು ನುಣ್ದನಿ ನವಿಲ್ಗೆ ಶರದಾಗಮದೊಳ್ ೨೧೪

(ಸೂಕ್ತಿಸುಧಾರ್ಣವಂ, ೧೦-೨೨೬)

ಮಱಿತಯಿನ್ನೆತ್ತಣಪೆಂಬಿನಂ ಬೆಳಗುಗುಂ ಬಾನೊರ್ಮೆ ಮತ್ತೊರ್ಮೆ ಪೆ
ರ್ಮಱಿತ ಕೊಳ್ಗಂ ರವಿಕೂಡೆ ಮೂಣ್ದ ಮುಗಿಲಿಂ ಸೆಳ್ದಂಡದಿಂದಂ ಬಿಸಿಲ್
ಕಳೆಗೊಳ್ಗುಂ ಗಿಳಿ ಸೋವ ಪಾಮರಿಯರಂ ಕೈಮೀಱ ಕೀರವ್ರಜಂ
ಸುಱಗುಂ ಶಾಡ್ವಳಮಾದ ಶಾಳಿವನಪೊಳ್ ನೀರಾಜನಂ ಮಾಳ್ಪವೋಲ್ ೨೧೫

ನಡೆದುದು ಬಿಟ್ಟಿ ಬಟ್ಟೆಯು ಕೆಸಱ್ ಪಱದಿರ್ದುದು ನಂದನಂ ನಯಂ
ಬಡೆದುದು ಪೂಗೊಳಂ ತಿಳಿದುದಭ್ರಪಥಂ ಬೆಳಗಿತ್ತು ಪಕ್ಷಮು
ರ್ಕುಡಿದುದು ಕೂಡೆ ಕೊಂಬೆ ಸಸಿಯೋದುವು ಕೆಯ್ ಪಸುರ್ಪೇವ ಪುಲ್ಗಳಿಂ
ಬಿಡಿದುವು ಶಾಳಿಗಾಪಿಯರ ಗಾವರಮಬ್ಬರಮಾಯ್ತು ಸುತ್ತಲುಂ ೨೧೬

ಇಳೆ ಬೆಳಗಿತ್ತುವಾಗಸಮುದಚ್ಛತೆಯಿಂ ತೊಳಗಿತ್ತು ದಿಕ್ತಯಂ
ಕಳಕಳಿಸಿತ್ತು ಹಂಸೆ ಸುಱದತ್ತುಱ ತುಂಬಿದ ತನ್ನದೀಜಲಂ
ಕೆಳಗಿಱದತ್ತು ತಣ್ಗೊಳರಸಂ ತಿಳಿವತ್ತು ಜನಾನುರಾಗದಾ
ಕೆಳೆ ಬಿಳದತ್ತು ನೋಡೆ ಶರದುನ್ನತಿಯಿಂದೊಡೆ ಚೆನ್ನದಾವುದೋ ೨೧೭

ಜನವನುರಾಗವೇಱೆ ಪೊಱಮಟ್ಟು ಕೃಷಿವ್ಯವಸಾಯವೃಂದಮಂ
ಮನದೊಲವಿಂದೆ ಮಾಡುತಿದೆ ಕೋಟರದಿಂ ನೆಗೆತಂದು ಪಕ್ಕಿಗಳ್
ಕೊನೆದಳಿರ್ಗೊಂಬಿನೊಳ್ ಬಿಸಿಲನಾಂತಿವೆ ಹಂಸಕುಳಂ ಬನಂಗಳಿಂ
ದನುವಿಸಿ ಕೂಡೆ ಪೊಣ್ಮುತಿವೆ ಪಾರ್ವತಿ ನೋಡು ಶರದ್ವಿಲಾಸಮಂ ೨೧೮

ತರದಿಂ ನಲಿನಲಿದಾಡುವ
ಶರದದ ಮಕ್ಕಳವೊಲಂಚೆಗಳ್ ಮಾನಸದಿಂ
ಬರೆ ಮೆಱೆದು ಶರದದವನಿಪ
ನರಮನೆಯಂಗಣಮಿದೆನಿಸಿ ಬೆಳಗಿತು ಗಗನಂ ೨೧೯

ಪಿಂದೆ ತಲೆಕೆಡದ ಕದಿರ್ಗಳ್
ಸಂದಣಿಗೊಂಡರ್ಕಬಿಂಬದಿಂ ಪೊಱಪೊಣ್ಮು
ತ್ತೊಂದೊಂದನೊಱಸಿ ಕಿಡಿವಿಡು
ವಂದದೆ ಕಡುವಿಸಿಲ ಪೊಳೆಪುವಡೆದುದು ಕಾಯ್ಪಂ ೨೨೦
(ಲೀಲಾವತಿ, ೫–೩೮ ಸೂಕ್ತಿ ೧೦–೨೦೨)

ಮುನ್ನಂಗಿ ದಹನನಂ ತಪ
ನನ್ನೆಲಕುಗುೞ್ವಂತೆ ಬಿಸುಗದಿರ್ಗಳ್ ನೆಱೆ ಕಾ
ಯ್ವನ್ನಂ ಸುಡುತಿರೆ ಪಥಿಕರ್
ಬೆನ್ನಂ ಕೊಂಡೋಡಿ ಮೆಳೆಯ ನೆೞಲಂ ಸಾರ್ದರ್ ೨೨೧
(ಲೀಲಾವತಿ, ೫–೪೦; ಸೂಕ್ತಿ, ೧೦–೨೩೩)

ತಿಂಗಳ ಜವ್ವನ ವಿಭವಮ
ನಂಗನ ಸಿರಿಹುಟ್ಟಿದಮೃತವಾರಾಶಿ ಚಕೋ
ರಂಗಳ ಕಂಗಳ ಹಬ್ಬಂ
ಶೃಂಗಾರಂಬಡೆದ ಸೈಪು ಶರದದ ಜೊನ್ನಂ ೨೨೨

ಮಿಗೆ ತಂಗದಿರಬೆಡಂಗಂ
ಸೊಗಸುವ ಲೋಕೈಕಮಿತ್ರನಂಗದ ಮಿನುಗಂ
ತಗದಿರ್ದ ಘನದ ಕೇಡಿಗೆ
ನಗುತಿರ್ಪುವು ಕುಮುದ ಕಮಲವಿರುಳುಂ ಪಗಲುಂ ೨೨೩

ಹಿಂದೆಮ್ಮನಟ್ಟಿದಂಬುದ
ವಿಂದು ಮಹಾಜಲದೊಳಡಗೆ ಬಿಡೆವೆಂದಱಿಸುವ
ಚೆಂದವೆನಲಂಚೆ ಮಾನಸ
ದಿಂದಾಗಸವಡರ್ದು ಸಾರ್ವುವಾ ಸರಸಿಗಳಂ ೨೨೪

ಸ್ಮರಕರಿಯಾಡುವಾ ವಿಪಿನಮಂಗಜಬಾಲಮರಾಳನೊಪ್ಪುವಾ
ವರನದಿ ಕಾಮಕೀರನೆರಪಪ್ರತಿಶಾಲಿಯನಂಗಕೋಕನಾ
ಸರಸಿ ರತೀಶನ ಕೋಕಿಳನ ಕೂಗುಗಹೋ ನೆಲವೀವ ಸದ್ವನಂ
ಶರದನಿನೊಪ್ಪುವಾಯತಮದೇಂ ಮಧುರಾಜನೊ ಚಂದ್ರಶೇಖರಾ ೨೨೫

ಸ್ಥಿರಶರತ್ಕಾಲರಜಕಂ
ವರುಷದೆ ಮಾಸಿರ್ದ ಮೇಘಪಟಮಂ ಬಾಂದೊಱೆ
ಯುರುಜಲದೊಳೊರಸಿ ತೊಳೆಯಲ್
ವರಸಿತಮಾದಂತೆ ಬೆಳ್ಮುಗಿಲ್ಗಳ್ ಮೆಱೆಗುಂ ೨೨೬

ನೋಡೆ ಮಹಾಬಿಲದೊಳ್ ತಿರು
ಗಾಡುವ ಘನಸರ್ಪರಾಜಿ ಪೊರೆಯುರ್ಚುವವೊಲ್
ಕೂಡೆ ಕಂಗೆಡ್ಡಮಾದುವೊ
ನೀಡೊಡೆಯದೆ ಬೆಳ್ಮುಗಿಲ್ಗಳಂಬರತಳದೊಳ್ ೨೨೭

ಉಂಡ ವಿಷಂಗಳೊಲ್ದುಗುೞಲಾ ವನ ಶುಭ್ರಮೆ ತೋಱುತೋ ಲಸ
ಚ್ಚಂಡಕರಸ್ವಪಾದರಜವಾವರಿಸುತ್ತಮೆ ಗಾಳಿಗೊಡ್ಡಲಾ
ಪಾಂಡುರಮಾಯ್ತೊ ನಾಡೆ ಶರಧೀಶ್ವರ ನಿಟ್ಟಿಸೆ ಪೂರ್ವಕಶ್ಮಲಂ
ಖಂಡಿಸಿ ನಿಂದ ಪುಣ್ಯದಿರವೋಯೆನೆ ತೋಱುದುದಭ್ರದಾ ಸಿತಂ ೨೨೮

ಮೞೆಗಾಲದಲ್ಲಿ ವಿಷಮಂ
ಜಲಧರತತಿ ಕಱೆಯೆ ಕೇಳ್ದು ಶರದದ ಮುಗಿಲ್ಗಳ್
ಇಳೆಗೆ ಕೇಡಾಗದಂದದೆ
ಗೞಲನೆ ಸುಧೆಗಱೆವ ತೆಱದೆ ಬೆಳ್ಸರಿ ಸುರಿಗುಂ ೨೨೯

ರವಿಕಿರಣಂ ನೀರೂಡು
ತ್ತಿವೆ ತಣ್ಪಂ ಬೀಱುತಿವೆ ರಥಾಂಗಕುಲಂಗಳ್
ತವೆ ತಣ್ಪಿಸಿಲೊಳ್ ನಿಂದಿ
ರ್ದಿವೆ ಮೇಘಂ ಹಿಂಡಿ ಹರಹಿದಂತಿವೆ ನಭದೊಳ್ ೨೩೦

ಪರೆದವು ಪಯೋಧರಂಗಳ್
ಬರುತಿವೆ ಕಳಹಂಸಮಾಲೆ ಬಿಸಿಲೊಳ್ ವಿಹಗಂ
ನೆರೆದಿವೆ ಮೃಗಸಂತತಿ ಗ
ರ್ಹ್ವರದಿಂ ಪೊಱಮಟ್ಟು ಮೇವುತಿವೆಯೆಳವುಲ್ಲಂ ೨೩೧

ತಿಳಿದುವು ದೆಸೆಗಳ್ ಹಂಸಾ
ವಳಿ ಸಾರ್ದುವು ಪೂರ್ಣಸರಸಿಯಂ ಬಿಸಕಂದಂ
ಮೊಳೆಯೋದುವು ಸಲಿಲಂ ನಿ
ರ್ಮಳವಾದುವು ತಳೆದುದಾಗಸಂ ಧವಳತೆಯಂ ೨೩೨

ತುಱುಗಿರ್ದ ನೀಲಮೇಘದ
ತುಱುಗಲ್ ನೆಱೆ ಪೊಂಗಿ ಪೋಗೆ ತೆಱಪಾದುದಱಿಂ
ಜೆಱಗಿದಳಿಪಟಲ ಪೋಗಲ್
ತೆಱಪಾದುತ್ಪಲವನಂಬೊಲಿರ್ದುದು ಗಗನಂ ೨೩೩

ಲವಣಾರ್ಣವಮಂ ದುಗ್ಧಾ
ರ್ಣವದೊಳ್ ತೆಱೆಮಾಲೆ ಮುಸುಕಿದಂ
. . . . ಯೆನಿಪ ಘನಧ್ವಾ
ನವನಡರ್ದುವು ಶರದಮುಗಿಲ್ಗಳತಿಧವಳಂಗಳ್ ೨೩೪

ರವಿಹಯಲಾಲಾಪಿಂಡಂ
ದಿವಿಜನದೀಫೇನಮಾಲೆ ರಾಹುವ ಸಿರ್ಮೋ
ಕವಿಡಂಬಿನಮಲ್ಲಲ್ಲಿಗೆ
ಧವಳಾಂಬುದಪಟಲಮೆಸೆದುದಂಬರತಳದೊಳ್ ೨೩೫

ದರಿಯಂ ಮೀಱಿರ್ದ ನೀರೊಳ್ ತಿಳಿತೆಱೆ ತೊಱೆಗೆಲ್ಲಂ ಪುಟಿಲ್ವಚ್ಚೆ ಮೆಯ್ದೋ
ಱಿರೆ ಶೈವಾಳಂ ಶಿಲಾಕೋಟಿಯೊಳೆಸೆಯೆ ಶರತ್ತಾಪಸಂಪತ್ತಿಯಿಂದಂ
ತರುಗಳ್ ನೀರ್ವೊಕ್ಕವೊಲ್ ತೀರದ ತರುಪಟಲಚ್ಛಾಯೆ ನೀರೊಳ್ ಬೆಡಂಗಾ
ಗಿರೆ ತತ್ತ್ವಾವಾಸಚಿತ್ರಕ್ಕೆಣೆಯೆನೆ ತಿಳಿದತ್ತಂದು ಸಿಂಧುಪ್ರತಾನಂ ೨೩೬

ಮಾನಸದಿಂ ಸಿತಾಂಬುಜಚಯಕ್ಕಳುರ್ವಂತೆವೊಲೆಯ್ದಿ ನೀರದ
ಸ್ಥಾನದೊಳಿರ್ದ ಬೆಳ್ಮುಗಿಲಮಕ್ಕಳ ತಂಡದವೊಲ್ ನಿಜಪಾಂಡುದೇಹಸಂ
ತಾನಕವಭ್ರದೊಳ್ ಮಿಱುಗೆ ಬಂದೆಱಗಿತ್ತು ಕೊಳಂಗಳೊಳ್ ತಟೀ
ಫೇನವಿತಾನವಾತ್ಮರುಚಿಯೊಳ್ ತೊಡವಾಗೆ ಮರಾಳಮಂಡಲಂ ೨೩೭

ಪಿಂಗಳವಾದ ನೆಲ್ಲತೆನೆಯಂ ನಲಿಗರ್ಚಿದ ರಕ್ತಚಂಚು ಪ
ಕ್ಷಂಗಳ ಶಾಡ್ವಲಚ್ಛವಿ ಮನಂಗೊಳೆ ಪಾಱುವ ಕೀರ್ಣಮಾಲೆ ರೋ
ದೋಂಗಣವೆಂಬ ಪಟ್ಟಣದೊಳೊಪ್ಪುವ ಬೆಳ್ಮುಗಿಲೆಂಬ ಬಳ್ಳಿಮಾ
ಡಂಗಳ ಪೊನ್ನ ಮಾಣಿಕದ ಪಚ್ಚೆಯ ತೋರಣದಂತೆ ರಂಜಿಕುಂ ೨೩೮

ವಾರಿಧಿಯೊಳುಳ್ಳ ನೀರಂ
ಕಾರಮುಗಿಲ್ ಕಱೆದು ಪೋಗಲುೞಿದಾ ಮುತ್ತಂ
ಶಾರದ ಮೇಘಾವಳಿ ತಂ
ದೋರಂತಿರೆ ಕಱೆದುದೆನಿಸಿದುವು ಬೆಳ್ಸರಿಗಳ್ ೨೩೯

ನೀರಧಿಯ ನೀರ್ಗೆ ದೋಷಾ
ಕಾರದ ಮುಗಿಲ್ ಮರಳೆಪೆಂದು ಶರದಭ್ರಂಗಳ್
ಸಾರಿರ್ದ ಗಗನಗಂಗೆಯ
ನೀರಂ ಕಱೆವಂತಿರೆಱಗಿದುವು ಬೆಳ್ಸರಿಗಳ್ ೨೪೦

ಶರದಭ್ರಕುಸುಮತರುಗಳ್
ಮರುದಾಹತಿಯಿಂ ಪರಾಗಪಾಂಸುಪ್ರಸರಂ
ಬೆರಸಲರಂ ಸುರಿದಪವೆನೆ
ಸುರಿವ ಬಿಸಿಲ್ಮೞೆಗಳೆಸೆವುತಿರ್ದವು ನಭದೊಳ್ ೨೪೧

ಮದಜಳೆಯಾಗಿ ನೀರ್ವೊಗೆವ ಖೇಚರಕಾಂತೆಯ ಹಸ್ತದಿಂ ಕೞ
ಲ್ಚಿದ ನವರೌಪ್ಯಕುಂಭಮೆ ತರಂಗಿತಮಾಗಿ ತರಂಗಿಣೀಪ್ರವಾ
ಹದೊಳಡೆ ಕಾಣಲಾದಪುದೆನಲ್ ನಿಱುಗೋಡ ಶರದ್ಘನಾಳಿಯಿಂ
ಪುದಿದನಿಲಾಧ್ವದೊಳ್ ಪೊಳೆಯುತಿರ್ದುದು ಚಂಡಮರೀಚಿಮಂಡಲಂ ೨೪೨

ಪಾಲ್ಗಡಲೊಳುದಿಸಿ ಬಲ್ಲಿಂ
ಮೇಲ್ಗೆನೆಯಿಹದಧಿಸಮುದ್ರನಂ ನೋೞ್ಪನೆನು
ತ್ತಲ್ಲುದಿಸಿದಿರವೊ ಪೇೞೆನೆ
ಸಲ್ಗೆಯ ಶರದಭ್ರದೆಡೆಯೊಳೆಸೆದಂ ಚಂದ್ರಂ ೨೪೩

ಶರದಭ್ರಮೆಂಬ ಬೆಳ್ದಾ
ವರೆಗಳ ಮಕರಂದರೇಣು ಪವನಾಹತಿಯಿಂ
ಪರೆದು ಪಸರಿಸಿದುದೆನೆ ಪಿಂ
ಜರರುಚಿ ರಂಜಿಸಿದುದಂದು ಕಂಜಪ್ರಿಯನಾ ೨೪೪

ರಾಜಿಸುತಿರ್ದಪಂದರುಣಪಂಕಜ ಪಾಂಡುಪಯೋಜ ನೀಲನೀ
ರೇಜ ಕದಂಬಕಂಗಳ ಪೊದಳ್ದ ಬಿತಬಂಬಲು ಮತ್ತಷಟ್ಪದೀ
ರಾಜಿಯು ವರ್ಣಸಂಕರತೆಯಿಂದೆ ಕೊಳಂಗಳನಂಗರಾಜನೀ
ರಾಜನಲೀಲೆಗೆಂದು ರತಿ ತೀವಿದ ಬಣ್ಣವುರಂಗಳಂದದಿಂ ೨೪೫

ಅರಗಿಳಿಯ ಹಿಂಡು ಬಂದುಗೆ
ಯರಲಂದದ ಚಂಚುವಿಂದೆ ಕಟಿಸೆಯು ತೆನೆಯಂ
ಒರೆಕರ್ಚಿ ನೆಗೆದು ಪಾರ್ದುವು
ಶರದಂ ಪುಗೆ ಪಾಱುಪೋಪ ಸುರಚಾಪದವೊಲ್ ೨೪೬

(ಲೀಲಾವತಿ, ೫-೪೧)

ಶಾಲಿನ ಭೋಜನಂ ಮುಡಿದ ಪಡ್ಡಳಿ ತೀಡಿದ ಕುಂಕುಮೌಘ ಸ
ಲ್ಲೀಲೆಯ ಬಳ್ಳಿಮಾಡವು ಹರಿದ್ರನವಾಂಬರರತ್ನಭೂಷಣಂ
ಮೇಲಿನಿಪಪ್ಪ ಕರ್ಬುಜದ ಪಣ್ಣಿನ ಪಾನಕ ಕೇಳ್ವ ಗಾಣದಿಂ
ಲೋಲತೆವೆತ್ತು ಭೋಗಿಜನಮಿರ್ಕು ಶರದೃತುವೊಳ್ ನಿರಂತರಂ ೨೪೭

## ಹೇಮಂತ ವರ್ಣನೆ :

ಅರಿವಸುರಾಯ್ತು ಹುಲ್ದೆನೆಯು ನಿಂದವು ಕಾಯ್ ಪೊಡೆ ಕೊಯ್ಕಿಲಾಯ್ತು ಬಂ
ಧುರತರ ಶಾಳಿ ನೀರಱಿಕೆ ತೊಟ್ಟನೆ ಮಾಣ್ದುದು ಚಂದನಕ್ಕೆ ಮೆ
ಯ್ಯುರಸಿದುದಂಗಲೇಖೆ ಹೊಱಹಕ್ಕಿಗಳೋವರಿಯೊಕ್ಕವಾಸಗಂ
ಶರದದ ಮಾತು ಪಿಂಗಿದುದು ಪೊಕ್ಕುದು ಮಾಗಿ ಮಹೀವಿಭಾಗದೊಳ್ ೨೪೮

(ಸೂಕ್ತಿಸುಧಾರ್ಣವಂ, ೧೦-೨೩೭)

ಹಿಮಮುಸಲರ್ಚಿ ತೀಡೆ ಪವನಂ ವನಮಾಲೆಗೆ ಪೋಯ್ತು ವಿಭ್ರಮಂ
ಭ್ರಮರನಿಷೇವ್ಯಮಾಯ್ತು ಕುಮುದಂ ಮುದಮಂ ಪಡೆದತ್ತು ಪಣ್ತು ಕ
ರ್ಜಮೃತರಸಾವಿಳಂ ವಿಳಯಮೆಯ್ದಿದುದಬ್ಜವನಾಳಿ ನಾಳಿಕೇ
ರಮನವಳಂಬಿಸಿರ್ದುವು ಫಲಂ ರಸಪೂರಿತಮಾಗಿ ಮಾಗಿಯೊಳ್ ೨೪೯

(ಜಗನ್ನಾಥವಿಜಯಂ, ೧೪-೫; ಸೂಕ್ತಿ, ೧೦-೨೪೩)

ಮಾಸರಮೆನೆ ಪಾರದದಿಂ
ಪೂಸಿದವೋಲ್ ಪೊನ್ನ ಮುಕುರಮಂ ಹಿಮಲಿಪ್ತಂ
ನೇಸಱಬಿಂಬಂ ತಿಂಗಳೆ
ಕೂಸಿನವೋಲ್ ಮೂಡುತಿರ್ದುದಂದಿನ ದಿನದೊಳ್ ೨೫೦
(ಲೀಲಾವತಿ, ೯-೮; ಸೂಕ್ತಿ, ೧೦-೨೪೨)

ಬಿಟ್ಟು ಸರೋಜಮಂ ಕುವಲಯಕ್ಕಡಿಯಿಟ್ಟದು ತುಂಬಿ ಜಾತಿ ಕಂ
ಪಿಟ್ಟುದು ದಿಕ್ತಟಂಗಳನಶೇಷನದೀನದನಿರ್ಝರಾಂಬು ರೂ
ಪಿಟ್ಟುದು ಚಂದ್ರಕಾಂತ ಹಿಮವಾರಿಗೆ ಚಿಂತಿಸಿ ಜಕ್ಕವಕ್ಕಿ ಸಾ
ಲಿಟ್ಟುದು ಕಣ್ಣನೀರನೆನೆ ಮಾಗಿ ಬರಲ್ ಮೊದಲಿಟ್ಟುದೆಂಬಿನಂ ೨೫೧
(ಜಗನ್ನಾಥವಿಜಯಂ, ೧೪-೬; ಸೂಕ್ತಿ, ೧೦-೨೪೦)

ಒತ್ತಿಸೊಡನಿರ್ದ ನಲ್ಲರ ಮುಖಾಂಬುರುಹಂ ಪ್ರೊ[1]ಜತಾಗಿ[1] ಮಿಕ್ಕ ಕಂ
ಜಾತಮದಾವಲೆಕ್ಕಮಸುರಾರಿಯ ಪೊಕ್ಕುಳ ಪದ್ಮಮಂ ಖರ
ದ್ಯೋತಿಯ ಕಯ್ಯ ಕಂಜಮುಮ[2]ಸೀಳ್ದು ಸುರುಳ್ದು ಮುರುಳ್ಚುತಂ[2] ಜಗ
ತ್ಕೌತುಕವಾ[3]ಯ್ತು ಕೂಡೆ ಮಹಿಯೊಳ್ ಜನಸಂತತಿಗಂ ಹಿಮಂ[3]ಹಿಮಂ ೨೫೨
(ಪುಷ್ಪದಂತಪುರಾಣಂ, ೬-೪೬)

ಎಸೆವಿಂದ್ರಾಶಾಸಮೀರಂ ತೊಲಗಿಸೆ ಕೆಲಸಾರ್ದಂತಿರತ್ಯಂತ ಶೀತ
ಪ್ರಸರಕ್ಕಳ್ಳಿಕ್ಕಿ ಮೇಣಗ್ನಿಯ ದೆಸೆಗೆಳಸಿರ್ದಂತಿರಾಶ್ಚರ್ಯಮಂ ಪು
ಟ್ಟಿಸುತುಂ ತೆಂಕಣ್ಗೆ ಸಾರ್ದರ್ಕನ ಬಿಸುಗದಿರ್ಗಳ್ ಮಾಗಿಯೊಳ್ ತಣ್ಪಿನಾಳೆಲ್
ಬಿಸಿಲಂ ಬೆಳ್ದಿಂಗಳೆಂದೀಕ್ಷಿಸುವುವು ತರಳೋತ್ತಾನತಾರಂ ಚಕೋರಂ ೨೫೩
(ಜಗನ್ನಾಥವಿಜಯಂ, ೧೪-೧೩; ಸೂಕ್ತಿ ೧೦-೨೬೭)

ತಳರ್ದು ಕುಳಾಯದಿಂ ಬಿದಿರ್ದೆಱಂಕೆಯ ನೀರ್ಪನಿಯಂ ತೆರಳ್ದು ತು
ಪ್ಪುಱಿಸೊಸೆದಂಟೆ ಚಂಚುಪುಟದಿಂ ಬಿಸಿಲತ್ತಿದಿರಾಗಿ ನಿಂದು ಕ
ಣ್ಗಳನರೆಮುಚ್ಚಿ ತೋದಗಱಯಂ ನಸುಜೋಲಿಸಿ ಪಕ್ಕಿಗಳ್ ಮರಂ
ಗಳ ತುದಿಗೊಡಮೇಲೆ ದನಿಗೆಯ್ಯುತಮಿರ್ದುವು ಮುಂಬಗಲ್ವರಂ ೨೫೪
(ಜಗನ್ನಾಥವಿಜಯಂ, ೧೪-೧೦; ಸೂಕ್ತಿ ೧೦-೨೪೫)

---

[1] ಜಗಾಗಿ(ಅ) [2] ಮಿಡಿಯ್ದುಸುರುಳ್ಚುಗುಪೆಂಬಿನಂ(ಅ) [3] ಯ್ತು ಸುಷ್ಣ ಮಹಿಮಂ ಜನಿ
ತೋತ್ಪಲ ಬಂಹಿಮಂ(ಅ)

ಇದಿರೊಳ್ ನಿಂದೆಡಗಾಲೊಳಿಟ್ಟು ಮಱಿಯಂ ನಿಶ್ಚೇಷ್ಟೆಯಿಂ ಪೋಪುಗೊ
ಳ್ಳದೆ ಕಣ್ಮುಚ್ಚಿ ಹಿಮಾನಿಯಿಂ ನಡುಗುತಿರ್ಪಾ ಪುಲ್ಲೆಯಂ ಕಂಡೆಸಲ್
ಪವನೆಂದೇಟಿಲೊಡರ್ಚಿಯುಂ ನಿಜವಪುಸ್ಸಂಕೋಚದಿಂ ಬಿರ್ಚಲಾ
ಱದೆಪಟ್ಟಿರ್ದುದು ಕೂಡೆ ಬೇಡವಡೆ ದೇಹಸ್ತಂಭವಾದಂದದಿಂ ೨೫೫

(ಜಗನ್ನಾಥವಿಜಯಂ, ೧೪–೧೪)

ಜಲಜಲನೊಕ್ಕುತಿರ್ದುದು ನದೀತತಿ ಲೋಧ್ರಲತಾಂತ ಸೌರಭ
ಕ್ಕಲವರಿಸಿತ್ತು ಮತ್ತಮಧುಪಾಳಿ ರತಿಪ್ರಿಯನಂ ಪ್ರಿಯಂಗು ತ
ನ್ನಲರ್ಗಣೆಯಿಂ ಜಗತ್ರಯಮುಮಂ ಗೆಲಿಸಿತ್ತೆಳೆವೆಣ್ಣ ಮೆಯ್ಯ ಕೋ
ಮಲನಖರೇಖೆಯಂತಿರೆರೆಗೆಯ್ಗಳೊಳಾದುವು ಕೂಡೆ ಬೀಡೆಗಳ್ ೨೫೬

(ಜಗನ್ನಾಥವಿಜಯಂ, ೧೪–೭)

ನಡುಗಿದನಿಂದ್ರನಾರ್ಪುಡುಗಿತಗ್ನಿಯಮುಂಗೆಯತೀವಭೀತಿಯಿಂ
ದಡಸಿತು ರಕ್ಕಸಂ ನರನನಪ್ಪಿದನಾ ವಡಬಂಗೆ ವಾರ್ಧಿಪಂ
ವ್ರೊಡಲನೆ ತೆತ್ತನಾಶುಗನದೋಡಿದನ್ನೈ ಧನರಾಶಿಯೊಕ್ಕನಾ
ಮುಡುಗಿದನೊಂದು ಗೆಂಟೊಳಭವಂ ಹಿಮಧಾನದ ಧಾಳಿ ತಪ್ಪಿಸಲ್(?) ೨೫೭

ಪೀತಾಂಬರಾಧಿವಾಸದೆ
ಶೀತಂ ತಾಂ ತೊಲಗದೆಂದು ಹೊಗೆಗಿಚ್ಚಿನ ನಡು
ವಾ ತನುವನಿಟ್ಟು ಕಾಸಲ್
ಮಾತೇನೊ ಕೃಷ್ಣನಾದನಾ ಹಿಮವೆಂತೋ ೨೫೮

ಉಂಡ ಕೊರ್ಬಿಂದೆ ನೋಡಾ
ಕೆಂಡಕೆ ನೊಣವೆಱಗಬಲ್ಲುದೆಂಬರಮಾತಂ
ಖಂಡಿಸುವಂತಾ ನೊಣಗಳ್
ಕೆಂಡಮನಾಖಂಡಮೆಂದು ಸಾರ್ದುವು ಹಿಮದೊಳ್ ೨೫೯

ಸೂರ್ಯಂಗೆ ಚಂದ್ರಮತ್ವಂ
ಸಾರೆ ಚಕೋರಾಳಿ ನಲಿಯಲೋಡಲ್ ಚಕ್ರಂ
ಸೇರದಂತಾಡುತಿರಲಾ
ಪೂರಿತ ಹಿಮದಿವಸದೊಳಗದೇಂ ವಿಪರೀತಂ (?) ೨೬೦

ವರ ಜಘನಯುಗದ ಮಱಿತಯೊಳ್
ಗುರುಕುಚಯುಗ್ಮಂಗಳಿಱುಕಿನೊಳ್ ಕಜಮುಖದಾ
ಹೊರಳಿಯುಶಯನದೆ ಛಳಿ ಮೆ
ಯ್ಗೆರೆವಂತಾಗಿಸದ ನರನೇಜಾಣಂ ಸತಿಯಾ ೨೬೩

ಮುಂದೆ ಕಾಸಿದೊಡೆ ಛಳಿ ಮಿಗೆ
ಪಿಂದಿರೆ ಪೊಗೆಗಶ್ರುಗಱಿತಯೆ ಕಿಚ್ಚಿಡೆ ಪಥಿಕರ್
ಪಿಂದೆ ಮುಂದಿಲ್ಲದಿರ್ಪೀ
ಕುಂದಿನ ಬದುಕೇತಕೆನುತಲಱುವವೊಲೆಸೆದರ್ ೨೬೪

ಹಿಮಕಂಜಿ ಮುಗ್ಧಕಪಿಗಳ್
ತಮತಮಗೆಯ್ತಂದು ಮುತ್ತದಲರಂ ಕಿಚ್ಚಿಂ
ದಮಮ ಬಱಗಾಸಲುಷ್ಣಂ
ಸಮನಿಸದಿರೆ ನಾಚಿ ಹೊಟಿಲಮಱಿತಯಂ ಸಾರ್ಗುಂ ೨೬೫

ಮುಡಿಯ ಬೆಡಂಗು ಚೆಲ್ವಭುಜಮಾ ಮೊಗದಾಯತ ಚೆಲ್ವನಪ್ಪ ಬೆಂ
ತೊಡಕದೆ ವಸ್ತ್ರಮಂ ಮೊಲೆಯುಮೇಲುದು ಮಧ್ಯದ ಸಣ್ಣಬಣ್ಣದೊಳ್
ತುಡಿಗೆಯನುಳ್ಳ ಚೊಕ್ಕಸರಿಮಿಂಡಿಯರ್ಗಾ ಹಿಮವೊಲ್ದು ಶೀತದೊಳ್
ನಡುಗಿಸಿದಿಲ್ಲ ಸುಂದರಿಯರ್ಗಿಟ್ಟೆಡೆಯೀವವನೆನ್ನಕಷ್ಟನೋ(?) ೨೬೬

ಅರೆಮೀಸೆ ಕಣ್ಣೊಳೊಂದೆ ವ್ಯೆ
ಯರೆಪುರ್ಬುರಿಯುರುಹಿಸಲ್ಕೆ ಕೆತ್ತಿದವೊಲ್ ಬೆಂ
ದಿರೆ ಪಥಿಕನಱಿಯದೊಡೆ ಹೋ
ಹರ ನಗೆ ಘನಮಾಯ್ತು ಕೇಡನಱಿಸದುತ್ತರಿಪಂ(?) ೨೬೭

ಕಿಡಿಗಳ್ ಕೆಚ್ಚನೆಯಾಲಿಕಲ್ಲುರಿಯ ಮೊತ್ತಂ ಕೆಂದಳಿರ್ ಕೆಂಡವೋ
ದಡಕಿಲ್ ಮಾಣಿಕದಂದ ಕಾಯ್ವ ತಪನಂ ಚಂದ್ರಂ ಪೊದಬ್ದಾತಪಂ
ಗಡ ಬೆಳ್ದಿಂಗಳೆನಿಪ್ಪುದೊಂದು ಪೆಸರಂ ತಾಂ ಮಾಡಿದಂತಿರ್ದುದಾ
ಕಡುಪಿಂ ತನ್ನಯ ಕಾಲದಲ್ಲಿ ಹಿಮರಾಜಂ ಧಾರುಣೀಚಕ್ರದೊಳ್(?) ೨೬೮

ಮಿಗೆ ಬೆಮರಱಿತುದು ನೀರಡಿ
ಕೆಗಳಿಂಗಿದವುಷ್ಣದುಸಿರಡಂಗಿತು ತಪನಂ
ಗೊಗೆದುದು ಪೆರ್ಚಿದ ತಂಪ
ಗ್ನಿಗೆ ಶೀತಂ ಪೆರ್ಚಿತೇನನೆಂಬೆಂ ಹಿಮದೊಳ್ ೨೬೯

ಶೀತವ ಪರಿಹರಿಪನಲಂ
ತಾಂ ತನ್ನಯ ದೇಹದಲ್ಲಿ ಭಸಿತವ ಪೂಸಿದ
ಮಾತೇನು ಮಿಕ್ಕವರ್ಗಳ
ಸ್ಫೈತಿರಿಪನೆ ಹಿಮನೃಪಾಲನವನೀತಳದೊಳ್ ೨೭೦

ಈಕ್ಷಿಸಿದರೆಳಸಿ ಭಸಿತದ
ರಕ್ಷೆಯನೊಸೆದಿಟ್ಟು ಮಂಜಿನಿಂ ತೂಪಿರಿದುಂ
ಶಿಕ್ಷಿಸಿ ಬಲ್ಪಿಂದೊಡುತ
ರಕ್ಷಿಸಿದಳ್ ಶೀತಮಾತೆ ಶಿಖಿಬಾಲಕನಾ ೨೭೧

ಸಲೆ ರವಿ ತೇಜಂಗುಂದುತೆ
ನಿಲಲಂಜುತ್ತೋಡಿ ಪುಗುವನದ್ರಿಯ ಮಱೆಯಂ
ನಿಲೆಹರಿವ ಉರಿಯ ಕಿಚ್ಚುಂ
ಸಲೆ ನಂದುಗು ಹಿಮನೃಪಾಲನಾಜ್ಞೆಗೆ ಧರೆಯೊಳ್ ೨೭೨

ಉದಯಂ ಶೀತೋದಯವ
ಗ್ಗದ ಮಧ್ಯಾಹ್ನಂಗಳಲ್ಲಿ ಬಿಸುಪುಱೆ ಶೀತಂ
ಸದನದೊಳತಿ ಮಿಗೆ ಶೀತಂ
ಹೃದಯಂ ಗದಗದಿಸಿ ನೆಱೆದುದಂದಿನ ಶೀತಂ ೨೭೩

ಇಳೆಗತಿಘನಶಿಶಿರಂ ಶಶಿ
ಬೆಳಗುವ ಜೊನ್ನಂ ಬಿಸಿಲ್ ಬಿಸಿಲುಂ ಜೊನ್ನಂ
ಚಳಿ ಬಿಸುಪು ಬಿಸುಪು ಚಳಿಯೆನೆ
ಬೆಳೆದುದು ಹಿಮರಾಜತೇಜವೀ ಜಗದೆಡೆಯೊಳ್ ೨೭೪

ಅಲ್ಪರಿಯೊಳು ಹೂಹೂಯೆಂ
ಬಲ್ಪುಗ್ಗಡಣೆಯೊಳೆ ಹಸ್ತದಂಡಿಗೆಯಿಂದಂ
ನೋಟ್ಪಿನ್ನಂ ಶಿಶಿರನಟಂ
ಸಾಲ್ಪನ್ನಂ ಜಗವನಾಡಿಸಿದನುಬ್ಬಟೆಯಿಂ ೨೭೫

ಉಱೆ ಶೀತಂ ಪತ್ತಿದೊಡಿರ
ಲಱಿಯದೆ ಜೀವಂ ಬಿಗರ್ತು ಜಠರಾಗ್ನಿಯನೆ
ಚ್ಚಱಿಸೆ ಹೊಗೆಯುಸುರಪಥದಿಂ
ಪೊಱಮಡುವುದು ಜನದ ಮುಖದೊಳಲ್ಲದೊಡುಂಟೇ ೨೭೬

ನುಡಿಯ ಹುಹು ನಡೆಯ ಮಾತೇ
ಕೊಡಲೆ ಪ್ರಾಣಂಗೆ ಛಳಿಯ ಕುಪ್ಪುಸಮಾಯ್ತೆಂ
ಜೊಡೆ ಹಿಮದ ಮಹಿಮೆಯಂ ಪೇ
ೞ್ವೊಡೆ ಕೇಳ್ವವನಾವನೋರ್ವನುರ್ವೀತಳದೊಳ್ ೨೭೭

ಒದವಿ ಧರಾತಳದೊಳ್ ತೀ
ವಿದ ಶೀತಕ್ಕಂಜಿ ಕಂಪಿಸುತ್ತಂ ನಿಲಲಾ
ಱದೆ ಬಡವಾಗಿ ಕರಂ ಕಾ
ಷ್ಠದೊಳಂ ಪೊಕ್ಕಂ ಕೃತಾನುವೇನಂ ಪೇೞ್ವಂ ೨೭೮

ಮುಚ್ಚಿ ಮುಸುಕಿರ್ದ ಹಿಮಮಂ
ಕಿಚ್ಚಿಂದಂ ಕಳೆಯಲಾಱದಿಳೆಯ ಜನಂಗಳ್
ಬೆಚ್ಚಱದೆಯ್ತಂದೊಲವಿಂ
ದಚ್ಚರಿ ವಿರಹಿಗಳ ಕಾದು ಕಳೆವರ್ ಚಳಿಯಂ ೨೭೯

ಪರಿಪೂರ್ಣತಟಾಕದ ಮೇ
ಲುರಿಯಿಲ್ಲದೆ ಧೂಮಮಾಗೆ ಉರಿ ಮಾಗೆಯೊಳ
ತ್ಯುರುತರಗುರುತರತಾಪ
ಕ್ಕಿರಲಾಱದೆ ಬಿರಯಿ ಪೊಕ್ಕು ಮುೞುಗದೆ ಮಾಣಂ ೨೮೦

ಪುಟ್ಟಿತು ಚಳಿ ಬೆಳೆದುದು ಚಳಿ
ಕೊಟ್ಟುದು ಚಳಿ ಕೊಂಡುದೆಲ್ಲಮುಂ ಚಳಿ ಚಳಿಯೆಂ
ದುಟ್ಟುದು ಚಳಿ ತೊಟ್ಟುದು ಚಳಿ
ಮೆಟ್ಟಿತು ಚಳಿ ಮೆಟ್ಟಿತೆಲ್ಲ ಚಳಿ ಹೊಸಚಳಿಯೊಳ್ ೨೮೧

(ಗಿರಿಜಾಕಲ್ಯಾಣಂ, ೯–೫೨)

ಉಡುಗೆಲೆ ಗರ್ಭಮುಂ ಕುಜಱಿಯ ಕೆಂಬಳಿ ಮಾಳಿಗೆ ಮಾಣಱು ದರ್ಪಮುಂ
ತೊಡರದಿರೆನ್ನೊಳಬ್ಜಮೆ ತೃಣಾವಳಿಗೆಲ್ಲಿಯ ಮಾಗಿ ಪೋಗಿ ನೀಂ
ಮಿಡುಕದಿರಂಗನಸ್ತ್ರನಮೆ ನಿನ್ನನೆ ಮನ್ನಿಪೆನೆಂದು ನಿಚ್ಚಲುಂ
ಬಡಿದುವು ಡಂಗುರಂ ವಿಜಯಮಂದಿರದೊಳ್ ಹಿಮರಾಜರಾಜನಾ ೨೮೨

ಚಳಿಗಳ್ಕಿ ಕಱುಯು ಪೊಸಕಂ
ಬಳಿಯಂ ಮುಸುಕಿದವೊಲಗ್ನಿಯುಪಗತ ತಾರ್ಣಾ
ನಳರಾಶಿಯೆಸೆದುವಂತ
ಜ್ವಾಳದುಲ್ಮುಕವೊಟ್ಟೆ ಪೋಗೆ ಪಥಿಕರ್ ಪಥದೊಳ್ ೨೮೩
(ಲೀಲಾವತಿ, ೯-೯)

ನಳಿತೋಳ್ ಸುತ್ತಿದ ಕೊಂಟಿ ಕೂರ್ಗಣೆ ನಖಂ ವೃತ್ತಸ್ತನದ್ವಂದ್ವವ
ಟ್ಟಳೆ ಬಿಲ್ ಪುರ್ಬು ಕಟೀತಟಂಗಳೆರಡುಂ ಬೆಂಗುಂಡು ಕರ್ಣಾಯತಂ
ಪೊಳೆಯುತ್ತಿರ್ಪಲಗ್ಗಂಗಳೋಪನೆಮಗಾ ಸಾಮಂತನೀ ಕೋಟೆಯಂ
ಕೊಳಲೇಂ ನಿನ್ನೊಳು ಸಾಧ್ಯಮಲ್ಲಮೆಲವೋ ಹೈಮಂತ ನೀಂ ಸಂತವಿರ್ ೨೮೪

ಅಂಬುಜಪತ್ರನೇತ್ರೆಯರ ತುಂಗಘನಸ್ತನಮಧ್ಯದಲ್ಲಿ ನ್ಮೈ
ತಂಬದೊಳಿಂಬಿನಲ್ಲಿ ನಳಿತೋಳ ಮೊದಲ್ಗಳ ತಾಣದಲ್ಲಿ ಪೊ
ಕ್ಕಂ ಬದುಕಿರ್ದನಲ್ಲದೊಡೆ ಸತ್ತಪನೆಂಬುದು ನಿಶ್ಚಯಾರ್ಥಮುಂ
ಕಂಬಳಿ ದಡ್ಡಿ ಬೂರಿವಡೆಯೆಂಬಿವು ಕಾವುನೆ ಶೀತಗಾಲಮಂ ೨೮೫

ಗಗನಂ ದಿಗ್ವಳಯಂ ದಿನೇಶವಳಯಂ ಶೈಲಾಳಿ ತೋಯಾಳಿಯುಂ
ನಗರಂ ನಂದನಮೆಂಬ ವಸ್ತುಗಳನಾರುಂ ಕಾಣದಂತಾಗಿ ತೊ
ಟ್ಟಗೆ ಕಣ್ ವಂಚಿಸಿ ನುಂಗಿ ತೋರ್ಪ ಚಪಲಂ ಹೇಮಂತಮೆಂಬಿಂದ್ರಜಾ
ಲಿಗನಿರ್ದೂದಿದ ಧೂಮದಂತಸದಳಂ ಪರ್ಬಿತ್ತು ಮಂಜೆತ್ತಲುಂ ೨೮೬
(ಸೂಕ್ತಿಸುಧಾರ್ಣವಂ, ೧೦-೨೩೯)

ಗಿರಿತಟದೊತ್ತುಗೊಂಡು ಮೃಗಸಂಕುಳಮಿರ್ದುವು ಜೀರ್ಣಕೋಟರಾಂ
ತರತಟದೊತ್ತುಗೊಂಡು ಖಗಸಂತತಿಯಿರ್ದುವು ಮಾಗಿಯೊಳ್ ಸರೋ
ವರತಟದೊತ್ತುಗೊಂಡು ಪೊಣರ್ವಕ್ಕಿಗಳಿರ್ದುವು ಕಾಮಿನೀಪಯೋ
ಧರತಟದೊತ್ತುಗೊಂಡು ವಿಟಪೇಟಕರಿರ್ದರು ಮುಂಬಗಲ್ವರಂ ೨೮೭
(ಸೂಕ್ತಿಸುಧಾರ್ಣವಂ, ೧೦-೨೪೪)

ಖಂಡಿಸೆ ಬಿಸಕಳಿಕೆಗಳಂ
ತುಂಡಂ ಕುತ್ತಿಱುಯೆ ಬಿದಿರ್ದು ಬಳ್ಕಿಸಿ ತಲೆಯಂ
ಕೊಂಡೋಡಿ ಕೊಡಹಿಕೊಂಡವು
ಮಂಡಳಿಸಿದ ಪಕ್ಕದಿಂದೆ ಕಳಹಂಸಂಗಳ್ ೨೮೮
(ಲೀಲಾವತಿ, ೯-೧೫; ಸೂಕ್ತಿ ಸುಧಾರ್ಣವಂ, ೧೦-೨೪೬)

ಮಱಿದುಂಬಿಗಳಂಬುರುಹದ
ನಱುಗಂಪಿಂ ಬಳೆದುಮವಱ ಸಿರಿತೊಲಗಲೊಡಂ
ಮಱೆದೆಱಗಿ ನೋಡದುತ್ಪಲ
ಕೆಱಗಿದುವು ವಿಜಾತಿಯಲ್ಲಿ ಗುಣಮಱಸುವುದೇ ೨೮೬

(ಲೀಲಾವತಿ, ೯-೧೬)

ಪೊಸಪುಲ್ಲೊಳ್ ಕಿಚ್ಚನಿಟ್ಟೊದಿದೊಡುರಿದುರಿ ಕೂರ್ಚಾಗ್ರಮಂ ಪತ್ತಿ ಕಯ್ಯಂ
ಪೊಸೆದುಂ ವಸ್ತ್ರಾಗ್ರದಿಂ ಮೋದಿಯುಮುಗುಳ್ವಱೆಯಿಂ ನಾಂದಿಯುಂ ಮೊಕ್ಕಳಂ ನಂ
ದಿಸಲೆಂತುಂ ಪಾಂಥನಂದಾಱದೆ ನಡುನಡುವ ಪೋಗಿ ಬಿರ್ದೈ ಕಿಲಿಂ ಕಂ
ಪಿಸುತಿರ್ದಂ ಪುಲ್ಲ ಕಿರ್ಚುಂ ಪೊಲೆಯನ ಕೆಳೆಯುಂ ಮೂಡದಾವಂಗೆ ಕೇಡಂ ೨೯೦

(ಲೀಲಾವತಿ, ೯-೨೦; ಸೂಕ್ತಿ ೧೦-೨೧೨)

ತಳಿರೊಳ್ ಮುಚ್ಚಿಟ್ಟು ಕೂಸಂ ತೆಗೆದು ಶಬರಿ ನಿಶ್ಚೇಷ್ಟಮಾಗಿರ್ದೊಡಂ ಕಂ
ಗಳನೀರಂ ತೀವಿ ಜೇಗಂ ತೊಡೆದು ಹಿಮಕಣಾನೀಕಮಂ ತೇಂಕುದಾಣಂ
ಗಳನಂಟಂಟೆಲ್ಲಿಯುಂ ಕಾಣದೆ ಹರಣಮುನತ್ಯುಷ್ಣದಿಂ ಸುಯ್ಯೆ ಸುಯ್ಲಿಂ
ದೆಳಗೂಸೆಟ್ಟಿತ್ತು ಕಾಳ್ ಕಾಳೆನೆ ತೊರೆದ ಕುಚಾಗ್ರಂಗಳಂ ನೀಡುತಿರ್ದಳ್ ೨೯೧

(ಲೀಲಾವತಿ, ೯-೨; ಸೂಕ್ತಿ ೩-೨೧೭)

ಕೃತಶೀಘ್ರಸ್ನಾನರಾನರ್ತಿತನಿಕೃತಕರಾಕೃಷ್ಟನಸ್ತ್ರಾಂಚಳರ್ ವಿ
ಸ್ತೃತದರ್ಭರ್ ಗದ್ಗದೋಚ್ಚಾರಿತ ಜಪರುಪಸಂಜಾತರೋಮಾಂಚರಾಕುಂ
ಚಿತಗಾತ್ರರ್ ವಹ್ನಿಸಂದೀಪನಪಟುನಟುದತ್ತೇ[1]ಕ್ಷಣರ್ ನೀರ[1] ತೀರ
ಸ್ಥಿತರಿರ್ದತ್ತಂದು ವೈಭಾತಿಕವಿಧಿವಿಹಿತಾಮೋಘಮಾಘಂ ದ್ವಿಜೌಘಂ ೨೯೨

(ಲೀಲಾವತಿ, ೯-೨೧೫, ಸೂಕ್ತಿ, ೧೦-೨೬೪)

ಕರಿಣೀಪೇಚಕಮಂ ತುಡುಂಕದು ವನೇಭಂ ಕಾಮುಕರ್ ಕಾಮಿನೀ
ಪರಿರಂಭಸ್ಪೃಹೆಗಾಸೆಗೆಯ್ಯರೆ ರತಿವ್ಯಾಪಾರದಿಂ ಹುಲ್ಲೆಯಂ
ಹರಿಣಂಗಳ್ ನಡೆನೋಡಲಮ್ಮವು ಹಿಮವ್ಯಾಘಾತದಿಂ ಬಿಲ್ಗೆ ಕೈ
ದರಲೇನಾಱನೊ ಪೂವಿನಂಬು ತನಗಿಲ್ಲಾಗಿರ್ದನೋ ಮನ್ಮಥಂ ೨೯೩

(ಲೀಲಾವತಿ, ೯-೪; ಸೂಕ್ತ ೧೦-೨೫೪)

---

[1]ರಗ್ರೀವ(ಸ) [2]ವಿಂತುತುಹಿನ (ಸೂ)

ಪಿರಿದುಂ ಕಾರ್ಯಾತುರಂ ಮಾಣದೆ ಕರೆದೊಡಮೀ ಬಂದೆನೀ ಬಂದೆನೆಂದೊಂ
ದರೆಜಾವಂ ಕಾಮಿನೀಕರ್ಕಶನಿಬಿಡಕುಚಾಲಿಂಗಿತಂ ರಕ್ತವಸ್ತ್ರಾ
ಸ್ತರಣಂ ಕಾಶ್ಮೀರರಾಗಾವಿಳನತಿಮೃದುಶಯ್ಯಾತಳಂ ನಕ್ತಭೀತಾ
ತುರಚಿತ್ತಂ ಕಾಂತನಿರ್ದಂ ಸಹಚರಗಮನೋದ್ಯೋಗಭಂಗಂ ಭುಜಂಗಂ ೨೯೪
(ಸೂಕ್ತಿಸುಧಾರ್ಣವಂ, ೧೦-೨೫೬)

ಅಡಿಯಡಿಯೊಳ್ ತೊಡೆತೊಡೆಯೊಳ್
ನಡುನಡುವಿನೊಳುರಮುರೋಜದೊಳ್ ತೋಳ್ ತೋಳೊಳ್
ತೊಡರ್ದಿರೆ ಬಾಯೊಳ್ ಬಾಯ್ ಮನ
ದೊಡಕಿನೊಳಿರೆ ಮಾಗಿ[1]ಗೀಗಿಯೇ[1]ಗೆಯ್ದಪುದೊ ೨೯೫
(ಸೂಕ್ತಿಸುಧಾರ್ಣವಂ, ೧೦-೨೫೭)

ಗಳರವಮಾಗಿ ಮುದ್ದುಮೊಗಮಾಗಿ ದರಸ್ಮಿತನೇತ್ರಮಾಗಿ ಕೋ
ಮಳಕಚಮಾಗಿ ಪೀನಕುಚಮಾಗಿ ಸಮುಚ್ಚನಿತಂಬಮಾಗಿ ಸಂ
ಚಳತನುಮಧ್ಯಮಾಗಿ ತನುಗಂಗಜರಾಗಮುಮಾಗಿ ನೀಱೆಯೊ
ಲ್ದೊಳಪುಗುವಂತೆ ಮಾಗಿಬರೆ[2] ಮಾಗಿಲಯೆನ್ನ[2]ರೆ ಭೋಗಭಾಗಿಗಳ್ ೨೯೬
(ಸೂಕ್ತಿಸುಧಾರ್ಣವಂ, ೧೦-೨೬೦)

ನೆನೆಯಲೊಡನೆತ್ತಿ ಮನದೊಳ್
ತನುಗಿಚ್ಚಿಂ ಹಿಮುವನೋಡಿಸುವ ನವಯುವತೀ
ಸ್ತನಭರಮಂ ತೆಗೆದಪ್ಪಿದ
ಮನುಜರಿಗೇನರಿವುದರಿದೆ ಮಾಗಿಯ ಮೂಗಂ ೨೯೭
(ಸೂಕ್ತಿಸುಧಾರ್ಣವಂ, ೧೦-೨೬೧)

ನೆಲವಾಸುದಂಬುಲಂ ಪೆ
ರ್ಮೊಲೆಗಳ ಪೞಮಿಂಡಿ ಸುಪ್ಪತಿಗೆ ಧವಳಾರಂ
ಕೆಲದ ಸೆಗಳಿಗೆಯನಿಂಬಿಂ
ಸಲೆ ಸವಿಪೊಡೆ[3] ಮಾಗಿಗೀಗಿಯೇ[3]ಗೆಯ್ದಪುದೋ ೨೯೮
(ಸೂಕ್ತಿಸುಧಾರ್ಣವಂ, ೧೦-೨೫೯)

---

[1] ಶಾನದೇಂ(ಸ) [2] ಬಾಗಿಲೆಯೆಂಬರೆ(ಸೂ) [3] ಮಾಗಿಗಿನಿಯುದೇಂ(ಸ)

ಬಿಸಿಬಿಸಿಯೋಗರಂ ಕೆಲದ ಸೋಡಗೆ ತೆಳ್ಪೊಳುದುಪ್ಪವುಃಪ್ಪುಗಾಯ್
ವೊಸರಿನಿದಪ್ಪ ಮಜ್ಜಿಗೆ ನಿವಾತದ ಶಯ್ಯೆ ಕದಂಬದಂಬುಲಂ
ರಸಿಕರ ಗೋಷ್ಠಿ ಬಟ್ಟವೊಲೆಯೋಪಳ ತಳ್ತಮರ್ದಪ್ಪು ತಾವೆ ಬ
ಗ್ಗಿಸದೆ ಹಿಮಾಗಮೋಕ್ತಿಕ ಜಡೋದಯಮಂ ಸುಕೃತಾತ್ಮರಪ್ಪರಾ ೨೯೯
(ಸೂಕ್ತಿಸುಧಾರ್ಣವಂ, ೧೦-೨೬೫)

## ಶಿಶಿರ ಋತುವರ್ಣನೆ

ಒದವೆ ರಸಂ ವನಾಮಳಕಸಂತತಿ ಕೋಮಳಮಾದುದೆತ್ತಲುಂ
ಬದರಿಫಲಾಳಿಯಿಂದಧರಮಾದುದು ಕಂಜವನಾಳಿ ನಂಜು ಮು
ಟ್ಟಿದ ತೆಜನಾಯ್ತುವುತ್ಪಲಕದಂಬ ಕದಂಬಕ ಹರ್ಷಕಾರಿಯಾ
ದುದು ಹಿಮಕಾಲವೀಗ ಶಿಶಿರಾಗಮವಾದ ಬೆಡಂಗಿದೆಂಬಿನಂ (?) ೩೦೦

ರವಿರುಚಿಯುಂ ಹಿಮಾಂಶುರುಚಿಯೆಂದು ಚಕೋರಚಯಂಗಳೀಂಟುತಿ
ರ್ಪುವು ಬಡಬಾಗ್ನಿಯುಂ ಪವಳಮೆಂದಿರದಂಬುಚರಂಗಳೊಂದಿ ನಿ
ಲ್ವುವು ಹರಭಾಳಲೋಚನಮನಂಗಜನೀಕ್ಷಿಸಿ ರಕ್ತಚಂದನ
ದ್ರವದ ಲಲಾಮಮೆಂದೆಣಿಪನೇವೊಗಟಿಪ್ಪಂ ಶಿಶಿರಾತಿರೇಕಮಂ ೩೦೧
(ಜಗನ್ನಾಥವಿಜಯಂ, ೧೪-೧೮; ಸೂಕ್ತಿ, ೧೦-೨೬೬)

ಗಂಗೆಯಮೂಡನಂದುಟಿದು ಸೂಡಿದ ಚಂದ್ರಕಳಾವತಂಸಮಂ
ಪಿಂಗಿಸಿ ಸುಟ್ಟು ಮನ್ಮಥನೊಳಾದ ವಿಭೂತಿಯನೊಟ್ಟಿಕೊಂಡು ವಾ
ಮಾಂಗದೊಳಿಟ್ಟು ಪಾರ್ವತಿಯನೀಶ್ವರನಗ್ಗಳಗಣ್ಣ ಬೆಂಕಿಯಿಂ
ಭಂಗಿ[1]ಸಿ ನೀಗುವಂ ಗಿರಿಯ[1]ಗಹ್ವರದೊಳ್ ಶಿಶಿರಾತಿರೇಕಮಂ ೩೦೨
(ಸೂಕ್ತಿಸುಧಾರ್ಣವಂ, ೧೦-೨೫೩)

ತಳೆದ ಸುವರ್ಣಭೂಷಣದ ಪೂಸಿದ ಕುಂಕುಮದಿಟ್ಟ ರೋಚನಾ
ತಿಳಕದ ರಾಗದಿಂ ಮನದನುರಾಗಮೆ ಮೂರ್ತಿಯನಾಂತವೊಲ್ ಮನಂ
ಗೊಳಿಸೆಳವೆಂಡಿರಂಗಣದ ಹೇಮವಿತರ್ದಿಯೊಳಿರ್ದು ಕಾದರಂ
ಪೆಳವಿಸಿಲಂ ನುನಂಬಯಸಿ ಕಾಯೆ ವಿಟಪ್ರಕರಕ್ಕೆ ಮನ್ಮಥಂ ೩೦೩
(ಜಗನ್ನಾಥವಿಜಯಂ, ೧೪-೯; ಸೂಕ್ತಿಸುಧಾರ್ಣವಂ, ೧೦-೨೫೫)

---

[1] ಸುವಂ ಕುಬೇರಗಿರಿ(ಸೂ)

ತುದಿಗೋಡಿಂಗೇಱಿ ಕೊಂಬಂ ಪಿಡಿದು ಜಡಿದು ಪುರ್ವಿಕ್ಕಿಯುಃಘೆಂದು ಮುನ್ನೇ
ಱಿದ ಕೊಂಬಂ ನೋಡಿ ಮೆಯ್ಯಂ ಸುಗಿದುಗಿದುಃರವುಂ ಪಿಕ್ಕಿ ಪೇನ್ಪಿಂಡನಾಯ್ದು
ರ್ಬಿದ ಮೆಯ್ಯಂ ಕಯ್ಯನೆತ್ತಂ ತುಱಿಸಿ ಮಱಿಗಳಂ ಸಾರ್ಚಿ ಮುಂದಣ್ಗೆ ಕುಳ್ಳಿ
ರ್ದುದು ಕೋಡಂ ಕೂಡಿ ಹೇಮಂತದೊಳೆಳವಿಸಿಲಂ ಕಾಯಲೆಂದೊಂದು ಧೂರ್ತಂ ೩೦೪
(ಸೂಕ್ತಿಸುಧಾರ್ಣವಂ, ೧೦-೨೪೭)

ಪಲ್ಗಿರಿದು ಪುರ್ವನುರ್ವಿ ಬೆ
ರಲ್ಗೊನೆಯಿಂ ತುಱಿಸಿ ಬರಿಯ ಸೀರ್ದುಪ್ಪುಟಿ ಬಂ
ಬಲ್ಗಳನುಗುರಿಂ ಪಿಕ್ಕಿ ಬಿ
ಸಿಲ್ಗಾದುದದೊಂದು ಮರದ ಕೋಡೊಳ್ ಕೋಡಂ ೩೦೫
(ಜಗನ್ನಾಥವಿಜಯಂ, ೧೪-೧೧)

ಮಱಿಗಳನಿಱುಂಕಿ ಮೋಹದಿ
ನೆಱಂಕೆಯಿಂ ಗೂಡುಗೊಂಡು ಗೂಡಿನೊಳಿರುಳೇ
ನೊಱಗಿರ್ದುವೊ ಕೂಗದೆ ಕಣ್
ತೆಱೆಯದೆ ಕುಕ್ಕುಟಕುಟುಂಬಿನೀನಿಕುರುಂಬಂ ೩೦೬
(ಜಗನ್ನಾಥವಿಜಯಂ, ೧೪-೧೫; ಸೂಕ್ತಿ, ೧೦-೨೪೯)

ಪೊಱಮಟ್ಟು ತೊಱೆಯ ನಡುವಣ
ಕುಱುವಂಗಳ ತಡಿಯೊಳಿರ್ದು ಕಾಯ್ದುವು ಬಿಸಿಲಂ
ಮಱಿಗಳ್ ಪಕ್ಕಂ ಬೆಂಬಿಡ
ದೊಱಗಿರೆ ಕುಂಭೀರಕಮಕರಕರ್ಕಟಕಂಗಳ್ ೩೦೭
(ಜಗನ್ನಾಥವಿಜಯಂ, ೧೪-೧೨; ಸೂಕ್ತಿ, ೧೦-೨೫೦)

ಕಿಚ್ಚಿನ ಸೊಗಸಂ ಬಿಸಿಲೊಳ್
ಬೆಚ್ಚನೆಯಂ ಬಿಸುಪಿನುಣಿಸನೊಳ್ದಂಬುಲಮಂ
ಮೆಚ್ಚಿದಳಪ್ಪಂ ಮಾಡುವ
ನಚ್ಚಿನ ಶಿಶಿರಂಗೆ ಸರಿಯದಾರ್ ಧಾರುಣಿಯೊಳ್ ೩೦೮

ಹಿಮವರ್ಷಬಿಂದುಗಳ್ ಸಂ
ಕ್ರಮಿಸಿದ ವನತರುನಿಕಾಯದೊಳ್ ನವಮುಕುಳಾ
ಗಮದಿಂದೆ ಸಿಂಧುವಾರಂ
ಭ್ರಮರಾಳಿಗೆ ಪರಿಮಳಾನುಮಿತೆಯಾಯ್ತೆತ್ತಂ ೩೧೦

ಬೆಳೆದುವು ಹಿಮವರ್ಷದಿ ರಾ
ತ್ರಿಲತೆಯೆನಲ್ ಬೆಳೆದುದಿರುಳ್ಗಳೊಳ್ ಸುರತಂಗಳ್
ಬೆಳೆದುವು ದಂಪತಿಶತದೊಳ್
ಬೆಳೆವಿನೆಗಂ ಮದನಾಗ್ನಿಯಿಂ ಭುಜಬಲಮಂ ೩೧೧

ಮೃಗಸಂತತಿಯಂ ಕೊಳರ್ವ
ಕ್ಕಿಗಳಂ ಪಕ್ಷಿಗಳನದ್ರಿತಟದೊಳ್ ಕೊಳಜೊ
ತ್ತುಗಳೊಳ್ ಮಿಗೆ ಕೋಟರದೊಳ್
ಪುಗಿಸುತ್ತುಂ ಬಂದನಮನು ಶಿಶಿರನೃಪಾಲಂ ೩೧೨

ಇನಿಸುಗುರ್ವೆಚ್ಚನಪ್ಪುಣಿಸು ಕುಂಕುಮದಣ್ಪು ಕದಂಬದಂಬುಲಂ
ಕನಕವಿಭೂಷಣಾಳಿ ಪೊಸಜಾದಿಯ ಪೂ ಧವಳಾರವಟ್ಟಿಜಂ
ಜನಿಯಿಸಲಂಜೆವಾಸುಗಳೊಳೋಪಳಪೆರ್ಮೊಲೆನೆಂಕೆಯಿಂದದೇಂ
ತನತನಗಿಕ್ಕಿ ಮೆಟ್ಟಿದುದೊ ಭೋಗಿಜನಂ ಶಿಶಿರಾತಿರೇಕಮಂ ೩೧೩

(ಜಗನ್ನಾಥವಿಜಯಂ, ೧೪-೧೯; ಸೂಕ್ತಿ, ೧೦-೨೬೩)

ಓರಂತೆ ಮೆಚ್ಚಿದಂ ಕೃತಿ
ಸಾರಂ ಋತುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ

ಇದು ಸರಸ್ವತೀಸರ್ವಾಂಗದರ್ಪಣಾಯಮಾನಪ್ರತಿಭಾಸನೂತನಪುರಾತನ
ಪ್ರಮಾಣ ಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಋತುವರ್ಣನಂ ದಶಮಾಶ್ವಾಸಂ

# ವನವಿಹಾರ ವರ್ಣನಂ

ವನಪಾಲರ್ ಪೇೞ್ವೆ ಭೂಪರ್ ತರುಣಿಯರೊಡನಾನಂದ[1]ದಿಂದೆಯ್ದೆ[1] ಪೋಪಾ
ಬನದೊಳ್ ಪೂಗೊಯ್ವ ಪೂವಿಂ ತುಡುಗೆಯನೊಲವಿಂ ಮಾೞ್ಪ ತೂಗುಯ್ಯಲಂ ಮಾ
ವಿನೊಳಾಡುತಿರ್ಪ ಜೆಟ್ಟೀಱುವ ಮರ[2]ನಡರ್ವಾ[2]ಕಾವಣಕ್ಕೋಪ ತಂತಿಂ
ನ್ನಿಸುನಿಯರ್ ಸಯ್ತುಂಬುದಂ ವರ್ಣಿಸುಗೆ ಕವಿ ವನಕ್ರೀಡೆಯೊಳ್ [3]ನಾಡೆ ರಮ್ಯಂ[3]
(ಸೂಕ್ತಿಸುಧಾರ್ಣವಂ, ೧೧-೧)

ಅದಿರ್ಮುತ್ತೈಯ ನನೆಯಿಂ ಚೂ
ತದ ಕಳಿಕೆಯಿನೆಸೆವ ಕರ್ಣಿಕಾರದ ಪೂವಿಂ
ಕದಳಿಯ ಸುಱಿಯಿಂದೋಲಗಿ
ಸಿದನೋಲಗದೊಳ್ ನೃಪಾಲನಂ ವನಪಾಳಂ ೨
(ಸೂಕ್ತಿಸುಧಾರ್ಣವಂ, ೧೧-೨)

ಕುರುವಕದಂಕುರಂ ತಿಳಕದುಜ್ವಲಪುಷ್ಪವಶೋಕದೊಳ್ದಳಿರ್
ಮರುಗದ ನುಣ್ಗೊನರ್ ದವನದೊಳ್ಗುಡಿ ಮಾವಿನ ಕೆಂದಳಿರ್ ನವಾಂ
ಬುರುಹದ ಮೊಗ್ಗೆ ಸಂಪಿಗೆಯಲರ್ ಸುರಹೊನ್ನೆಯ ಪೂಗಳೆಂಬಿವಂ
[4]ಧರಣಿಪ[4]ಗಿತ್ತು ಮೆಚ್ಚುವಡೆದುತ್ಸವದಿಂ ನುಡಿದಂ ಪ್ರಿಯೋಕ್ತಿಯಂ ೩
(ಜಗನ್ನಾಥವಿಜಯಂ, ೧೪-೪೪; ಸೂಕ್ತಿಸುಧಾರ್ಣವಂ, ೧೧-೩)

ತೊಂಗಲ್ಗೊಂಡಿರ್ದಶೋಕಾತಳಿರನೊಲವಿನಿಂ ತುಂಬಿಗಿಂಪಾದ ಪೂವಂ
ಮಾಂಗಾಯಂ ಪಚ್ಚೆ ಪೊಂಬಾಳೆಯ ಮರುಗಮನಿಂಪಾದ ಕಬ್ಬಾಳಿವಣ್ಣಂ
ಪೊಂಗಿರ್ದಾ ನೆಯ್ದಿಲೊಳ್ತಾವರೆಯ ಮುಗುಳ್ಗಳಂದದಾವಲಂ ಬೆಳ್ಪುವೆತ್ತಿ
ರ್ದಿಂಗೋಲಂ ಪಣ್ತು ದಾಳಿಂಬಗಳನೊಲವಿನಿಂ ತೋಟಿಗಂ ರಾಯಗಿತ್ತಂ ೪

ಸುರಚಿರ ಚಂಪಕಪ್ರಸವ ಕಾಂಚನಪುಷ್ಪಚಯಂ ಕರಂ ಮನೋ
ಹರ ನವಮಲ್ಲಿಕಾಮುಕುಳ ಸಂಕುಳ ನಿರ್ಮಳಮೌಕ್ತಿಕಾಕ್ಷಣೋ
ತ್ಕರಮನುಪೇಂದ್ರಪಾದದುಪಭೂಮಿಗೆ ಸೂಸಿದನುತ್ಸವಂ ಪೊದ
ಳ್ದಿರೆ ವನಪಾಲಕಂ ನತಚಳಾಳಕನುದ್ಧತರೋಮಜಾಳಕಂ ೫

---

[1] ನಕ್ಕೆಯ್ದೆ (ಸ) [2] ವಡರ್ದುಂ (ಸ) [3] ವರ್ಣನೀಯಂ (ಸ) [4] ಮುರರಿಪು (ಅ)

ವನಲಕ್ಷ್ಮಿಗೆ ಮಧುವಿಂ ಯು
ವ್ವನಲಕ್ಷ್ಮಿ ಪೊದೞ್ದು ರಂಜಿಸಿರ್ದಪುದಾ ನಂ
ದನಲಕ್ಷ್ಮಿಗೆ ಭೋಗಾನಂ
ದನಲಕ್ಷ್ಮಿಯನುಂಟುಮಾಡಿಕುಂ ನಿಜಗತಿಯಿಂ ೬

ಎಸಗಿದುದೀಗಳೀಗಳಿನಿಸೊಯ್ಯನೆ ತೆಂಗಣಗಾಳಿ ಕೋರಕ
ಪ್ರಸರದೊಳೀಗಳೀಗಳೆಸೆದಪ್ಪುದು ಚೂತಮಹೀಜಮೆಯ್ದೆ ರಾ
ಗಿಸೆ ದೆಸೆಗೀಗಳೀಗಳುಲಿದಪ್ಪುದು ಕೋಗಿಲೆ ಕಂತು ಬಿಲ್ಲನೇ
ಱಿಸಿದಪನೀಗಳೀಗಳಿದು ಸುಗ್ಗಿಯದೊಂದು ಪೊಡರ್ಪುಗಾಣ್ಬುದುಂ ೭
(ಕಾವ್ಯಾವಲೋಕನಂ, ೩೭೬; ಸೂಕ್ತಿಸುಧಾರ್ಣವಂ, ೧೧-೪)

ಅವಧರಿಸಂಗಜನ್ಮ ತನಿಗರ್ಬಿನ ಸೋರ್ವ ರಸಪ್ರವಾಹದಿಂ
ದವೆ ನನೆವೊಯ್ದು ಕಾಯ್ ತುಱುಗಿ ಪಣ್ತುದು ಮಾಮರನೆಂದು ಬಂದು ಬಿ
ನ್ನವಿಸೆ ಬಸಂತಕಂ ಪಡೆದು ಭಾವುಪಕಾರಿಯೆನುತ್ತ ಚಿತ್ತಸಂ
ಭವನಲರ್ವಿಲ್ಲನಂತಿರಿಸಿ ಕರ್ಬಿನ ಬಿಲ್ವಿಡಿವಂ ಜನಂಗಳೊಳ್ ೮

ಎಕ್ಕಲದುಂಬಿಯಿಂ ಜವಳಿದುಂಬಿಯಿನಟ್ಟುವ ಮಾಲೆದುಂಬಿಯಿಂ
ದಿಕ್ಕುವ ಕುಂಚದಂತೆಸೆವ ಗೊಂದಣದುಂಬಿಯಿನಾವ ಮೆಯ್ಯೊಳಂ
ಮೊಕ್ಕಳವೆಂಬಿನಂ ಕವಿವ ಗಾವರದುಂಬಿಯಿನಾದ ಗಾವರಂ
ತೆಕ್ಕನೆ ತೀವಿ ಕೂಡೆ ಬಗೆಗೊಂಡುದು [1]ಪೂತ[2]ಬನಂ ಬಸಂತದೊಳ್ ೯
(ಸೂಕ್ತಿಸುಧಾರ್ಣವಂ, ೧೧-೧೦)

ತರಳಾಪಾಂಗದ ಬೆಳ್ಪು ಕೆಂದಳದ ಕೆಂಪೋರೋರ್ಮೆ ಪೊಣ್ಮಲ್ ತಳಿರ್
ಮರನಂ ಪೂಮರನಾಗೆ ಪೂಮರನುಮಂ ತಾಂ ಬೇಗದಿಂದಂ ತಳಿರ್
ಮರನಾಗುತ್ತಿರೆ . . ನ್ನಸೃಷ್ಟಿವಡೆವುತ್ತಂ ಯಾನವಾಂದೊಳಿಕಾ
ಭರಣಾ ನಿನ್ನಬಲಾಳಿ ಪೂದಿಱುವುದಂ ನೋಡೀ ವನಕ್ರೀಡೆಯೊಳ್ ೧೦

ವಸುಧಾಮಂಡಳಮಂ ಮರುಳ್ಗೊಳಿಪ ರೂಪಾಶ್ಚರ್ಯದಿಂ ಮುತ್ತಿನೆ
ಕ್ಕಸರಂ ಮಲ್ಲಿಗೆ ಚಂದನಂ ಮೆಱೆಯೆ ಚೆಲ್ವಿಂ ಕಂಪು ಸೊಂಪಾದ ಮೆ
ಯ್ವೆಸದಿಂ ಮನ್ಮಥ ಚಂದ್ರ ಚೈತ್ರರೆ ವನಕ್ರೀಡಾರ್ಥಮೇೞ್ವಂತಿರೇ
ೞ್ದ ಸಭಾಮಂಟಪದಿಂ ತ್ರಿವಿಷ್ಟಪಸಭಾಮಾಣಿಕ್ಯದೀಪಾಂಕುರಂ ೧೧
(ಅನಂತನಾಥಪುರಾಣಂ, ೬-೯೩; ಸೂಕ್ತಿಸುಧಾರ್ಣವಂ, ೧೧-೨೦)

---

[1]ಕೂಡೆ(ಸೂ) [2]ಙಂ(ಸ)

ತೆಗೆವುತ್ತಂ ಮೇಲುದಂ ಪೆರ್ಮೊಲೆಗೆ ಪರಿಚಯಂ ಹಸ್ತದಿಂದೊತ್ತುತಂ ಸಾ
ವಗಿಸುತ್ತಂ ಜೋಲ್ದ ಧಮ್ಮಿಲ್ಲಮನಳವಡಿಸುತ್ತಂ ಕುರುಳ್ಗೊಂಗಲಂ ನೀ
ವಿಗೆ ಕಾಂಚೀದಾಮಮಂ ಸಾಚುರ್ತಮಬಲೆಯರೋರೊರ್ವರೊಂದೊಂದು ಪಾಂಗಿಂ
ಬಗೆಗೊಂಡೇಟ್ವಿನ್ನೆಗಂ ತನ್ನೊಡನೆ ನೃಪ ವನಕ್ರೀಡೆಗೆಂದೆದ್ದನಾಗಳ್ ೧೨

ಜಡಿವ ಪಡಿಯರರ ಸೊಗಯಿಪ
ನುಡಿಗಾರರ ಮೇಳದರಸುಗಳ ಮೆಲ್ಲನೆ ಕೈ
ಗುಡುವ ಸೊಬಗಿಯರ ನೆರವಿಗ
ಳೊಡನೆದ್ದಂ ವನಮನೊಸೆದು ನೋಟ್ಪಿಜ್ಜಗದಿಂ ೧೩

ಪಣ್ಣುಗೆ ರತ್ನನಿಚಯದಿಂ
ಕಣ್ಣುಳ್ಳ ಜನಗಳ್ ತಟಿಲ್ಲತಾಭ್ರಭ್ರಮೆಯಿಂ
ಪಣ್ಣಿ ಗೃಹಾಂಗಣತಳದೊಳ್
ಪಣ್ಣಿರ್ದುದು ಪಟ್ಟವರ್ಧನಂ ಭದ್ರಗಜಂ ೧೪

ಅರಸಿ ಪೆಱಗೇಱೆ ಮದವ
ತ್ಕರಿಧವಳಮನೇಱಿ ಮೆಱೆದನವನಿಪಧವಳಂ
ಶರದಂಬುದಮಂ ರೋಹಿಣಿ
ವೆರಸೇಱುವ ಚಂದ್ರನಂತೆ ಪೆರ್ವಾಸನದೊಳ್ ೧೫

ಮುಡದಿಂದೊತ್ತಿದನಾ ಮದಾಂಧಗಜಮಂ ಪಿಂತಿರ್ದ ನಲ್ಲಳ್ಗೆ ಮೆಯ್
ಗೊಡುತಂ ಮೆಲ್ಲನಿೞಿಂಪಿ ಕೈಯಲಗನತ್ತಲ್ ನೀಡಿ ಕುಂಭಾಗ್ರಮಂ
ಪೊಡೆಯುತ್ತಂ ಪಿಡಿದಗ್ರಪಲ್ಲವಮನುದ್ದಂತಾಗ್ರಮಂ ಮೆಟ್ಟಿ ಕೈ
ಯೆಡೆಯಿಂ ಲಂಘಿಸಿದಂ [೧]ಕೆಲ[೧]ಕ್ಕೆ ಜವದಿಂ ಸಾಹಿತ್ಯರತ್ನಾಕರಂ ೧೬

(ಅನಂತನಾಥಪುರಾಣಂ, ೬–೯೭; ಸೂಕ್ತಿಸುಧಾರ್ಣವಂ, ೧೧–೨೬)

ರದನದೊಳಿಟ್ಟ ಪೊಂಬಳೆ ಕೊಡಂಕೆಯ ಚಾಮರಮುಂದಮಾದ ರ
ನ್ನದ ಮೊಗರಂಬಮಂಬರವನಳ್ಳಿಱುವಗ್ರಪತಾಕೆ ಪಲ್ಲವಂ
ಪುದಿದಮುಳಾತಪತ್ರಮುಳವಟ್ಟಿರೆ ನೆಟ್ಟನೆ ಪಣ್ಣಿ ಬಂದ ಪ
ಟ್ಟದ ಕರಿಯುಂ ನರೇಂದ್ರನೊಸೆದೇಱುದನೇಱೆ ಮುಂದಂ ಮುಖಾಬ್ಜಮಂ ೧೭

---

[೧]ನೆ(ಸೂ)

ತೊಡಿಗೆಯ ಬಂಬಲ್ವೆಳಗುಂ
ಬೆಡಂಗುವಡೆದಂಗಕಾಂತಿಯುಂ ತಳ್ಕುವಿನಂ
ಪಿಡಿಯಿಂದಿೞಿದಳ್ ಕಾರ್ಮುಗಿ
ಲೆಡೆಯಿಂ ಕುಡಿಮಿಂಚು ಘೞಿಲನಿೞಿವವೊಲೊರ್ವಳ್ ೧೮

ಕೆಂದಳಿರೇಱದ ನವಮಾ
ಕಂದದ ನೆಲೆಗೊಂಬು ನೆಲಕೆ ಭರದಿಂ ಜೋ
ಲ್ವಂದದೊಳಿೞಿದಳ್ ಕುಚಭರ
ದಿಂದಂ ನಡು ಬಳ್ಕೆ ಪೊನ್ನಪಣ್ಣುಗೆ ಪಿಡಿಯಿಂ ೧೯

ತೆಂಗಾಳಿಯಿನಂಶುಕದ ಸೆ
ಱಂಗು ತೆಱಂಬೊಳೆಯೆ ಪಿಡಿಯನಿೞಿದಳದೊರ್ವಳ್
ತುಂಗಪುಳಿನಾಗ್ರದಿಂ ಧರೆ
ಗಂಗಜನಿೞಿಪುವ ಸಮೀನಕೇತನಶ್ರೀಯೊಲ್ ೨೦

ಸ್ಮರಕೃತಕಾಚಲಶಿಖರಾಂ
ತರಲತೆ ಮೇಲ್ವಾಯ್ದುವೊಂದು ಸೋಗೆಯ ಬಿಣ್ಪಿಂ
ಧರೆಗೆಱಗುವಂತದೊರ್ವಳ್
ವರವಧು ಬಿಡುಮುಡಿಯನೆಸೆದು ಪಿಡಿಯಿಂದಿೞಿದಳ್ ೨೧

ಪಿಡಿಯಿಂದಿೞಿದಳ್ ಪೆಱವಳ್
ಪಿಡಿಯಿಂ ನಡು ಸಣ್ಣವೆನಿಪ ವಧು ಮದನನ ಕೈ
ಪಿಡಿಯಂತೆಸೆದೀಕ್ಷಿಪರಂ
ಪಿಡಿಯಂಬಿಂ ಕಾಮನಾರ್ದು ಸಾರ್ದೆಸೆವಿನೆಗಂ ೨೨

ಸರಸಿರುಹಂಗಳಿಂದಿೞಿವ ರಾಜಮರಾಳಿಗಳಂತೆ ಕೇಳಿಭೂ
ಧರಶಿಖರಂಗಳಿಂದಿೞಿವ ಸೋಗೆಯ ಗೊಂದಣದಂತೆ ಬಂದ ಮಾ
ಮರದೆಳಗೊಂಬಿನಿಂದಿೞಿವ ರಾಜಶುಕಾವಳಿಯಂತೆ ತೇರ್ಗಳಿಂ
ಕರಿಣಿಗಳಿಂದ[1]ಮಂದಣದಿ[1]ನೇನಿೞಿತಂದರೊ ವಾರನಾರಿಯರ್ ೨೩

(ಅನಂತನಾಥಪುರಾಣಂ, ೭–೩: ಸೂಕ್ತಿಸುಧಾರ್ಣವಂ. ೧೧-೨೭)

---

[1] ವಾಂದೊಳ(ಸ)

ಸಮೆದ ಪಿಕಸ್ವನವಾದ್ಯಂ
ಭ್ರಮರೀರವಗೀತಮನಿಲಲುಳಿತ ಲತಾನೃ
ತ್ಯಮನೊಡರ್ಚುವಿನಂ ಸಂಗೀ
ತಮನುಪವನರಂಗಮಂ ನೃಪೇಂದ್ರಂ ಪೊಕ್ಕಂ ೨೪

ಅನಿಲಾಂದೋಳಿತಪಾದಪಾಗ್ರವಿಲಸತ್‌ಪುಷ್ಪೋತ್ಕರಂ ಸೇಸೆಯಾ
ಗೆ ನವೋದ್ಭಿನ್ನ ಸರೋಜಮುಂದಮಧುಗಂಧವ್ರಾತಂಭೃಂಗಾಂಗನಾ
ನಿನದಂ ಮಂಗಳಗೀತಮಾಗೆ ಪಿಕಕೋಕಾನೀಕನಾನಾವಿಧ
ಧ್ವನಿಗಳ್ ವಾದ್ಯನಿನಾದಮಾಗೆ ನಡೆದಂ ಸಂಗೀತಗಂಗಾಧರಂ ೨೫

ವನಕೇಳಿಗೆ ದಿಗ್ವನಿತಾ
ಜನಮಂ ತಳರ್ವಂತೆ ಕಂತು ಭೋರೆನೆ ತೂರ್ಯ
ಸ್ವನಮಖಿಳಕಾಮಿನಿಯರ್
ಘನ[ದಶ]ದಶಶತ ಸಹಸ್ರದಿಂದಂ ತಳೆದರ್ ೨೬

ಅಂಗದರತ್ನಕೌಸ್ತುಭಮಣಿದ್ಯುತಿಪಲ್ಲವಿತಂ ಮುರಾರಿ ಬಂ
ದಂ ಗಮನಶ್ರಮಾಂಬು ರಣಭೂಷಣಮೌಕ್ತಿಕಕುಟ್ಮಳಪ್ರರೂ
ಢಾಂಗವಧೂಜನಂ ಬರೆ ವಿಳಾಸದ ಜಂಗಮಕಲ್ಪಭೂರುಹಂ
ಜಂಗಮಕಲ್ಪವಲ್ಲರಿಗಳಿಂ ಪರಿವೇಷ್ಟಿತಮಾಗಿ ಬರ್ಪವೋಲ್ ೨೭

ಸಲ್ಲಲಿತಾಂಗಿಯರ್ ಮಣಿವಿಭೂಷಣಕಾಂತಿಯಿನೀಕ್ಷಣಾಂಶುವಿಂ
ಪಲ್ಲವಪುಷ್ಪಜಾಲಮನಪೂರ್ವಮನೆಯ್ದೆ ಕುಚಾಳಿಗಿತ್ತನಿ
ತ್ತಲ್ಲದೆ ಕೋಮಲಾಂಗರುಚಿಯಿಂ ನಖರೋಚಿಯಿನಧ್ವವಲ್ಲಿಗಂ
ಪಲ್ಲವಪುಷ್ಪಮಂಜರಿಯನಾಗಿಸುತಂ ನಡೆದರ್ ವನೋರ್ವಿಯೊಳ್ ೨೮

ಎಳಲತೆಗಳ್ಗೆ ಸೋಗೆಗೆ ಸರೋಜಕುಲಕ್ಕೆ ಪಿಕಕ್ಕೆ ತಮ್ಮ ತೋ
ಳ್ಗಳ ಕುಡಿ ನೀಳ್ದ ಸೋರ್ಮುಡಿ ಮೊಗಂ ಗುಡಿ ಮೆಲ್ನುಡಿ ಮತ್ಸರಂಗಳಂ
ಬಳೆಯಿಸಿ ಮುತ್ತುವಂತೆ ಬನಮಂ ನಡೆದರ್ ಮೃಗನೇತ್ರೆಯರ್ ಸಮು
ಜ್ವಳಮುಖಬಿಂಬೆಯರ್ ಕುಟಿಲಕುಂತಳೆಯರ್ ವಿಚಳಲ್ಲತಾಂಗಿಯರ್ ೨೯
(ಅನಂತನಾಥಪುರಾಣಂ, ೭-೭; ಸೂಕ್ತಿಸುಧಾರ್ಣವಂ, ೧೧-೨೯)

ನಡೆಗೊಳಲಂಚೆ ನುಣ್ಗುರುಳೊಳಾಱಿಡಿ ತೋಳ್ಗಳೊಳಳ್ಳೆಗೊಂಬು ಸೋ
ರ್ಮುಡಿಗಳೊಳೆಯ್ದೆ ಸೋಗೆ ಪೊಸಪೆರ್ಮೊಲೆಯೊಳ್ ಪೊಣರ್ವಕ್ಕಿ ನಿಚ್ಚಲುಂ
ಕಡುಮುಳಿಯುತ್ತಮಿರ್ಪವನೆ ಮೇಲೊಳಕೊಂಡೆವೆನುತ್ತ ಕಾಯ್ದು ಧಾ
ಳಿಡುವವೊಲಾ ವನಕ್ಕೆ ನಡೆತಂದುದು ಪೆಂಡಿರ ತಂಡವೇೞ್ಗೆಯಿಂ ೩೦

ಹಿಮಕೃತ್ಪಂಕ್ತಿಯೊ ಕಾರ್ಮುಗಿಲ್ಗಳೊ ರಥಾಂಗಶ್ರೇಣಿಯೋ ಕಾಮಬಾ
ಣಮೊ ಪೇೞ್ತಂಬಿನಮಾಸ್ಯಕೋಮಳತೆಯಿಂ ಭೃಂಗಾಳಿಕಾನೀಕದಿಂ
ದಮರ್ದುತ್ತುಂಗಕುಚಂಗಳಿಂ ಸದಾಪಾಂಗಜ್ಯೋತಿಯಿಂ ಚಿತ್ರವಿ
ಭ್ರಮಮಂ ಸಾಲಿಡುವಾ ವನಕ್ಕೆ ಮುದದಿಂದೆಯ್ದಿತ್ತು ಕಾಂತಾಜನಂ ೩೧

ಧ್ವನಿಯಂ ಕೋಗಿಲೆಗಳ್ಗೆ ಮೆಲ್ನುಡಿಗಳಂ ಕೀರಾಳಿಗಳ್ಗಾತ್ಮಕಂ
ಪನಮಂ ಕೋಮಲವಲ್ಲಿಗಳ್ಗಲಸಯಾನಪ್ರೌಢಿಯಂ ಹಂಸೆಗ
ಳ್ಗೆ ನವೀನಂ ಮಿಗೆ ನೋಟಮಂ ವನಮೃಗಕ್ಕಾನಂದಸೌಭಾಗ್ಯಗುಂ
ಘನಮಂ ತದ್ವನದೇವಿಯರ್ಗೆ ಸಲಿಸುತ್ತೆಯ್ದಿತ್ತು ಕಾಂತಾಜನಂ ೩೨

ಚಾಪಲದೃಷ್ಟಿಯಿಂ ಕೆಲವು ಶಾಖೆಗಳೊಳ್ ಕೆಲವಂಘ್ರಿಪಂಗಳೊಳ್
ತೂಪಿಱುದುನ್ನತಸ್ತನದ ಸೋಂಕುಗಳಿಂ ಕೆಲವು ಕುಜಂಗಳೊಳ್
ನೂಪುರರಂಜಿತಾಂಘ್ರಿತಳಸಂಗಮದಿಂ ಕೆಲವೃಕ್ಷದೊಳ್ ಪಿಕಾ
ಳಾಪೆಯರೊಲ್ದು ಪಲ್ಲವಮನಿತ್ತೊಲವಿಂ ನಡೆತಂದರಟ್ಟಿಯಿಂ ೩೩

ಸ್ಮರರಾಜಂ ವನಪಾಲನಾಗೆ ರತಿ ಲಾವಣ್ಯಪ್ರವಾಹೋತ್ಕರಂ
ಪರಿನೀರಾಗೆ ನಿರಂತರಂ ಋತುಗಳಾಳುಂ ಕಾಪಿನಾಳಾಗೆ ಚೈ
ತ್ರರವೋದ್ಯಾನದ ಚೆಲ್ವನೊತ್ತರಿಸಿ ಕೇಳೀಶೈಲ ಕೇಳೀಸರೋ
ವರ ಕೇಳೀಗೃಹಮೆಂಬಿವಂ ತಳೆದು ಕೇಳೀನಂದನಂ ರಂಜಿಕುಂ ೩೪

ಕುಸುಮರಸಂಗಳೊದ್ದೆ ತನಿವಣ್ಣ ರಸಂಗಳ ಸೋನೆ ಸಾರಕೋ
ಳ್ಗೆಸಱಿತಳನೀರ ಜೆಂಚೆ ಸೋನೆಯೊಳ್ಗೆಸಱಿತಂಬಿವಱಿಂದಮೆಲ್ಲಿಯುಂ
ಬಸನದ [1]ಬಾೞ್ತೆ[1]ಯುಪ್ಪೊಡೆಗಳಿಲ್ಲದೆ ನಲ್ಲರನಂಗರಾಗಮಂ
ಬರ್ಸೆ ಭರದಿಂ ತೊೞಲ್ದಱಸುವರ್ ಬನದೊಳ್ ಕೃತಕಾಚಲಂಗಳಂ ೩೫

(ಮಲ್ಲಿನಾಥಪುರಾಣಂ, ೨-೩೫; ಸೂಕ್ತಿಸುಧಾರ್ಣವಂ, ೪-೪೦)

ಪುಳಿನತಮಾಲಕೋಮಲದ ಶಾಖೆಯ ಚೆಲ್ವನನೆಯ್ದೆ ಗೆಲ್ದುವಿ
ಪ್ಪುಲಘುಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿಗೆಜ್ಜೆಯಿಂಚರಂ
ವಳಯದ ನುಣ್ಸರಂ ನೆಗೞ್ತೆ ನಂದನದೊಳ್ ಸುೞಿದರ್ ಲತಾಂಗಿಯರ್ ೩೬

---

[1] ಮಾೞ್ಕೆ(ಸ)

ತಿಲಕಂ ನೋಡೆ ಪ್ರಿಯಂಗು ಮುಟ್ಟೆಯೊಳಿಮಾವ್ ಕೊಂಡಾಡೆ ವೃಕ್ಷೋತ್ಪಲಂ
ಮುಳಿಸಿಂ ಚಿಂತಿಸೆ ಲೊಕ್ಕಿ ಸುಯ್ಯೆ ಸುರಗಿ ಷ್ಕಂ ಪಾಡೆ ಸಚ್ಚಂಪಕಂ
ನಲವಿಂ ನಕ್ಕೊಡಶೋಕೆ ಪೆಟ್ಟೆ ಬಕುಳಂ ಗಂಡೂಷಿಸಲ್ ತೋರಣಂ
ಸಲೆಯುಪ್ಪಲ್ ತರು ಪೂತವಾ ಸತಿಯರಿಂದಿಂತುಂ ದಶಂ ದೋಹಳಂ ೩೭

ಎನ್ನಯ ನಲ್ಲನ ನೊಸಲಲಿ
ಚೆನ್ನಿನೊಳಿಪ್ಪುದಱ ನಾಮವಿದಕೆಂದು ಕರಂ
ಕನ್ನೆ ನಿರೀಕ್ಷಿಸೆ ಪೂ ತಳಿ
ರಿಂ ನೆಗೞ್ದುದು ವಿದುಪ್ಪೈಕತಿಲಕಂ ತಿಲಕಂ (?) ೩೮

ಮಾಕಂದಗಾಸೆಯಾದುದು
ಲೋಕಕೆ ಸುರಭೂಜವೆನಿಸಿತೆಂದಬ್ಜಾನನೆ
ಬೇಕೆಂಬೊಲು ಕೊಂಡಾಡಲ್
ಮಾಕಂದಂ ತಳಿತು ಪೂತು ಕಾಯ್ತುವುವೆತ್ತಂ ೩೯

ಬಂದಪನೆಂದಿನಿಯಂ ಪೋ
ಗಿಂದುಂ ಬರಲಿಲ್ಲ ಮಧುವೆ ಬಂದುದೆನುತ್ತಂ
ಇಂದುಮುಖಿ ಚಿಂತಿಸಲ್ ಪೂ
ವೊಂದಿದವಲ್ಲಲ್ಲಿ ಕರ್ಣಿಕಾರದ್ರುಮದೊಳ್ ೪೦

ಪರಿರಂಭ ಚುಂಬನಂಗಳ
ಸುರತದಿ ತನ್ನಿನಿಯ ಮಾಟ್ಪುದಂ ನೆನೆಯುತ್ತಂ
ವಿರಹೋನ್ಮಾದಿನಿ ಸುಯಿತರೆ
ಕರಮೆಸೆದುದು ಸಿಂಧುವಾರ ಪೂ ತಳಿರಿಂದಂ ೪೧

ಮಧುರಂ ಮಂದರ ತಾರಕ
ಡೊದವಿಂದಂ ಶುದ್ಧ ಸಾಳಗಂ ಸಂಕೀರ್ಣದಿ
ಸುದತಿ ನೆಱೆ ಪಾಡೆ ಪೂ ತಳಿ
ರೊಡವಿರ್ದುದು ಬೇಗದಿಂದೆ ಸುರಹೊನ್ನೆಯೊಳಂ ೪೨

ಇನಿಯನಿದಿರಲ್ಲಿ ಸುೞಿಯಂ
ಮುನಿದಾತಂ ಪೋಗೆ ತನ್ನ ಕೋಪಂ ತೀವ್ರಂ
ಎನುತುಂ ಬೇಡಿಯೆ ಮನ್ಮಥ
ನೆನುತಂ ಸತಿ ನಗಲು ಪೂತವಾ ಚಂಪಕಗಳ್ ೪೩

ತನ್ನರುಣದಳಿರ್ಗಳಿಂದಲಿ
ಯೆನ್ನಡಿಗೀಡಪ್ಪುದೆಂಬ ಕಿನಿಸಿಂದಂಗನೆ
ಪನ್ನತಿಕೆಯಿಂದಲೊದೆಯಲ್
ಸನ್ನುತ ಪಲ್ಲವವಶೋಕೆಯೊಳ್ ರಂಜಿಸುಗುಂ ೪೪

ವಾರುಣಿಯನೀಂಟಿ ದಣಿವುತ
ಸಾರಸಮುಖಿ ಮುಕ್ಕುಳಿಸಿಯುಗುಳಲ್ಕಾಗಳ್
ಪೂರೈಸಿ ಪೂತು ತಳಿತುದ
ಪಾರಂ ಬಕುಳದ್ರುಮಾಗ್ರದೊಳಗನವರತಂ ೪೫

ಎದೆಯಳವನಱಿಯದವನಂ
ಪದೆದಮರ್ದಪ್ಪುವದಱಿಂದಲಿಂತದನಾಲಿಂಗಿ
ಪ್ಪುದು ಲೇಸೆನುತಂ ತಳ್ಕಿಸೆ
ಪುದಿದೆಸೆದುವು ಪೂಗಳೆಯ್ದೆ ಕುರವಕ ಕುಜದೊಳ್ ೪೬

ಪರಿತಂದುತ್ಸಾಹದಿಂದರ್ಚಿಸಿದರೊಸೆದು ವಾಸಂತಿಯಂ ಸಾಂದಿನಿಂ ಮಾ
ಮರನಂ ಶ್ರೀಖಂಡದಿಂ ಮಲ್ಲಿಗೆಯನಗರುವಿಂ ಚಂಪಕಾನೀಕಮಂ ಕ
ಸ್ತೂರಿಯಿಂ ಕಂಕೆಲ್ಲಿಯಂ ಕಂಪಿಡಿದ ಕಮಳದಿಂ ನಾಗಮಂ ನೆಯ್ದಲಿಂ ಪಾ
ದರಿಯಂ ಕಾಶ್ಮೀರದಿಂ ಕೇಸರಮನಮಳ ಕರ್ಪೂರದಿಂ ಕಾಂತೆಯರ್ಕಳ್

(ಲೀಲಾವತಿ, ೧೩-೬೪)

ಬಂಬಲ್ಗುರುಳೊಡನಾಡಿಗೆ
ತುಂಬಿಗೆ ಪಗೆಯೆಂದು ಮುಳಿದು ಸಂಪಗೆಯೆಸೞಿಂ
ತುಂಬಿಗುರುಳ್ಗೊಪ್ಪಿಸಿದಪ
ಳೆಂಬಿನಮೆಸೞ್ಗಳನೆ ತಿಱಿದು ಸೂಡಿದಳೊರ್ವಳ್ ೪೮

(ಅನಂತನಾಥಪುರಾಣಂ, ೭-೧೪, ಸೂಕ್ತಿ ಸುಧಾರ್ಣವಂ, ೧೧-೩೮)

ಸಱಿಸುಯ್ಗೆ ತುಂಬಿಗಳ್ ಬಂ
ದೆಱಗೆ ಕರಾಂಬುಜದಿ ಕಮಳಮುಖಿ ಸೋವುತ್ತಂ
ಮಿಱುಗುವ ನೀಲದ ಬಟ್ಟೆನ
ತಿಱಿಕಲ್ಗಳನಾಡುವಂತೆ ಸತಿ ಸೊಗಯಿಸಿದಳ್ ೪೯

ನೀರೇಜವದನೆ ತಿಱಿದಳ್
ತೋರಿದ ಮಲ್ಲಿಗೆಯ ಮುಗುಳನಾಗಳೆ ಕಾಶ್ಮೀ
ರಾರುಣ ಕರಪಲ್ಲವದಿಂ
ತಾರಗೆಯಂ ತಿಱಿವ ಪೂರ್ವಸಂಧ್ಯಾಂಗನೆವೋಲ್ ೫೦

(ಲೀಲಾವತಿ, ೧೩-೭೭; ಸೂಕ್ತಿ ಸುಧಾರ್ಣವಂ, ೧೧-೪೨)

ಮರುಳೊಡನಾಡಿದ ಕತದಿಂ
ಮರುಳಾದನದಲ್ಲದಂದು ಸೂಡನೆ ಶಶಿಶೇ
ಖರನೆಂದು ಕೊಯ್ದಳೊರ್ವಳ್
ಪರಿಮಳಮಂ ಬೀಱುತಿರ್ಪ ಹೊಂಗೇದಗೆಯಂ ೫೧

(ಜಗನ್ನಾಥವಿಜಯಂ, ೧೪-೪೪; ಸೂಕ್ತಿ ಸುಧಾರ್ಣವಂ, ೧೧-೪೬)

ಸುರಹೊನ್ನೆಯ ಮುಗುಳಂ ಕೊ
ಯ್ದರವಿಂದದ ನೂಲೊಳೊಪ್ಪೆ ಕಟ್ಟಿದಳೊರ್ವಳ್
ಪರಿಮಳಮುಳ್ಳೆಳೆಮುತ್ತಿನ
ಸರಮೆತ್ತಣದೆಂದು ಮುಗ್ಧೆಯರ್ ಮುತ್ತುವಿನಂ ೫೨

(ಅನಂತನಾಥಪುರಾಣಂ, ೭-೨೦, ಸೂಕ್ತಿಸುಧಾರ್ಣವಂ, ೧೧-೪೮)

ಅರ್ಚಿಸದಾಯಲಾಗ ಪೊಸಪೂಗಳನಂದಿವೆ ಚಂದನಚ್ಛಟಾ
ಚರ್ಚೆಗಳೆಂಬವೋಲಡಸಿ ನೋಡಿ ನಖಾಂಕುರಕಾಂತಿದಾಮದಿಂ
ದರ್ಚಿಸುವಂತೆ ನೀಡಿ ನಳಿತೋಳನಲಂಪಿನೊಳಾಯ್ದು ಕೊಯ್ದು ಕೈ
ಮುರ್ಚಲ ತೋರಮಲ್ಲಿಗೆಗಳಂ ತಳಿರ್ವಟ್ಟಲೊಳೊರ್ವಳೊಟ್ಟಿದಳ್ ೫೩

(ಲೀಲಾವತಿ, ೧೩-೬೬)

ವದನದ ಕಂಪನೊರ್ಮೆ ಸೆಳೆಗೊಂಬಿನ ಪೂಗಳನೊರ್ಮೆ ಸೂಱುಸೂ
ಱದೆ ಮುಸುಱುತ್ತಲಿರ್ಪ ಮಱಿದುಂಬಿಯನೀಯಡೆ ಸುಯ್ಯೆ ನಾಸಿಕಾ
ವಿದಳಿತ ಚಂಪಕಶ್ವಸಿತ ಸೌರಭಮೊರ್ವಳಪೂರ್ವರೂಪಿನಾ
ಗ[1]ದ[2] ನಗೆವೊಗಳಂ ಬಯಸಿ ಬೆಟ್ಟನೆ ಬಿಚ್ಚಿತಮಾ[1]ಯ್ದು[2]ಳಱಿತ್ತಿಯಿಂ ೫೪

(ಲೀಲಾವತಿ, ೧೩-೬೭)

---

[1] ದೆ(ಸ) [2] ದ(ಸ)

ಅಡರ್ದ ಮೊಲೆಗೊಂಡ ಬಿಣ್ಪಿಂ
ನಡು ಬಳಬಳ ಬಳ್ಕೆ ನಿಲ್ಕಲಾಱದೆ ತಳಿರಂ
ತುಡುಕುವ ಕೆಳದಿಯರ ಕುಚಂ
ಪಿಡಿದೆತ್ತಿದಳೊರ್ವಳಬಲೆ ಸಂಭ್ರಮದಿಂದಂ ೫೫

ಕಾವಲಿರಿವಯಸ್ಕಾಂತದ
ಪೂವಂ ಚುಂಬಿಸುವ ಪಚ್ಚೆವಟುಗಳವೊಲಿಂ
ದೀವರದಿನಬಲೆ ಗೊಂಚಲ
ಪೂವುಗಳಂ ಪೊಡೆಯೆ ಪತ್ತಿ ಮುತ್ತಿದವಳಿಗಳ್ ೫೬

ಗಾವಳಿಗೊಂಡೆಱಗಿದ ಭೃಂ
ಗಾವಳಿಯಂ ಸೋವಳಿಂದುಬಿಂಬದ ಕಱೆಯಂ
ಸೋವ ಶರಲಕ್ಷ್ಮಿಯವೊಲಿಂ
ದೀವರದಳನಯನೆ ಮಲ್ಲಿಕಾಮಂಜರಿಯಂ ೫೭

ಮೃಗಲೋಚನೆಯೊರ್ವಳ್ ಸಂ
ಪಗೆಯೊಳ್ಮುಗುಳ್ಗೊಯ್ದು ಮುಗುಱೆ ಚಳಕ್ಕೆ ಕರಕಾಂ
ತಿಗಳಿಂ ಮಾಣ್ದಳ್ ಮುಯ್ವಂ
ಮುಗುಳಂ ಕೊಂಡರಲನೀವವೊಲ್ ಮಲ್ಲಿಗೆಯಂ ೫೮

ಎಳಲತೆಯನಂ[1]ಗ[1]ದಿಂ ಕೋ
ಕಿಳಮಂ ಕಳರವದಿ[2]ನಾಕೆ[2] ಗೆಲೆಯಲರ್ಱೆಯಂ
ತಳಿದುದೆನೆ ನಿಟ್ಕಿಲಾಱದೆ
ಸೆಳೆಗೊಂಬಂ ಲಲನೆಯಲುಗೆ ಸೂಸಿದುವಲರ್ಗಳ್ ೫೯

(ಲೀಲಾವತಿ, ೧೩-೮೬ ; ಸೂಕ್ತಿಸುಧಾರ್ಣವಂ, ೧೧-೪೪)

ಕೂಡಿ ತೊಱಲ್ವಿನಿಯನೊಳ
ಱ್ಕಾಡಿದ ಕಣ್ಣಾ[3]ಕೆ[3] ಕೆಳದಿಯಾವಕ್ಕಿನಿಸಂ
ನೋಡಲೊಡನಲ್ಲಿಗಲ್ಲಿಗೆ
ಮೂಡಿದವೊಂದೆರಡು ಕಳಿಕೆ ತಿಳಕದ್ರುಮದೊಳ್ ೬೦

(ಲೀಲಾವತಿ, ೧೩-೯೪)

---

[1]ದ(ಸ, ಅ) [2]ನಿಕ್ಕಿ(ಸೂ) [3]ಲಿ(ಸ)

ಸ್ತನಮುರದೊಳುರ್ಚಿತೆನೆ ಮಿಗೆ
ಮೊನಸಿದ ಮೆಯ್ನವಿರೆ ನಾಂಟತೆನೆ ಕೊಂಬಿನ ಪೂ
ವನೆ ತೋಱಿ ತಿಱಿಯಲೆತ್ತೆನೆ
ತನು ಬಿರಿವಿ[1]ನಮು[2]ಪ್ಪಿದಭಿನವಂ ನವವಧುವಂ ೬೧

(ಲೀಲಾವತಿ, ೧೩-೯೬)

ಅಲರ್ಗೊಂಬನೇಱಿಯಿಱಿಯದ
ಜಲಜಾನನೆ ಭೃಂಗಭಯಮನಿತ್ತಿನಿಯನ ಮೇ
ಲಲಘುಕುಚಕೆ ಬೆರ್ಚಿ ಬೀೞ್ವಳ್
ಮೊಲೆಯುರಮಂ ನಾಂಟೆ ಬೆನ್ಗೆ ಬಳೆವಿನಮೊರ್ವಳ್ ೬೨

(ಲೀಲಾವತಿ, ೧೩-೧೦೧)

ಒಂದು ಕುಚಮುರದೊಳುರ್ಚಿರೆ
ಚಂದನಧವಳಿತನನಪ್ಪಿ ಪೂಗೊಯ್ದಳ್ ತ
ಳ್ತಿಂದುಧರನಂಗದಿಂ ಮುಳಿ
ಸಿಂದಂ ಮಿಗೆ ಮುರಿದು ಮಗುಟ್ದಿ ಗಿರಿಜೆಯೊಲೊರ್ವಳ್ ೬೩

(ಲೀಲಾವತಿ, ೧೩-೧೦೨; ಸೂಕ್ತಿಸುಧಾರ್ಣವಂ, ೧೧-೭೦)

ಎಲೆ ಜಲಜಾಸ್ಯೆ ನಿನ್ನ ನಯನೋತ್ಪಲಮಂ ಮುಱಿದುಂಬಿ ಪತ್ತವಿ
ತ್ತಲೆ ಕವಿತಪ್ಪುದೆಂದವಳ ಕಣ್ಗೆ ನಿಮೀಲನಮಂ ನಿಮಿರ್ಚಿ ಕಾ
ದಲಳಧರಾಗ್ರಮಂ ಸವಿದು ಪೀಡಿಸಿತೀಕೆಯ ವಕ್ತ್ರಪದ್ಮಮಂ
ನಲಿದಳಿಯೆಂದು ತಾಂ ಪುಸಿದನಾಕೆಗೆ ನಲ್ಲಳ ಸೀತ್ಕೃತಂಗಳಂ ೬೪

(ಲೀಲಾವತಿ, ೧೩-೧೦೩; ಸೂಕ್ತಿಸುಧಾರ್ಣವಂ, ೧೩-೭೫)

ಮೊಗಮೀಸೆ ಬಾರದೋಪರ್
ಸೊಗಯಿಸೆ ಪೆಣ್ಬರಿಜನಿಟ್ಟು ಬರೆ ಪೂದಿಱಿವ
ಚ್ಚಿಗದಿಂದಮೆಯ್ದೆ ಮೆಚ್ಚಿದ
ಬಗೆಯಿಂ ಸ್ಮರಕೇಳಿಗೆಳಸಿದರ್ ಪುಂಶ್ಚಲಿಯರ್ ೬೫

(ಲೀಲಾವತಿ, ೧೩-೧೦೭; ಸೂಕ್ತಿಸುಧಾರ್ಣವಂ, ೧೧-೭೬)

---

1. ನೆಗ(ಸ) 2. ಮೊಗಕ(ಸ)

ಪೊಸತಿಕ್ಕುವಂತೆ ಕಾಮನೆ
ಪೊಸನಿಧಿಯಂ ಕಾಮಕಾಳಸರ್ಪಂಗೊಲವಿಂ
ಪೊಸಮಲ್ಲಿಗೆಯುಮನಡಕೆಯ
ಸಸಿಯುಮನೊಸೆದೊರ್ವಳಿಕ್ಕಿದಳ್ ಸೋರ್ಮುಡಿಯೊಳ್ ೬೬
(ಲೀಲಾವತಿ, ೧೩-೧೦೮; ಸೂಕ್ತಿಸುಧಾರ್ಣವಂ, ೧೧-೫೧)

ಕವಿಧವಳಂ ಕುವಲಯಮಂ
ಕಿವಿಯೊಳ್ ಕುಡೆ ನೂಂಕಿದುದು ಕದಂಪಿನ ಪುಳಕಂ
ಯುವತಿಗೆ ಬೇಱಿಕೆಯೊ ಕ
ನ್ನವುರಂ ಕಡೆಗಣ್ಗಳಿರ್ದವೋಲೆಂಬಿನೆಗಂ ೬೭
(ಲೀಲಾವತಿ, ೧೩-೧೦೯)

ಆಡಸಿ ಪೊದಟ್ದಿ ಪೆರ್ಮೊಲೆಗೆ ಕುಟ್ಮಳಹಾರಮನಟ್ಟಿತ್ತಿಯಿಂದೆ ತಾಂ
ಕುಡುವ ಪದಕ್ಕೆ ಮುನ್ನಮೆನಗೀವುದು ಕಾಂಚಿಯನೆಂದು ಬಂದವ್ರೋ
ಲುಡೆಯನಡುರ್ತು ನೂಂಕಿ ನೆಗೆದಾ ರಮಣೀರಮಣಕ್ಕೆ ಮುನ್ನಮೇಂ
ಕುಡುವುದು ಪಂಗೆ ಬಲ್ಮುಗುಳ ಕಾಂಚಿಯನಾ ರತಿರಾಗದೋಹಳಂ ೬೮
(ಲೀಲಾವತಿ, ೧೩-೧೧೦)

ಸುದತಿಯರಂಘ್ರಿಪಾತದೊಳೆ ಪಲ್ಲವಿಸಿರ್ದನುರಕ್ತವೃತ್ತಿ ಪೆ
ರ್ಚಿದ ಸುಮದಶ್ರೀಳೀಮುಖವಿಕಾರಮದೇತರುರಾಜಿ ನವ್ಮೊಳಿಂ
ತಿದು ಸಮವಾಗಲಾಂ ಸಲೆ ಸಶೋಕನೆನಾದೆನಶೋಕನಾದೆನಿಂ
ತಿದು ವಿಪರೀತವೆಂದು ಪೊಗಟ್ದಿಂ ಪರಿಹಾಸಕನಂದಶೋಕಮಂ ೬೯

ಆಸವಗಂಧದಿ ಒಳಮುಖ
ವಾಸನೆಯೊಳ್ ದೊರೆಯಿದೆಂದು ನೋಡಿವನೊಲವಿಂ
ಕೇಸರಮಂ ಕುಸುಮರಜೋ
ದೂಸರಮಂ ವನಮಹೀರುಹಾಗ್ರೇಸರಮಂ ೭೦

ಪುಳಿನತಮಾಲಪಲ್ಲವದ ಕೋಮಳ ಶಾಖೆಯ ಚೆಲ್ವನೆಯ್ದೆ ಗೆ
ಲ್ದಲಘುಕಟೀತಟಂಗಳರುಣಾಂಘ್ರಿತಳಂಗಳ ದೋರ್ಲತಾಯುಗಂ
ಗಳ ಜಯತೂರ್ಯನಾದಮೆನೆ ಕಾಂಚಿಯ ಮೆಲ್ಲುಲಿಗೆಜ್ಜೆಯಿಂಚರಂ
ವಳೆಯದ ನುಣ್ಚರಂ ನೆಗಱ್ದ ನಂದನದೊಳ್ ಸುೞಿದರ್ ಲತಾಂಗಿಯರ್ ೭೧

ದರಹಾಸಶ್ರೀರುಚಿಯೊಳ್
ಬೆರಸಿದ ತನ್ನಧರಕಾಂತಿಯಿಂದೊಪ್ಪುವುಪಂ
ತರಳಾಕ್ಷಿ ಕೊಯ್ದಳಿರಳೊಳ್
ಬೆರಸಿದ ಮೊಾಂದಳಿರ ತೋರತೊಂಗಲನೊರ್ವಳ್ ೭೨

ಉಂಗುಟನುಂ ಮಹೀತಳದೊಳೂಱೆ ಮಡಂ ನಿಮಿರಲ್ಕೆ ನಿಲ್ಕಿ ನಿಂ
ದಂಗದ ಭಂಗಿ ಕಂಗೊಳಿಸೆ ವಾಮಕರಾಂಚಿತ ಶಾಖೆ ಶೇಖರ
ಕ್ಕಂಗನೆ ಕೊಯ್ದಳಂದಸುಗೆಯೊಳ್ದಳಿರಂ ನಖರಾವಳೀಮಯೂ
ಖಂಗಳನೊಡರ್ಚೆ ನುಣ್ಪೆಸೆವಶೋಕದೊಳಂ ಸಿತಪುಷ್ಪಜಾಲಮಂ ೭೩

ವಳಯ ಝಣತ್ಕೃತಿ ಸೊಗಯಿಸೆ
ನಳಿತೋಳಂ ನೀಡಿ ನಯನರುಚಿ ರುಚಿರತ್ನೋ
ಜ್ವಲತಿಲಕದೊಳ್ ವರಸ್ತ್ರೀ
ತಿಲಕಂ ತಿಲಕಕ್ಕೆ ಕೊಯ್ದಳಿರಲನದೊರ್ವಳ್ ೭೪

ವಲ್ಲಭನ ತೋಳ ಸೋಂಕುಂ
ಮಲ್ಲಿಗೆಯುಂ ಕುಂದದಿರ್ಕೆ ಸಂತತಮೆನಗಾ
ನೊಲ್ಲೆಂ ಪೆಱತನೆನುತ್ತಂ
ಮಲ್ಲಿಗೆಯಂ ಪಿಕನಿನಾದೆ ಕೊಯ್ದಳೆದೊರ್ವಳ್ ೭೫
(ಸೂಕ್ತಿಸುಧಾರ್ಣವಂ, ೧೧-೪೫)

ಪರಿಮಳಮೆಂಬುದು ಕುಸುಮೋ
ತ್ಪರಿಮಳಮೆನಿಪಳಿಗಳೆಂಜಲಿಸಿದ ಪ್ರಸೂನೋ
ತ್ಕರಮೆನುತಲಬಲೆ ಕೊಂಬಂ
ಕರದೊಳ್ ತೆಗೆದಾಯ್ದಳೆಸೆವ ಸಂಪಗೆಯರಲಂ ೭೬

ಇರೆ ಕಂಪುಮೊಳನೆ ಸೌರಭ
ಮಿರದಸ್ಥಿರವರ್ಣವಸ್ಥಿರಾಮೋದದ ಮಿ
ಕ್ಕರಲೇಬಂದವೆನುತ್ತಂ
ಸುರಗಿಯ ಬಿರಿಮುಗುಳನಾಯ್ದು ಕೊಯ್ದಳೆದೊರ್ವಳ್ ೭೭

ಪಾಸಿನೊಳೆಸೆದಿರ್ದೊಡದುಂ
ದೇಸೆಗೆ ನೆಲೆ ಮುಡಿಗೀವುತೆ ತಾನಳವಡುಗುಂ
ವಾಸನೆಯನೀಯುತೆಂದು ವಿ
ಳಾಸಿನಿ ಪರಳಾಯ್ದಳೆಸೆವ ಸೇವಂತಿಗೆಯಂ ೭೮

ಈ ತರುವಿಂಗೆ ಮುಂ ನಿಜದೊಳಿಲ್ಲದ ಪಲ್ಲವಮಾದುದೀಕೆಯಿಂ
ಕೌತುಕಮೆಂಬಿನಂ ತುಱುಗಿ ಪೂತೆಲೆಯಿಕ್ಕಿದ ಪಾಟಳಾವನೀ
ಜಾತದೊಳಂ ನಿಜಾರುಣಪದದ್ಯುತಿಪಲ್ಲವಮಂ ನೆಗೞ್ಚಿಲೇಂ
ಪ್ರೀತಿಯಿನೊರ್ವಳಾಯ್ದಳೊ ತನೂದರಿ ಪಾಟಲಿಯೊಳ್ ಲತಾಂತಮಂ ೭೯

ಜಾತಿಗೆ ಪುಷ್ಪಜಾತಿಗಳ ಜಾತಿಯುಮೇಂ ಸಮಜಾತಿಯಪ್ಪವೇ
ಜಾತಿಯೆ ಜಾತಿ ಮಿಕ್ಕರಲಜಾತಿಯುಮೇತಱ ಜಾತಿಯೆಂದಣಂ
ಜಾತಿಯ ಜಾತಿಯಂ ಪೊಗೞ್ದು ಜಾತಿವಿಚಾರಮದೆಂದು ಕೊಯ್ದಳಾ
ಜಾತಿಯುಮಾ ವಿದಗ್ಧವಿಟಭೂರಿಯುಮಾ ರತಿರಾಗದೂತಿಯಂ ೮೦

ನಲವಿಂದಂ ಮುಡಿವಾಳದ
ನೆಲೆಗೆಯ್ತಂದಗತನೂಜೆ ಬೇರಂ ಬಲ್ಲ
ರ್ಗೆಲೆದೋಱಲೇಕೆ ನೀನೆನು
ತೊಲವಿಂ ಪರಿಮಳದ ಬೇರ್ಗಳಂ ಬರತೆಗೆದಳ್ ೮೧

ಮುಡಿ ಜಗುಳಲ್ ಕುರುಳ್ ಕುಣಿಯೆ ತುಂಗಕುಚದ್ವಯ ಜೋಡುಗುಂದೆ ಕಂ
ಪಡರ್ದುಱು ಕಕ್ಷಮೊಪ್ಪಲಲರ್ಗಣ್ ಮುಗುಳೊಪ್ಪೆ ತೊಡರ್ಚೆ ಕಾಂಚಿ ಬಿ
ಟ್ಟುಡೆ ಸಡಿಲಲ್ ನಿತಂಬಯುಗಳಂ ನಡುಗಲ್ ಬಿಳಿದಪ್ಪ ತೆಳ್ವಿನೊ
ಳ್ನಡು ಸೆಳೆಯಲ್ಕೆ ಕೈನೆಗಪಿ ಪೂದಿಱಿದಳ್ ಸತಿ ಸೌಕುಮಾರ್ಯದಿಂ ೮೨

ಅರಲಂ ಕಣ್ಮುತ್ತೆ ಮೊತ್ತಂಗಿಡದೆಳವೆಳಗಿಂದೊಪ್ಪೆ ತುಂಗಸ್ತನಂ ಮುಂ
ಜರಿಯೊಳ್ ವಕ್ತ್ರಾಬ್ಜಗಂಧಂ ವಿಕಸಿತಕುಸುಮಾಮೋದಮಂ ಮೋದೆ ಬಂಬ
ಲ್ಗುರುಳುನ್ಮತ್ತಾಳಿಯೊಳ್ ತಳ್ತಿಱಿಯೆ ಪೊಡೆಯೆ ಹಸ್ತಾರುಣಚ್ಛಾಯೆ ಬಾಳಾಂ
ಕುರಮಂ ಪೂಗೊಯ್ವುಳೊರ್ವಳ್ ಪೊಸಲತೆಲತೆಯೊಳ್ ಕಪ್ಪಮಂ ಕೊಳ್ವ ಪಾಂಗಿ ೮೩
(ಲೀಲಾವತಿ, ೧೩-೬೯)

ಪರಭಾಗಂ ಪೊಣ್ಮುವನ್ನಂ ತನುಲತೆ ಲತೆಯೊಳ್ ಕೂಡೆ ತುಂಗಸ್ತನಂ ಮುಂ
ಜರಿಯೊಳ್ ಮುಂಡಾಡೆ ಕಣ್ಗಳ್ ಬೆರಸೆ ಕುಸುಮದೊಳ್ ಕುಂತಳಂ ತುಂಬಿಯೊಳ್ ತ
ಳ್ತಿರೆ ಪುಷ್ಪಾಮೋದಮೊಳ್ ಸುಯ್ ಕಲಸೆ ಕರತಳಚ್ಛಾಯೆ ತಳಿರ್ಕ್ಕೈಸೆ ಬಾಲಾಂ
ಕುರಮಂ ಪೂಗೊಯ್ವುಳೊರ್ವಳ್ ಲತೆಲತೆಗೊಲವಿಂ ಬಿರ್ದುವಂದಂತಿರಿರ್ದಳ್ ೮೪
(ಲೀಲಾವತಿ, ೧೩-೭೭)

ಪೊಱವಾರಂ ಮೆಟ್ಟುವಂತುಬ್ಬರಿಪ ಮುಗುಳ ಗೊಂಚಲ್ಗಳಂ ಮೆಟ್ಟಿ ಪೂವಂ
ತಿಱುವುಚ್ಚಂದ್ರಬಿಂಬಾನನೆಯ ಘನಕುಚದ್ವಂದ್ವಮುಂ ಪೊತ್ತು ಚೆಲ್ವಿಂ
ದೆಱಗುತ್ತಿಪ್ಪುಜ್ವಲನ್ಮಾಧವಿಮಧುನೃಪನೆಟ್ಟಿಂದೊಡಾನಂದದಿಂದಂ
ಮಱುಗುತ್ತಿಪ್ಪನ್ನೆಗಂ ಕನ್ನಡಿ ಪೊಣರ್ಗಳಸಂಬೋಲ್ತುವೊಲ್ ಪೆತ್ತುದಿಂಬಂ ೮೫

ಕಚಬಂಧಂ ಬಿಡುವಂತು ನೀವಿ ಶಿಥಿಲತ್ವಂಬೆತ್ತು ನೀಲಾಳಕ
ಪ್ರಚಯಂ ಸೂಸೆ ಲತಾಂಗಲೇಖೆ ಬೆಮರಂ ತಾಳ್ದಿರ್ದ ಚೆಲ್ವಂಶುಕಂ
ಕುಚಮೊತ್ತಿಂ ನಸುಜೋಲ್ದು ಕಂಗೆಸೆಯೆ ಬಂದರ್ ಮೂರ್ತಿಶೋಭಾಭರ
ಪ್ರಚಯಸ್ವಾಂತೆಯರಾದವೋಲ್ ವನವಿಹಾರಶ್ರಾಂತಯರ್ ಕಾಂತೆಯರ್ ೮೬

ಮೃದುಕಂಕೆಲ್ಲಿದಳಾದಿ ಪಲ್ಲವದೊಳಂ ಮಲ್ಲೀಲತಾಂತಾದಿ ಪು
ಷ್ಪದೊಳಂ ಚೂತಲತಾಭರಸ್ರಿತಯದಿಂಬಿಂ ಮಾಳ್ಪ ಮಂಜೀರ ಹಾ
ರದ ಕೇಯೂರದ ಕರ್ಣಪೂರದುಡೆನೂಲಂತಂಸದೊಳ್ ಪಚ್ಚಮುಂ
ಮದನಂ ಮೋಹನಬಾಣಮುಂ ತೊಡುವಿನಂ ತೊಟ್ಟರ್ ಲತಾತನ್ವಿಯರ್ ೮೭

ಎಳಸಿರೆ ಕಾಂತೆ ಪೊಚ್ಚಪೊಸಮಲ್ಲಿಗೆಯಂ ಪಲವಂ ತುಱುಂಬಿ ಕ
ಣ್ಗೊಳಿ ಸಿರಿಗಂಧದಣ್ಪನೊಸೆದಿಕ್ಕಿ ದುಕೂಲಮನುಟ್ಟು ಮೌಕ್ತಿಕಾ
ವಳಿಯನೊಱಲ್ದು ತೊಟ್ಟು ತಳಿರುಯ್ಯಲನಟ್ಟಿಯೊಳೇಱ ಪಾಡಿದಳ್
ಲಲನೆ ವಸಂತದೊಳ್ ಪಲವು ವರ್ಣಕದಿಂ ಕವಿಕಾಮದೇವನಂ ೮೮
(ಶೃಂಗಾರರತ್ನಾಕರಂ, ೧–೪೦ ಸೂಕ್ತಿಸುಧಾರ್ಣವಂ, ೧೧–೫೬)

ತೆರೆಮುಗಿಲನಡರ್ದ ವಿದ್ಯಾ
ಧರಿಯೆಂಬಿನಮೊರ್ವಳೇಱ ಕೃತಕಾದ್ರಿಯನೇಂ
ಜೊರೆಯಾದಳೊ ರತಿಕಾಂತನ
ಕರುಮಾಡದ ಮದನಮೋಹಿನೀಪುತ್ರಿಕೆವೋಲ್ ೮೯
(ಅನಂತನಾಥಪುರಾಣಂ, ೭–೧೬, ಯಶೋಧರಚರಿತ್ರೆ, ೪–೯, ಸೂಕ್ತಿಸುಧಾರ್ಣವಂ, ೧೧–೫೭)

ನಿಱ ಸೊಪಸ್ಪಿದುದು ಕೋಡಗಂ ಸೆಳೆದುವೇ ಮ್ಲೆ ಬಾಸುಱತೆಟ್ಟಿನ್ನೆಗಂ
ಪಱದತ್ತಕ್ಕಟ ಪೊಕ್ಕು ಕೇತಕಿಯ ಪೂಗೊಯ್ಯಲ್ಕೆ ಘಮರ್ಮಾಂಬುಗಳ್
ತಱುಗಲ್ಗೊಂಡುವು ತಂಗೆ ಬಲ್ಲಿತೆ ಬಿಸಿಲ್ ಪೂದೋಂಟದೊಳ್ ನಿನ್ನನೆಂ
ದಱದುತ್ಸಾಹಿಪಳಂತೆಗೆಯ್ದು ಸಖಿಯುಂ ತನ್ನಂಗಿ ಕಣ್ಬೇಱದಳ್ ೯೦
(ಸೂಕ್ತಿಸುಧಾರ್ಣವಂ, ೧೧–೬೦)

ಎಳಮಾವಿನ ತಳಿರ್ವೂವಿನ
ಗಿಳಿ ಚಿಲಿಪಿಲಿಯೆಂದೊಡಾ ಮರಂ ಜಗಳಕ್ಕೆ
ವ್ವಳಿಸಿದಪುದೆಂದು ಭಯದಿಂ
ತಳಿರ್ಗೊಯ್ಯದೆ ಪಿಂಗಿ ಮುಗ್ಧೆ ನಗಿಸಿದಳೊರ್ವಳ್ ೯೧
(ಸೂಕ್ತಿಸುಧಾರ್ಣವಂ, ೧೧-೬೧)

ದಳಿತಾಂಭೋಜಾತವಕ್ತ್ರಶ್ವಸಿತಪರಿಮಳಂ ಭ್ರೂಲತಾಕ್ಷೇಪಲೀಲಾ
ವಳಿತಾಪಾಂಗಾನುರಾಗಂ ಮಧುರಫಳರಸಾಸ್ವಾದ್ಯಹೃದ್ಯಾಧರಂ ಕೋ
ಮಳೆಯೊಳ್ ಸಂಭೋಗಸೊಳ್ ಸಂಧಿಸೆ ನೃಪನ ಮನೋಜಾತಕೀರಂ ವಚಃಕೋ
ಕಿಳಮಾಲೋಕದ್ವಿರೇಫಂ ತಣಿವುನೆಳಸೆ ತತ್ಪ್ರೇಮಕಾತಂ [1]ವಸಂತಂ[1] ?
(ಅನಂತನಾಥಪುರಾಣಂ, ೨-೧೩, ಸೂಕ್ತಿಸುಧಾರ್ಣವಂ, ೧೧-೬೫)

ಅನುವಿಸಿ ನನೆದಿಱಿದಪೆನೆಂ
ದಿನಿಯಂ ಬರೆ ಕಂಡು ತೋಳನೆತ್ತದೆ ಕುಚಕುಂ
ಭನಖಾಂಕದತ್ತ ಲಜ್ಜಾ
ವನತಾನನೆ ನಿಂದ ಭಾವಮಂ ಬಯಸದರಾರ್ ೯೩
(ಲೀಲಾವತಿ, ೧೩-೯೮, ಸೂಕ್ತಿಸುಧಾರ್ಣವಂ, ೧೧-೬೮)

ಪೊರ್ದುದು ಮಾಯ್ದಲರ್ ತಿಱಿಯಲೀಯ್ಯದೆ ಧೂಳಿಯನೆಂದು ಗಾಳಿಯುಂ
ಬಯ್ದು ಪರಾಗಮಂ ತೊಡೆಯುತಂ ನಿಡುಗಂಗಳನೊತ್ತಿ ಮುಚ್ಚಿಕೊಂ
ಡೊಯ್ವತಿನುಗ್ಧನಲ್ಲಭೆಯ ಕಣ್ಬೊಣರಂ ಪತಿ ತುಂಬಿ ಪೀರ್ವವೋ
ಲೆಯ್ದೆಲರೂದಿಯೂದಿ ಪರಿಚುಂಬಿಸಿದಂ ನಗುತಂ ನಿಜೇಚ್ಛೆಯಿಂ ೯೪
(ಲೀಲಾವತಿ, ೧೩-೧೦೪, ಸೂಕ್ತಿಸುಧಾರ್ಣವಂ, ೧೧-೭೭)

ಮಿಸುಗುವ ದುಂಡುಮಲ್ಲಿಗೆಯ ಹಾರಮನೊಪ್ಪಿರೆ ತಾಳ್ದು ಮಾಲತೀ
ಕುಸುಮದ ಜಾಳಿಯುಂ ತಳೆದು ಮೊಲ್ಲೆಯ ಕಂಕಣವಿಟ್ಟು ಚಂಪಕ
ಪ್ರಸವದ ಕರ್ಣಪೂರಕಮನಾಂತು ವಿಲಾಸಮನೆಯ್ದಿ ಬೀರುತ
ರ್ಚಿಸಿದ ಮನೋಜರಾಜನಧಿದೇವತೆ ಬರ್ಪವೊಲಾಕೆಯೊಪ್ಪಿದಳ್ ೯೫

ನವಹಾರಂ ನೇವುರಂ ಮೇಖಲೆ ಪೊಸಕಡಗಂ ಜಾಳಿಯುಂ ಸೂಸಕಂ ಚೆ
ಲ್ವವತಂಸಂ ಜಂಘೆಯುಂ ಮೂಗುತಿ ಚಳಕಿಗೆ ತೋಳ್ಬಂದಿ ಮಿಂಚೋಲೆ ಕಪ್ಪೊ
ಪ್ಪುವಿನಂ ಗ್ರೈವೇಯಕಂ ಪೊಂಜಱಿಗೆಯೆನಿಸಿದಂ ಮೂಡಿ ಚೆಲ್ವೆತ್ತ ನಾನಾ
ಯುವತೀ ಸಂತಾನಕಂ ಸಿಂಗರಿಸೆ ಪದಪಿನಿಂ ಕಾಂತೆ ಕಣ್ಗೆಡ್ಡಮಾದಳ್ ೯೬

---

[1] ನಿತಾಂತಂ (ಸೂ)

ಕರಿರಿಪುಪೀಠವಮಂ ತೊಡೆದು ಪಾಸುವ ಕತ್ತುರಿನೀರಧಾರೆಯಂ
ಪರಪುವ ಮುತ್ತಿನೆಕ್ಕಸರವಂ ಕಡೆಯಿಕ್ಕುವ ಪಾರಿಜಾತದೊ
ಳ್ಕೆರಲಸುದಿರ್ಚುವಿರ್ತರದ ಗದ್ದುಗೆಯನಿಕ್ಕುವ ಸಂಭ್ರಮಂಗಳಿಂ
ಪರಿಪುರಿಯಾಡಿದರ್ ನವಲತಾಗೃಹಪಂಕ್ತಿಯೊಳಂಗನಾಜನಂ ೯೭

(ಅನಂತನಾಥಪುರಾಣಂ, ೪–೮೬; ಸೂಕ್ತಿಸುಧಾರ್ಣವಂ, ೧೧–೮೧)

ಪಿಪ್ಪಲಿ ಚಿಲ್ಲಕಾಯ್ ಮೆಣಸು ಮಾಗುಳಿವೇರ್ ಮೊಳೆಯೆಲ್ಲಮೇಳೆ ಕ
ಮ್ಮಿಪ್ಪ ಸುಭದ್ರೆ ಮಾಮಿಡಿ ಕರಂಜಿಕೆಯಂಬಟೆ ನಿಂಬೆ ನೆಲ್ಲಿಗಾಯ್
ಕಪ್ಪುರಗಂಪನೊಪ್ಪಿಸುತಿರ್ಪರೆಮಾಡುಫಲಂಗಳಾದಿಯಾ
ದುಪ್ಪಿನಕಾಯ್ಗಳಿಂ ಮಘಮಘಿಪ್ಪವನಿಕ್ಕಿದರಬ್ಜಪತ್ರದೊಳ್ ೯೮

(ಲೀಲಾವತಿ, ೫–೭೦; ಸೂಕ್ತಿಸುಧಾರ್ಣವಂ, ೧೧–೮೬)

ಬಗಿದಗುಳಿಚೂಂದದಂತೆ ತೆಗೆದಾರಿಸಿದೋಗರದೊಳ್ ಪೊದಟ್ಟಿ ಕ
ಮ್ಮಗೆ ಕೆನೆಗೋಡ ಗಡ್ಡೆವೊಸರಂ ಸುರಿದೇಲೆಯಚೂರ್ಣವಿಕ್ಕಿ ಕಾ
ಯ್ದೊಗುಮಿಗೆ ಜೀಳಿಗೆಯ್ದ ಮೆಣಸಂ ತಳಿದಲ್ಲದ ಚಲ್ಲಿಯಂ ಪವ
ಣ್ಗಿಗೆ ಕಲಸಿರ್ದ ತಣ್ಗಲಸುಗೂಟನಿಳಾಪತಿಗಿತ್ತರಟ್ಟಿಯಂ ೯೯

(ಲೀಲಾವತಿ, ೫–೭೦: ಸೂಕ್ತಿಸುಧಾರ್ಣವಂ, ೧೧–೮೫)

ತುಳಿಕಂ ಲಡ್ಡುಗೆಗಳೊಳಂ
ಫಳಗಳ ಕೂಟ್ಟೀವುಡಿಗಳೆದ ತೊಗರಿಯ ತೋಗೆ ಕಾ
ಯ್ದಿಳುಹಿದ ತುಪ್ಪಂ ಕೋಡುವ
ಕಳಲಲ್ಲದೆ ದಿವ್ಯಭೋಜನಂ ಪೆಱತುಂಟೆ ೧೦೦

ಸಿತಮಿಶ್ರಿತ ಘೃತಪೂರಂ
ಸಿತಮಿಶ್ರಿತ ಸುರಭಿಗಂಧ ಕದಳಂ ಸದಳಂ
ಸಿತದುಗ್ಧಪೂರಮುಮರ್ದಿರೆ
ಸಿತನಿಷ್ಪಿಂಡಮುನಭಂಡಮುಂ ಮುಟ್ಟುವುದೇ ೧೦೧

(ಸೂಕ್ತಿಸುಧಾರ್ಣವಂ, ೧೧–೮೪)

ಓರಂತೆ ಮೆಚ್ಚಿದಂ ಕೃತಿ
ಸಾರವನಕ್ರೀಡನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೦೨

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾನೂತನ ಸನಾತನ ಪುರಾತನಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರ ಮಹಾಪ್ರಬಂಧದೊಳ್ ವನಕ್ರೀಡಾವರ್ಣನಂ ಏಕಾದಶಾಶ್ವಾಸಂ

# ಜಲಕ್ರೀಡಾವರ್ಣನಂ

ಚೆಮರಂ ವಾರಿವಿಳಾಸಮುಂ ಸಲಿಲಧಾರಾಯಂತ್ರಮುಂ ವಾಃಪ್ರವೇ
ಶಮುನಾಲೇಪನಕಂಪಮುಂ ಮುಳಿಸು ಲೀಲಾಯುದ್ಧಮುಂ ಕಾಮಿನೀ
ಶ್ರಮಮುಂ ಮೂಡಿಮುೞುಂಗುತಿರ್ಪ ಪರಿಯುಂ ಮೆಯ್ಯುರ್ಬುಮುಂ ಚೆಲ್ವುಮುಂ
ಕ್ರಮದಿಂದಂ ಪೊಱಮಟ್ಟು ನಿಂದ ನಿಲವಂ ಪೇೞ್ವೆರ್ ಜಲಕ್ರೀಡೆಯೊಳ್ ೧

(ಸೂಕ್ತಿಸುಧಾರ್ಣವಂ, ೧೨-೧)

ಮರುಗದ ಚಂಡು ಮಲ್ಲಿಗೆಯ ದಂಡೆ ಕುರಂಗದ ಕರ್ಣಪೂರಮಂ
ಬುರುಹದ ನೀಳಕಂಚುಳಿಕೆ ಪಾದರಿಯುಂಡುಗೆ ಕುಂದಕುಟ್ಮಳೋ
ತ್ಕರದ ತುರುಂಬು ಕರ್ಪುರದ ಮೂಗುತಿ ಚಂದನವಾರಿ ತಂಪುವ
ಚ್ಚರಿವಡೆದೊಪ್ಪಲಂದು ಜಲಕೇಳಿಗೆ ಬಂದುದು ಕಾಮಿನೀಜನಂ ೨

ನೆಲೆಮೊಲೆ ಪೊಣರ್ವಕ್ಕಿಗಳಂ
ವಳಿ ವಳಿಗಳನಾಸ್ಯಬಿಂಬಮಂಭೋಜಮನ
ಗ್ಗಳಿಸೆ ಕಲಹಂಸಯಾನೆಯ
ರಳವಡೆ ಕೊಳಕೊಳಕೆ ಬಿರ್ದುವಂದಂತಿರ್ದರ್ ೩

(ಅನಂತನಾಥಪುರಾಣಂ, ೭-೨೬; ಸೂಕ್ತಿಸುಧಾರ್ಣವಂ, ೧೨-೩)

ತಾವರೆ ವಕ್ತ್ರಮೂರ್ಮಿ ನಳಿತೋಳ್ ಪೊಣರ್ವಕ್ಕಿ ಪಯೋಧರದ್ವಯಂ
ಸೈವಳಲೇಖೆ ಬಾಸೆ ಪುಳಿನಂ ಜಘನಂ ಜಲಶೀಕರಾಳಿ ಮು
ಕ್ತಾವಳಿ ಬಾಳೆಮೀ ನಯನಮಾಗಿರ್ ಜಂಗಮಪದ್ಮಿನೀಕುಳಂ
ಸ್ಥಾವರಪದ್ಮಿನೀಸ್ಥಲಕೆ ಬರ್ಪವೊಲೊಪ್ಪಿದುದಂಗನಾಜನಂ ೪

ಬನದರಲಂ ಬರಿಕೈಸುವ
ಬಿನದವ ಪೊಲ್ಲಮೆಯನಿಂದೆ ಕಳೆದೊಡೆ ನಿನ್ನೀ
ವನಿತಾಜನಮುಖವನರುಹ
ವನದಿಂದಮೆ ತಿಳಿವು ಕೆಳದಿ ಕೋಡುವ ಕೊಳನಂ ೫

ವನಕೇಳೀಶ್ರಾಂತಕಾಂತಾಜನದ ಮುಖಸರೋಜಂಗಳೊಳ್ ಪಾಯ್ದು ತುಂತು
ರ್ವನಿಯಂ ಪೇಱುತ್ತೆ ಮತ್ತಶ್ರಮಸುರಭಿಸಯೋಬಿಂದುವಂ ತಂದು ನೀವೂ-
ವಿನ ಕಂಪಂ ತೊಟ್ಟು ಕೊರ್ಬಿತ್ತಭಿನವಮಧುರಾಮೋದನಿಃಶ್ವಾಸದಿಂ ತ
ಣ್ಣನೆ ತೀಡಿತ್ತೊಂದು ಭೃಂಗದ್ವಿಗುಣಿತ ಗಣಿಕಾಕೇಶಭಾರಂ ಸಮೀರಂ ೬
(ಲೀಲಾವತಿ, ೧೩-೧೧೩; ಸೂಕ್ತಿಸುಧಾರ್ಣವಂ, ೧೨-೪)

ಇದು ಪಿರಿದುಂ ವಸಂತಸಖಯೌವನರತ್ನನಿಧಾನಮಂತದ
ಲ್ತಿದು ಕುಸುಮಾಸ್ತ್ರಶಸ್ತ್ರಚಯಕೋಶಮಹೀಗೃಹಮಂತಿದಲ್ತು ಮ
ತ್ತಿದು ರತಿನಾಥಕಲ್ಪಲತಿಕಾಪ್ರಮದೈಕಕೃತಾಲವಾಲಮೆಂ
ಬುದನೆನಿಸಿತ್ತು ಸಂದಣಿಸಿ ನಿಂದಬಲಾವಳಿಯಿಂದೆ ಪೂಗೊಳಂ ೭
(ಚಂದ್ರಪ್ರಭಪುರಾಣಂ, ೭-೧೨೭; ಸೂಕ್ತಿಸುಧಾರ್ಣವಂ, ೧೨-೧೬)

ನೇವುರದ ಮುದ್ರಿಕೆಯ ಹಾ
ರಾವಳಿಗಳ ಮಧುರನಾದವಬ್ಜಾಕರಮಂ
ತೀವುತ್ತಿರೆ ಸಲಿಲಕ್ರೀ
ಡಾವಾರಿಧಿಗೆಳಸಿ ಬಳಸಿ ಕೊಳನಂ ಪೊಕ್ಕಳ್ ೮

ತೊಳಗುವ ವಿಮಳಾಕಾಶದೊ
ಳೆಳೆವೆಱೆ ಪುಗುವಂತೆ ಮುಂತೆ ನಿರ್ಮಳ ಶಶಿಮಂ
ಡಲದಧಿದೇವತೆ ಬೆಳ್ದಿಂ
ಗಳೊಳಗೆ ಪುಗುವಂತೆ ಪೊಕ್ಕಳಂಬಿಕೆ ಕೊಳನಂ ೯

ಗಿರಿಜೆ ಶಶಿವದನೆ ಕೊಳದೊಳ್
ಭರದಿಂ ಪುಗೆ ನೆಯ್ದಿಲೆಯ್ದಿದವು ವಿಕಸನಮಂ
ವಿರಹಮನಾಂತುವು ಕೋಕಂ
ಸರಸಿರುಹಂ ಮುಗಿದುವರರೆ ಪಗಲೊಳ್ ಚಿತ್ರಂ ೧೦

ಪೊಳೆವನ್ನಂ [೧]ತಾ[೧]ರಹಾರಂ ನೆಲೆನೊಲೆ ಪೊಡರ್ವನ್ನಂ ಕುರುಳ್ ಸೂಸುವನ್ನಂ
ಸೆಳೆವನ್ನಂ ತೆಳ್ವಸಿರ್ ಮೇಲುದು ಮಿಳಿರ್ವೆಸೆವನ್ನಂ ಭುಜಾಂಮೋಳಗುಂಜ
ದ್ವಳಯಂ ವಿಕ್ಷೇಪಲೀಲಾಲಸಚರಣರಣನ್ನೂಪುರಂ ಯಾನಕೂಜ
ತ್ಕಳಕಾಂಚೀಭಾಜನಂ ಸ್ತ್ರೀಜನಮಿೞಿದುದು ತತ್ತೀರ ಸೋಪಾನದಿಂದಂ ೧೧
(ಜಗನ್ನಾಥವಿಜಯಂ, ೧೪-೯೪)

---

[೧]ತೋ(ಸ)

ಅಂಗನೆಯರ್ ಜಲದೊಳ್ ಪುಗೆ
ಮೀಂಗಳಡಂಗುವುದುಮವರ ನಯನಪ್ರತಿಬಿಂ
ಬಂಗಳೆ ಪೊಳೆವೆಳಮೀಂಗಳ
ಭಂಗಿಯನನುಕರಿಸಿ ಪೊಳೆದುವಾ ತಿಳಿಗೊಳದೊಳ್ ೧೨

(ಜಗನ್ನಾಥವಿಜಯಂ, ೧೪-೯೬)

ಮೃದುತರ ಶಾಲಿಯುತ್ತಮುದ ವಸ್ತ್ರಮನುಟ್ಟು ಸುಕೇಶಭಾವಮಂ
ಮುದಮುಗೆ ವೇಣಿಯಂ ಬಲಿದು ಕತ್ತುರಿಮಿಶ್ರಿತಗಂಧಸಾರಮಂ
ಸದಮಲಮಪ್ಪ ಮೆಯ್ದೊರೆಯದೊಯ್ಯನೆಯೊರ್ವರನೋರ್ವರೀಕ್ಷಿಸು
ತ್ತೊದವಿದ ರಾಗದಿಂ ಕೊಳನ ಪೊಕ್ಕರು ಚಾಪಲ ಚಾರುನೇತ್ರೆಯರ್ ೧೩

ಗಣಿಕೆಯರ ಗಡಣದಿಂ ನಾ
ಗಿಣಿಯರ್ ನೀರಾಟಮಾಡಲೊಗೆದವೊಲಿರೆ ಕುಂ
ತಣ ಕುಟಿಲಂಗಳ್ ತರುಣೀ
ಗಣದಸಿಯ ನೆಟಿಲ್ಗಳೆಸೆದುವಬ್ಜಾಕರದೊಳ್ ೧೪

(ಲೀಲಾವತಿ, ೧೩-೧೧೪)

ಜಳಪಕ್ಷಿವ್ರಾತಕೋಲಾಹಲವೊಗೆವಿನೆಗಂ ಪಕ್ಕವಾದ್ಯಂಬೊಲುದ್ಯ
ನ್ನಳಿನೀಕಿಂಜಲ್ಕಪುಂಜಾವೃತ ಜವನಿಕೆವೊಲ್ ಪಿಂಗೆ ಸುಯ್ಗಾಳಿಯಿಂ ಪ್ರೊ
ಗೊಳನಂ ಪೊಕ್ಕತ್ತು ರಂಗಂಬುಗುವ ತೆಱದೆ ನೇತ್ರಪ್ರಭಾಜಾಳಪುಷ್ಪಾಂ
ಜಳಿಯಂ ಸೂಸುತ್ತೆ ಕಾಂತಾಜನಮದು ಜಲಕೇಳೀಜ್ವಳಲ್ಲಾಸ್ಯಲೋಲಂ ೧೫

(ಲೀಲಾವತಿ, ೧೩-೧೧೫; ಸೂಕ್ತಿಸು, ೧೨-೧೩)

ತೆರೆಗಳ್ ವಕ್ಷೋಜಘಾತಕ್ಕಗಿದು ನೆಗೆವವೋಲ್ ಮೀಱಿ ಮರ್ಯಾದೆಯಂ ವಾ
ರಿರುಹಂಗಳ್ ವಕ್ತ್ರಚಂದ್ರಪ್ರಭೆಗೆ ಬೆಗಡುಗೊಂಡಂತೆ ನೀರೊಳ್ ಮುಳುಂಗು
ತ್ತಿರೆ ಹಸ್ತಾಬ್ಜಂಗಳಿಂದುತ್ಪಲದಳಿಕುಳಮಂ ಸೋವುತಂ ಪೊಕ್ಕುದಬ್ಜಾ
ಕರಮಂ ಕಾಂತಾಜನಂ ಪೆರ್ಚಿಸುತಮುಲಘು[1]ಕಾಂಚೀಪದಾ[2]ಪೂರದಿಂದಂ ೧೬

(ಲೀಲಾವತಿ, ೧೩-೧೧೭; ಸೂಕ್ತಿಸುಧಾರ್ಣವಂ, ೧೨-೨೨)

---

[1]ಪದಾಚಾರದಿಂ(ಸ) [2]ಪಕ್ಕ(ಅ)

ಸುದತಿಯರೊಡವುಗೆ ಮೆಯ್ಗ್ಗಡ
ವೞ್ದ ಭಾರಂ ಬೞ್ಱ ಕುಚರಥಾಂಗಚಯಕ್ಕಂ
ವದನವನೇರುಹವಿತತಿಗ
ಮಿದಿರ್ವಱ್ಱಂತಾಯ್ತು ಪೂಗೊಳಂ ಸಂಭ್ರಮದಿಂ ೧೭

(ಲೀಲಾವತಿ, ೧೩-೧೧೮)

ಪುದಿದಿರೆ ಬಿಕ್ಷಿದವೋಲ್ ಮೃಗ
ಮದಪತ್ರಂ ಕಾಂತಕರಜಕುಲಿಶಕ್ಷತಿಗ
ಟ್ಟಿಕಿದವೋಲ್ ಪೊಕ್ಕವು ಕೊಳನಂ
ಬುಧದಿಯಾನಬಲೆಯರ ಕಠಿನಕುಚಕುಲಗಿರಿಗಳ್ ೧೮

(ಲೀಲಾವತಿ, ೧೩-೧೧೯)

ನಿಱಿಯುಂ ಸೂಸಿ ಕಲಂಕಿ ನುಣ್ಬೊಡೆಗಳೊಳ್ ಕೈಯಿಕ್ಕಿ ಮೆಯ್ವೆರ್ಚುತಂ
ಪೊಱವಾಱಂ ಪರಿದೇಱಿ ಪೊಕ್ಕು ಪೊಕ್ಕೊಟಿಸೂಳಪೊಕ್ಕೆಯ್ತಂದು ಸವ್ಯಾಸಮಂ
ತೆಱೆಸಿದುತ್ತುಂಗ ಕುಚಾಗ್ರಮಂ ತುಡಿಕಿ ಗಾಢಾಲಿಂಗನಂಗೆಯ್ದು ಕೈ
ಸೆಱೆಗೊಂಡತ್ತು ತರಂಗಸಂಹತಿ [1]ವಿಟಾಂಗಂಬೊಲ್ ಜಲಕ್ರೀಡೆಯೊಳ್[1] ೧೯

(ಸೂಕ್ತಿಸುಧಾರ್ಣವಂ, ೧೨-೧೯)

ತುಡಿಸುತ್ತುಂ ನೀರನಂಗದ್ಯುತಿಯಿನವಯವಚ್ಛಾಯೆಯಿಂ ತಮ್ಮನಂದಿ
ಮೞ್ಡಿಸುತ್ತುಂ ನೇತ್ರನೀಲೋತ್ಪಲದ ನೆಟಿಲ ಬಂಬಲ್ಗಳಿಂ ನೆಯ್ದಿಲಂ ನೂ
ಮೞ್ಡಿಸುತ್ತುಂ ವಕ್ತ್ರಕಂಜಂಗಳೊಳೆ ಕಮಲಪುಂಜಂಗಳಂ ಕೂಡೆ ಸಾಸಿ
ಮೞ್ಡಿಸುತ್ತುಂ ಪೊಕ್ಕುದಬ್ಜಾಕರಮನೊಲವಿನಿಂದಂದು ಕಾಂತಾಕದಂಬಂ ೨೦

(ಲೀಲಾವತಿ, ೧೩-೧೧೭; ಸೂಕ್ತಿಸುಧಾರ್ಣವಂ, ೧೨-೨೦)

ಕಳನೂಪುರನಿನದಂಗಳ
ನೆಳವೆಂಡಿರ್ ಬೈಕೆಗೊಟ್ಟರಕ್ಕುಮೆ ಹಂಸಾ
ವಳಿಗೆನೆ ಕೊಳನಂ ಪೊಕ್ಕಾ
ಗಳೆ ಮಾಣ್ದುವು ಗಾಳಿವಡೆದ ನೇವುರದನಿಗಳ್ ೨೧

(ಸೂಕ್ತಿಸುಧಾರ್ಣವಂ, ೧೨-೨೭)

---

[1]ವಿಟಾನಂಗೋದ್ಭವಕ್ರೀಡೆಯಿಂ(ಸೂ)

ಲಲಿತೂರ್ಮಿಕರದಿ ಕಾಲ್ವಿಡಿ
ದೊಳಪೊಕ್ಕೊಳ್ದೊಡೆಯ ಕೆಣಕಿ ಕಾಂಚೀಪದಮಂ
ಬಳಸಿ ವಿಟನಂತೆ ನಾಭಿ
ಸ್ಥಳದೊಳ್ ನೆಲಗೊಂಡು ನಿಂದುದಾ ಕಾಸಾರಂ ೨೨

ಅಳಕಾಳಿಗಳಿಂ ನಯನೋ
ತ್ಪಳದಿಂ ಮುಖಕಮಲದಿಂದೆ ಕುಚಚಕ್ರದಿನು
ಜ್ವಳಕಾಂತಿಸಲಿಲದಿಂದಾ
ಕೊಳನೊಳ್ ಕೊಳನಾಡುವಂತಿರೊಪ್ಪಿದರಾಗಳ್ ೨೩

ಮಳಯೋರ್ವೀಧ್ರುಸಮೀರಸಂಚಳಲತಾಸಂತಾನ ತಂತಮ್ಮಲ
ರ್ಗಳನೊಂದೊಂದಱ ಮೇಲೆ ಕೆಂದಳಿರ್ಗಳಿಂ ಸೂಸಿತ್ತೆನಲ್ ಕೇಳಿಸಂ
ಚಳೆಯರ್ ತುಳ್ಕಿದರೊರ್ವರೊರ್ವರೊಲವಿಂ ಸ್ವಚ್ಛಾಂಬುವಿಂ ಕೆಂದಳಂ
ಗಳನೀಯಲ್ ವಳಯಸ್ವನಂ ವಿಹರಣಪ್ರಸ್ತಾವನಾತೂರ್ಯಮಂ ೨೪

ಓರೊರ್ವರೊಳೋರೊರ್ವರ್
ವಾರಿಗಳಿಂ ಚೆಲ್ಲುವಲ್ಲಿ ಜಲದೇವತೆಯರ್
ಕಾರೊಳಗಾಡುವವೋಲಿರೆ
ಹಾರೈಸುತೆ ನಲಿವುತ್ತಾಡಿದರೋಕುಳಿಯಂ ೨೫

ಮೃದುಕರತಳದಿಂದಬಲೆಯ
ರುದಕಂಗಳನೆತ್ತಿ ಸುತ್ತಸೂಸುವ ಪಥದೊಳ್
ಮುದದಿಂ ಕೊಡುವಂತಿರ್ದುವು
ಮೊದಲೊಳ್ ಮದನಂಗೆ ಮೆಱೆವ ಪುಷ್ಪಾಂಜಳಿಯಂ ೨೬

ಕಮಲದಳಂಗಳೊಳಗೆ ಕುಂ
ಕುಮಜಲಮಂ ತೀವಿ ಚಕ್ರಕುಚೆಯರ್ ಭರದಿಂ
ವಿಮಳೇಂದುಮುಖಿಯರಂ ವಿ
ಭ್ರಮದಿಂ ನಡೆದಿಟ್ಟು ಕೞಿವರೆಳವಿಸಿಲೊಳ್ಪಂ ೨೭

ಇಡೆ ಶಶಿಮುಖಿಯರ್ ಕಂಡಾ
ಕಡುಧವಳೋತ್ಪಲದ ನಡುವೆ ಚಂದನರಸಮಂ
ಬಿಡೆತೀವಿಕೊಂಡು ನಡೆನಡೆ
ದೊಡನೊಡನಿಟ್ಟಿಟ್ಟು ಜೊನ್ನಮಂ ಪಸರಿಸಿದರ್ ೨೮

ಮಡದಿಯರಾಡುವ ಪದದೊಳ್
ಸಡಲಿರ್ದಾ ಕುಂತಳಾಳಿ ಪೋಲ್ತುದು ಚಲದಿಂ
ದುಡುಪತಿಬಿಂಬಂಗಳ ಬೆಂ
ಬಿಡದೆಯ್ದುವ ರಾಹುಮಂಡಲಂಗಳ ತೆಜನಂ ೨೯

ಅಂಬುವಿನೊಳಗೆ ನಿಜಪ್ರತಿ
ಬಿಂಬಮನೀಕ್ಷಿಸುತೆ ತರುಣಿ ಹೋಗದಿರೆನುತಂ
ಬೆಂಬತ್ತಿ ನಡೆದು ಕಾಣದೆ
ಡಂಬಲನಂ ನೋಡಿ ಮುಗ್ಧೆ ನಗಿಸಿದಳೊರ್ವಳ್ ೩೦

ಉರವಣಿಸಿ ಚೆಲ್ಲೆ ಸತಿಯರ್
ಕರಂಗಳಿಂ ವದನವೃಂದಮಂ ಮುಚ್ಚುತೆ ತ
ತ್ತರವಿಂದಂ ಶಶಿಬಿಂಬೋ
ತ್ಕರಮಂ ಮುತ್ತಿರ್ಪುದೆನಿಪ ತೆಜನಾಯ್ತಾಗಳ್ ೩೧

ಜಲರುಹನೇತ್ರೆ ಮೀನವಿರಳಾಕ್ಷಿ ಜಲಂಗಳನಂಜುಳಿಂದಲಾ
ಜಲದೊಳು ತನ್ನ ನೇತ್ರಯುಗ ಚಂಚಲದಿಂ ಪ್ರತಿಬಿಂಬಿಸುತ್ತಲುಂ
ಪೊಳೆಯಲು ಮೀನ ನಾಂ ಪಿಡಿವೆನೆಂದು ಭಯಂ ಮಿಗುತೆಯ್ದೆ ನೀರನಾ
ಗಳೆ ಬಿಸುಡುತ್ತಮಿರ್ದಳು ವಿದಗ್ಧೆಯೊ ಮುಗ್ಧೆಯೊ ಚಂಚಲಾಕ್ಷಿಯೋ ೩೨

ಇದು ಜಲಜಾತವೆಂಬಿದು ಸಖೀಜನವೆಂಬಿನಿತುಂ ವಿವೇಕಮಿ
ಲ್ಲದೆ ಜಲಮಂ ತುಳುಂಕುವಬಲಾಜನದೊಂದಲೆ ಪಕ್ಕೆ ಪೆರ್ಚಿದಂ
ದದೆ ಜಲಜಾಳಿಗಳ್ ಮುಳಿದು ಪಿಂಗಿದುವಾಕೆಗಳುರ್ಚಿ ಪರ್ಚಿ ಕೊ
ರ್ಚಿದ ಕುಚಕುಂಭಮಾವರಿಸೆ ತೀವಿ ತುಳುಂಕುವ ಪದ್ಮಷಂಡದೊಳ್ ೩೩

ರಂಭೋರು ಜಗದ್ವಿಜಯಾ
ರಂಭಿ ಮನೋಭವಕರೇಣುವಂತೊರ್ವಳ್ ಕಿ
ಟ್ಟಿಂಭೋಜದಲರ್ಗಳಂ ಕುಚ
ಕುಂಭಂಗಳೊಳೊಟ್ಟೆಕೊಳ್ವಳೇನೊಪ್ಪಿದಳೊ ೩೪

(ಲೀಲಾವತಿ, ೧೩–೧೨೭)

ಧೂರ್ತಂ ತುಳುಂಕೆ ಕತ್ತುರಿ
ನೀರ್ತುಳುಕಿದ ಮೊಗದಿನಲೆದುವ ಬಲೆಯ ವೋಲೆಗಳ್
ಸಾರ್ತಂದ ಗಲ್ಲ ಲುರ್ಚಿದ
ಕತ್ತುಲೆಯುಂ ಕುಟುಕುಗೊಳ್ವ ಕೋಕದ್ವಯಮುಂ ೩೫
(ಲೀಲಾವತಿ, ೧೩–೧೩೪, ಸೂಕ್ತಿಸುಧಾರ್ಣವಂ, ೧೭–೫೭)

ಅಲೆಸನ್ನಂ ಚೌರಿವೋಲ್ ಬಿರ್ಚಿದ ಬಹಳಕಚಂ ಸಾರ ಕಸ್ತೂರಿಕಾಪಂ
ಕಿಲನುಂಭೋಧಾರೆ ಕೊಪ್ಪಿಂದಿಟ್ಟಿದು ಬಳೆವಿನಂ ಕಾಂತನಂದೊತ್ತೆ ರಾಗಾ
ಕುಳೆ ಜೇಗಂ ಬಾಗಿದಳ್ ತುಂಬಿಯ ತಿರುಗೊಲೆಯೊಳ್ ಕೋದ ಕಂದರ್ಪಕೋದಂ
ಡಲತಾಸೌಭಾಗ್ಯಮುಂ ಸೂಸುವ ತನುಲತೆ ಚೆಲ್ವಾಗೆ ತನ್ವಂಗಿಯೊರ್ವಳ್ ೩೬
(ಲೀಲಾವತಿ, ೧೩–೧೩೮; ಸೂಕ್ತಿಸುಧಾರ್ಣವಂ, ೧೭–೫೯)

ಸುಲಲಿತ ಕಿಂಕಿರಾತ ನವಮಂಜರಿಯಂತಿರೆ ಕರ್ಣಪಾಳಿ ಕೆಂ
ದಳಿರ ತುಱುಂಬಿನಂತೆಸೆಯೆ ಸೋರ್ಮುಡಿ ಮೂಡುವ ಚಂದ್ರನಂತೆ ಪ
ಜ್ಜಳಿಸೆ ಮುಖೇಂದು ಪೊಂಗಳಸದಂತಿರೆ ಪೆರ್ಮೊಲೆ ಕಾಂತೆ ಪೊನ್ನಪು
ತ್ಥಳಿಕೆಯೊಲೊಪ್ಪಿನಂ ತಳಿವಳೋಪನನೊಪ್ಪುವ ಕುಂಕುಮಾಂಬುವಿಂ ೩೭
(ಲೀಲಾವತಿ, ೧೩–೧೪೧; ಸೂಕ್ತಿಸುಧಾರ್ಣವಂ, ೧೭–೫೫)

ಪರವಧುವ ಪೆಸರೊಳೋಪಂ
ಕರೆಯೆ ಸುಖೀಜನದ ಮುಂದೆ ಲಜ್ಜಾರೋಷ
ಜ್ವರವೊದವೆ ಕರಗಿ ನೀರೊಳ್
ನೆರೆವಂತೆ ಬೆಮರ್ತಳೊರ್ವಳಬ್ಜಾಕರದೊಳ್ ೩೮
(ಲೀಲಾವತಿ, ೧೩–೧೪೪)

ಮೃಗಮದಜಲಮುಂ ಸವತಿಯ
ಮೊಗದೊಳ್ ಪತಿ ಸೂಸೆ ಸತಿಯ ಮೊಗದೊಳ್ ಕ
ರ್ಪೊಗೆದು ಪೊಗೆ ಮುಗುಳ್ದುದಾಕೆಯ
ಮೊಗಮುಜ್ಜ್ವಳಮಾಯ್ತು ಬಗೆವೊಡೇನಚ್ಚರಿಯೋ ೩೯
(ಲೀಲಾವತಿ, ೧೩–೧೪೫)

ತುಳ್ಕೆ ಸಪತ್ನಿ ಕುಂಕುಮಜಲಂಗಳನೋಪನಮೇಲೆ ಚೆಲ್ಲಮುಂ
ತುಳುಕುವ ಕಂಗಳೊಳ್ ನಿಮಿರ್ದು ನೀಟ್ಟಿ ವಿಲೋಕಿಸುವಾಕೆಯಕ್ಷಿಗಳ್
ಸಿಟ್ಟಿ ಸರೋಜಮುಂ [1]ಗೆಲುವ ಕಂಗಳಮಾಪ್ಪೊಳಪಿಂದ[1] ಸೂಯಕರ್
ಮಾಟಿಕ್ಕಿ ಮದೂಷಣಂ ಮಧುರದರ್ಶಿಗೆ ಭೂಷಣಮಾಗದಿರ್ಕುಮೇ ೪೦
(ಲೀಲಾವತಿ, ೧೩–೧೫೩)

---

[1] ಸರಜಮಂ ಗೆಲೆವಂದುವುಮಾಯ್ದು (ಅ)

ಅಲರ್ದಂಭೋಜವಿಲಾಸಮಂ ಗೆಲೆ ಮುಖಾಂಭೋಜಂ ಸುಖಸ್ಮೇರಮು
ತ್ಪಲಮಂ ಸೂರ್ಯಮರೀಚಿಕುಟ್ಮಲಿತಮಂ ನೇತ್ರೋತ್ಪಲಂ ಭೀತಿಕು
ಟ್ಮಲಿತಂ ತಾಂ ಗೆಲೆ ಪೊನ್ನ ಜೀರ್ಕೊಟಿವಿಯಂ ಪ್ರಾಣೇಶ್ವರೀವಕ್ತ್ರದೊಳ್
ನಲವಿಂದೊತ್ತಿದನೊರ್ವನುಜ್ವಳಜಳವ್ಯಾಮಿಶ್ರಕಾಶ್ಮೀರದಿಂ ೪೧

(ಲೀಲಾವತಿ, ೧೩-೧೫೪)

ಅಲರ್ಗಣೆಯಂ ಬೆಳ್ದಿಂಗಳು
ಮೊಲಿಸುವ ಸೆಣಸಿಂದವೊಡನೆ ನಡುವಂತಿರೆ ತ
ಲ್ಲಲನೆಯಲರ್ಗಣ್ಣುಮೊಪ್ಪಿದ
ಮಲಯಜಮಂ ನಟ್ಟವೊಡನೆ ಚಂದ್ರೋದಯಮಂ ೪೨

(ಲೀಲಾವತಿ, ೧೩-೧೫೭)

ಇಟ್ಟೆಳವಿಟ್ಟೆಱಮುಳಿಸಿಂ
ದಿಟ್ಟಳ್ ಕವಿರಾಜಮಲ್ಲನಂ ಕಡೆಗಣ್ಗಳ್
ನಟ್ಟೆ ಬೞಿವಿಡಿದು ನನೆಗಣೆ
ನಟ್ಟವೊಲಿರೆ ತಳದೊಳಡಸಿ ತೀವಿದ ನನೆಯಂ ೪೩

(ಲೀಲಾವತಿ, ೧೩-೧೫೮; ಸೂಕ್ತಿಸುಧಾರ್ಣವಂ, ೧೨-೪೨)

ಸ್ಮೇರಮುಖನೆತ್ತಿ ಸರಸೀ
ತೀರಕ್ಕೆಂತಾನುಮೆಯ್ದಲಾಗಳ್ ನೆವದಿಂ
ನೀರಂ ಕೊಳ್ವ ಮುೞುಂಗುವ
ನೀರೇಜಲೋಚನೆಯನಪ್ಪಿ ಭಾವಕಮುಕುರಂ ೪೪

(ಲೀಲಾವತಿ, ೧೩-೧೫೯)

ಎಲೆ ಚಿತ್ರೇಶ್ವರಿ ನಿನ್ನ ವಕ್ತ್ರಹಿಮಕೃದ್ಬಿಂಬಂ ಕಲಂಕಿರ್ದೊಡಂ
ಜಲದೊಳ್ ತಾಂ ತೆಗೆದಪ್ಪುದೆನ್ನ ಬಗೆಯಂ ನೋಡೆಂದು ಕಣ್ಣಿಂದೆ ಕಾ
ದಲಿಸುತ್ತಂತೆ ಮುೞುಂಗಿ ಬಂದಬಲೆಯಾ ವಕ್ತ್ರಾಬ್ಜಮಂ ಪೀರ್ದನಂ
ದೊಲವಿಂದೇಂ ಸ್ಮರಕೇಳೀಶೀಲನೊ ಕರಂ ಶೃಂಗಾರಕಾರಾಗೃಹಂ ೪೫

(ಲೀಲಾವತಿ, ೧೩-೧೬೦)

ಚಳಚಕ್ಷೂರಾಗದಿಂ ಬೆಂದೊಳಗೊಳಗೆರ್ದೆವೊತ್ತುತ್ತಮಿರ್ಪಂಗನಾಸಂ
ಕುಳಮಂ ತಱಿಕ್ಕೈಸಿ ನೀರೊಳ್ ಮುೞುಗಿ ಮೊಲೆಗಳಿಂ ಮೋದುವೆತ್ತಂಗಮಂ ತಾಂ
ಜಳಕೇಳೀವ್ಯಾಜದಿಂದಂ ತಳಿದನೆ ಜಳದಿಂದೊಂದಱಿಂ ಚಿತ್ರಮಂ ತಾಂ
ತಳೆದಂ ಸಂಭೋಗಸೌಖ್ಯಾಮೃತರಸಭರದಿಂ ಭಾರತೀಚಿತ್ರಚೋರಂ ೪೬

(ಲೀಲಾವತಿ, ೧೩-೧೬೧)

ಬಲ್ಗೊಡದನ್ನವೀ ಮೊಲೆಯ ಬಿಣ್ಪೊದವಲ್ ಸುಕುಮಾರಿಯರ್ಗೆ ನೀ
ರ್ಗಲ್ಗಳ ಹಾರದೊಂದು ಹೋಱಯೇಕೆನುತುಂ ಜಲದೇವಿ ಕೊಟ್ಟವೋಲ್
ಕಲ್ಗಳನಾವಗಂ ಬಲಿದು ಬೆಟ್ಟದುವಾಗದ ಬಿಂದುಮೌಕ್ತಿಕಂ
ವಲ್ಗದುರೋಜಮಂಡಲದೊಳೇಂ ತುಱುಗಿರ್ದುವೊ ಕಾಂತೆಯರ್ಕಳಾ ೪೭

(ಲೀಲಾವತಿ, ೧೪-೧೫)

ನಾರೀವಿಕೀರ್ಣನವಕಾ
ಶ್ಮೀರಂ ಕಿಂಜಲ್ಕಮಂಗರಾಗವಿಮಿಶ್ರಂ
ವಾರಿ ಮಧುವಾಗೆ ಕೊಳನಂ
ಭೋರುಹಮಂ ಪೋಲ್ತುದಂದು ಪರೆದಳಿಪಟಲಂ ೪೮

(ಲೀಲಾವತಿ, ೧೪-೧೯)

ಕಡಲೊಳ್ ಪುಟ್ಟಿದೊಡೇನವಂ ಕೊಳದೊಳಾನುಂ ಪುಟ್ಟಿನೇ ವೈರಮುಂ
ಬಿಡನೆಂದುಂ ಖಳನಬ್ಜನೆನ್ನೊಳವನಂ ನೀಂ ಗೆಲ್ದು ಸರ್ವಸ್ವಮುಂ
ಪಡೆದೆಮ್ಮಿಬ್ಬರೊಳಾರೊ ಮಿತ್ರರುಗಳೆಂದಂಭೋರುಹಂ ಕೂರ್ತು ಕಾ
ಲ್ವಿಡಿದಿತ್ತಂತಿರೆ ತನ್ನ ಚೆಲ್ವನೆಸೆದತ್ತಾಸ್ಯಂ ಸರೋಜಾಸ್ಯೆಯಾ ೪೯

(ಲೀಲಾವತಿ, ೧೪-೨೧)

ಕರತಳವಾರಿ ತಳ್ತು ನಖರದ್ಯುತಿವಾರಿಯೊಳೊಂದಿ ಹಾರಬಂ
ಧುರರುಚಿವಾರಿಯೊಳ್ ಬೆರಸಿ ಸುಸ್ಮಿತದೀಧಿತಿವಾರಿಯೊಳ್ ತನೂ
ದರಿಯುರಲಂಪಿನಿಂ ತುಳುಕೆ ಕೃಷ್ಣನ ಮೇಲೆ ಪೊದೞ್ದಿದಂದು ಕ
ಪ್ಪುರವಱಯುಂತಿರಾಲಿನಱಯುಂತಿರರಲ್ವಱಯುಂತಿರೆತ್ತಲುಂ ೫೦

(ಜಗನ್ನಾಥವಿಜಯಂ, ೧೪-೯೮)

ವನರುಹಲೋಚನಂ ನಿಜಕರಾಂಜಲಿವಾರಿಯನೊರ್ಮೆ ಪಾರ್ಶ್ವವ
ರ್ತಿನಿಯ ಸಮುನ್ನತಸ್ತನಯುಗಕ್ಕಭಿಷೇಕಮನೀಯೆ ಕಂಡು ಮಾ
ನಿನಿ ತನಗೀರ್ಷ್ಯೆ ಪುಟ್ಟೆ ಮನದೊಳ್ ನಯನಾಂಜಲಿವಾರಿಯಿಂ ಪುನಃ
ಪುನರಭಿಷೇಕಮಂ ನಿಜಸುವೃತ್ತ ಕುಚಕ್ಕೆ ಪೆಱಳ್ ನೆಗಳ್ಚಿದಳ್ ೫೧

(ಜಗನ್ನಾಥವಿಜಯಂ, ೧೪-೯೯)

ಮತ್ತೊರ್ವಳ್ ಮೇಳದ ವಧು
ವಿತ್ತಳ್ ಪರಿಹಾಸಕಾಂತಿಯಿಂ ಕೃಷ್ಣನ ಮೇ
ಲೊತ್ತುವ ನಿಜಕರಯಂತ್ರದ
ಕತ್ತುರಿನೀರ್ಗಮಳಮಲಯಜದ್ರವರುಚಿಯಂ ೫೨

(ಜಗನ್ನಾಥವಿಜಯಂ, ೧೪-೧೦೪)

ತುಳ್ಕೆ ದರಸ್ಮಿತಂ ವದನದಿಂದನುರಾಗರಸಂ ಕಟಾಕ್ಷದಿಂ
ತುಳ್ಕೆ ಕುಚಾಗ್ರದಿಂ ತುಳುಕೆ ಹಾರಮರೀಚಿ ಲತಾಂಗಲೇಖೆಯಿಂ
ತುಳ್ಕೆ ವಿಳಾಸವಂಗಜನ ಬಾಳ ಪೊಗರ್ ನಿಜಬಾಹುದಂಡದಿಂ
ತುಳ್ಕೆ ತುಳುಂಕಿದಳ್ ಹರಿಯಮೇಲೆ ಪೆಱಳ್ ತರಳಾಕ್ಷಿ ತೋಯಮಂ ೫೩

(ಜಗನ್ನಾಥವಿಜಯಂ, ೧೪-೧೦೩, ಸೂಕ್ತಿಸುಧಾರ್ಣವಂ, ೧೨-೭೧)

ಸ್ಫುರಿತಾಂಗಂ ಸೂಸೆ ಲಾವಣ್ಯಮನೆಸೆವಲರ್ಗಣ್ ಚೆಲ್ವಿಮಂ ಸೂಸೆ ಲೀಲಾ
ದರಹಾಸಂ ಸೂಸೆ ಬೆಳ್ದಿಂಗಳನಲಘುಕುಚಂ ಪೇಲುದಂ ಸೂಸೆ ಚಾಮೀ
ಕರಕಾಂಚೀಮಂಜುಗುಂಜಧ್ವನಿ ಕಿವಿಗಮರ್ದಂ ಸೂಸೆ ತಳ್ಪೊಯ್ವ ಸುಯ್ ಕ
ಸ್ತುರಿಗಂಪಂ ಸೂಸೆ ಲಕ್ಷ್ಮೀಪತಿಯ ತನುವಿನೊಳ್ ಸೂಸಿದಳ್ ನೀರನೊರ್ವಳ್ ೫೪

(ಜಗನ್ನಾಥವಿಜಯಂ, ೧೪-೧೦೪, ಸೂಕ್ತಿ ೧೨-೭೦)

ಸ್ತನಲಕ್ಷ್ಮೀಲೋಕನಂ ಸಿಂಪಿಸೆ ಮುರರಿಪು ತನ್ವಂಗಿ ತಾರುಣ್ಯಭಾರಾ
ತಿನಿರೋಧಾಲಸ್ಯದಿಂ ಮೆಯ್ಮೆ ಮುಱಿದಳೆನೆ ಪೆಱಳ್ ಶೋಭೆಯಿಂದುಚ್ಚ ಪೀನ
ಸ್ತನಪಾರ್ಶ್ವೋದ್ಭಿನ್ನವಸ್ತ್ರಾಂಚಳೆ ಹರಿಕರಯಂತ್ರಾಂಬುಧಾರಾವಳಿಸ್ಪ
ರ್ಶನಸೌಖ್ಯಾಪೇಕ್ಷೆಯಿಂ ಭೋಂಕನೆ ನೊಲೆದೆಱಪಂ ಪೆತ್ತವೋಲ್ ಶೋಭೆವೆತ್ತಳ್ ೫೫

(ಜಗನ್ನಾಥವಿಜಯಂ, ೧೪-೧೦೫)

ಮುಡಿಯೊಳ್ ಜೋಲ್ದಿರ್ದುದಂ ಮಲ್ಲಿಗೆಯ ಕಿಱುಮುಗುಳ್ಮಾಲೆಯಂ ಸನ್ಮೃಣಾಳಂ
ತೊಡರ್ದತ್ತೆಂದಂತದರ್ಕಣ್ವಳಿಸಿ ಮುಡಿಗೆ ಪಾಯ್ವಂಚೆಗಂ ಬೆರ್ಚಿ ಸಾಸಿ
ರ್ವಡಿಪೆರ್ಚಲ್ ಘೋಂಕೆನಲ್ ಪ್ಪೈಮುಱಿದು ಪಿಡಿದ ಲೀಲಾಬ್ಜದಿಂ ಪೊಯ್ವ ಪಾಂಗಿಂ
ಕಡೆಗಣ್ ಕೆಂಪಿಂದೆ ಸೂಸುತ್ತಬಲೆ ಹರಿಯೊಳಾನಂದನಮಂ ತಂದಳೊರ್ವಳ್ ೫೬

(ಜಗನ್ನಾಥವಿಜಯಂ, ೧೪-೧೦೯)

ಸವನದಿನಂಗರಾಗಮುಮಲಕ್ತಕರಾಗಮುಮೆಯ್ದೆ ಪೋಗಲಂ
ದವಯವದಲ್ಲಿ ತೋಱುವುಗು[1]ರ್ಗೊಯ್ಗಳು ತೊಟ್ಟ ತೊಡಂಗಳುಂ [2]ವಧೂ
ನಿವಹದೊಳಾವ ಮಂಡನಮುಮಂ ಗೆಲವಂದುವು ಮಿಕ್ಕ ಮಂಡನಂ
ಯುವತಿಜನಕ್ಕದೇವುದೊ ರತೋತ್ಸವ ಚಿಹ್ನಮೆ ದಿವ್ಯಮಂಡನಂ ೫೭

(ಜಗನ್ನಾಥವಿಜಯಂ, ೧೪-೧೧೦)

ಪರಿದೊಳಪೊಕ್ಕು ಜೀರ್ಕೊಟಿವೆಯಂ ತೆಗೆದೊತ್ತಿದ ಕಯ್ಯೊಳೊರ್ವರೊ
ರ್ವರನಿರದೊತ್ತೆ ಸಂಚರಿಸಿ ಮೇಲೆ ಮುಸುಂಕುವ ಕುಂಕುಮಾಂಬುಗಳ್
ಕರದಳದೊಂದು ಕೆಮ್ಮುಗಿಲ ಕಾವಣದೊಳ್ ಕುಡುಮಿಂಚುಗಳ್ ತಡಂ
ಬರಿವವೊಲೇಂ ಬೆಡಂಗನುರ್ದರೋ ರುಚಿರದ್ವಿಚಳಲ್ಲತಾಂಗಿಯರ್ ೫೮

(ಅನಂತನಾಥಪುರಾಣಂ. ೭-೨೮, ಸೂಕ್ತಿಸುಧಾರ್ಣವಂ, ೧೨-೩೧)

ಮಿಸುಪಂ ತೋಳನೊದಲ್ ತುಳುಂಕೆ ಮೊಲೆ ಮುಯ್ವಂ ಮೀಱೆ ಗಾತ್ರಾಪರ
ಪ್ರಸರಂಬೆತ್ತಿರೆ ಕೊಂಕಿ ಬಳ್ಳಿನಡು ಕೊಂಬಂ ತೀವಿಕೊಂಡೆತ್ತಿ ಪೂ
ಣಿಸಿ ತನ್ನಂ ಬಿಡೆಪೊಯ್ದು ಪೋಪನಳ[1]ನಿಂದೊಡ್ಡೊಡ್ಡೆನು[2]ತ್ತೊರ್ವಳೊ
ಡ್ಡಿಸಿ ಪೊಯ್ಯಲ್ ನಿಮಿರ್ದೊಂದೆಭಾವದೊಳೆ ಭಾವೋದ್ಭೂತನಾದಂ ಸ್ಮರಂ ೫೯

(ಅನಂತನಾಥಪುರಾಣಂ, ೭-೨೯;ಸೂಕ್ತಿಸುಧಾರ್ಣವಂ, ೧೨-೩೨)

ಜಳಜಾತದ್ವಯಮೇತಮೆತ್ತಿದಪ್ರಸಂಭೋಜಾಳಿಗೆಂಬಂತೆ ಕೆಂ
ದಳಿರ್ಗಳ್ಗೊಂದಳಮರ್ಘ್ಯಮಿತ್ತಪುವು ಶೀತದ್ಯೋತಿಗೆಂಬಂತೆ ಕೋ
ಮಳೆಯರ್ ಕೆಂದಳದಿಂ ಮೊಗಕ್ಕೆ ಜಳಮಂ ತುಳ್ಕಾಡಿ ಮುಟ್ಟಾಡಿದರ್
ಪ್ರಳಯಕ್ಷುಬ್ಧಮನೋಜವಾರ್ಧಿಗಳೊಳೆತ್ತಲ್ ನೋಡೆ ಚಿತ್ರಪ್ರಿಯರ್ ೬೦

(ಅನಂತನಾಥಪುರಾಣಂ, ೭-೩೬,ಸೂಕ್ತಿಸುಧಾರ್ಣವಂ, ೧೨-೩೫)

---

[1]ಪೊರ್ಗಯ್ಗಳವಟ್ಟವ್ರಣಂಗಳುಂ (ಅ) [2]ನೋಡು ನೋಡು ನೊಡೆ(ಸ)

ತೊಟ್ಟನೆ ಮಂಗಳಾನಕರವಂ ನೆಲೆವೆರ್ಚೆ ಸರಿತ್ತಟಂಗಳೊಳ್
ಕಟ್ಟೆದಿರಾಗಿ ಸಾರ್ಚೆ ನೃಪವಲ್ಲಭನಂ ಪೊಸಪೂವಿನಿಂದಮಾ
ಯ್ವಿಟ್ಟೊಡನಾರ್ದು ವಾರವಧುವರ್ ಜಳಯಂತ್ರದಿನೊತ್ತೆ ಚಿತ್ರಮಂ
ನಿಟ್ಟಿಸಿ ಬಂದು ಪತ್ತಿದುವು ಸಂಧಿಸಿ ಕುಂಕುಮವಾರಿಧಾರೆಗಳ್ ೬೧

(ಸೂಕ್ತಿಸುಧಾರ್ಣವಂ, ೧೨-೩೫)

ಸುರದೀರ್ಘಿಕೆಯೊಳ್ ಕರಪು
ಷ್ಕರದಿಂದಭ್ರಮುಮನಭ್ರಮೂಪತಿ ತಳಿವಂ
ತಿರೆ ಜಳಯಂತ್ರದೆ ತಳಿದಂ
ಸರಸಿಯೊಳರಸಂ ಶಶಿಪ್ರಭಾವಲ್ಲಭೆಯಂ ೬೨

(ಸೂಕ್ತಿಸುಧಾರ್ಣವಂ, ೧೨-೩೬; ಚಂದ್ರಪ್ರಭಪುರಾಣಂ, ೭-೧೨)

ಜಳಧರಯಂತ್ರಮನೊತ್ತೆ ನೃಪಂ
ಲಲನೆಯ ಕುಚಯುಗಳಮಧ್ಯದಿಂದಿೞಿಯಲ್ ತ
ಜ್ಜಳಕೆ ತೆೞಿಪೀಯದಿರ್ದ
ತ್ತೊಳಕೊಂಡ ಪಯೋಧರಾಖ್ಯೆಯಂ ಪ್ರಕಟಿಪವೋಲ್ ೬೩

(ಚಂದ್ರಪ್ರಭಪುರಾಣಂ, ೭-೧೩೦; ಸೂಕ್ತಿಸುಧಾರ್ಣವಂ, ೧೨-೩೭)

ತರಳಾಪಾಂಗಲಸದ್ವಿಲಾಸರಸದಿಂದೋರೊರ್ವೆ ಲೀಲಾಪ್ರತಿ
ಸ್ಫುರಿತಭ್ರೂಯುಗವಿಭ್ರಮೈಕರಸದಿಂದೋರೊರ್ವೆ ಸಸ್ನೇಹಭಾ
ಸುರಚಿತ್ರಪ್ರಭವೋತ್ಥಭಾವರಸದಿಂದೋರೊರ್ವೆ ಮಾದೇವಿ ಭೂ
ವರನೊಳ್ ಸಿಂಪಿಸಿದಳ್ ಸುಗಂಧರಸದಿಂದೋರೊರ್ವೆ ತತ್ಕೇಳಿಯೊಳ್ ೬೪

(ಚಂದ್ರಪ್ರಭಪುರಾಣಂ, ೭-೧೩೨; ಸೂಕ್ತಿಸುಧಾರ್ಣವಂ, ೧೨-೪೦)

ಪ್ರಮದೆಯುರಂ ಮನೋಭವನೆ ಸೂಟಿಜೊಡೆಚ್ಚಪನಗ್ನಿಬಾಣದಿಂ
ಹಿಮಕರಬಾಣದಿಂ ತಿಮಿರಬಾಣದಿನೆಂಬಿನಮಿಂಬುವೆತ್ತದೇಂ
ನಿಮಿರ್ದುವೊ ಲೀಲೆಯಿಂದೆ ಜಳಯಂತ್ರಮನಂದು ಮಹೀಶನೊತ್ತೆ ಕುಂ
ಕುಮಜಳ ಚಂದನೋದಕ ಮೃಗೋದ್ಭವವಾರಿನಿಯುಕ್ತಧಾರೆಗಳ್ ೬೫

(ಚಂದ್ರಪ್ರಭಪುರಾಣಂ, ೭-೧೩೩; ಸೂಕ್ತಿಸುಧಾರ್ಣವಂ, ೧೨-೪೧)

ಬಿರತೆಗೆಪೊತ್ತೆ ಜೀರ್ಕೊಟಿವೆಯಂ ಪ್ರಿಯಂನೊತ್ತಿದ ವಾರಿಧಾರೆ ನೀ
ಳ್ದಿರೆ [೧]ಚಳಚೂಚಕಾಗ್ರದೊಳೆಟಿಲ್ತರೆ ಕರ್ಚಿ[೧] ಮೃಣಾಳನಾಳಮಂ
ಬೆರಸಿದ ಜಕ್ಕವಕ್ಕಿ ಕುಣಿದಾಡುವವೋಲ್ ಕುಚಯುಗ್ಮ[೨]ನರ್ತನಂ[೨]
ತರಳತರಂಗರಂಗದೊಳದೇನೆಸೆದಿರ್ದುದೊ ದೀರ್ಘನೇತ್ರೆಯಾ ೬೬

(ಲೀಲಾವತಿ, ೧೩-೧೪೬; ಸೂಕ್ತಿ, ೧೨-೪೪)

ಬಿರಿವಿನಮೆನ್ನಚಿತ್ತಮಿರುಳುಂ ಪಗಲುಂ ಖಳೆ ನಿನ್ನ ದೂಸಱಿಂ
ಸ್ಮರನಿಸೆ ತಳ್ತು ತಾಗುವರಲಂಬುಗಳೆಯ್ದುವೆ ನೀನದೇಕೆ ನಿ
ಷ್ಕರುಣಿ ಕರಾಬ್ಜಯಂತ್ರಮುಖಮುಕ್ತಸಿತಾಂಬುಗಳಂ ಬೆಗಳ್ವಿನಂ
ಸುರಿದಿನಿಸಿಲ್ಲದೆನ್ನೆರ್ದೆಯನೋವದೆ ನೋಯಿಸುವೈ ಮನಃಪ್ರಿಯಾ ೬೭

(ಲೀಲಾವತಿ, ೧೩-೧೫೫; ಸೂಕ್ತಿ, ೧೨-೪೫)

ಕಿಂಜಲ್ಕಕೆ ಕೆದಱುವಿನಂ
ಕಂಜದಿನುಱ ಮೋದುವಂತೆ ಕೆಂದಳದಿಂದಂ
ನಂ[೩]ಜಿರೆ[೩] ನವರಜನೀರಜ
ಮಂಜರಿಯಂ ಮೊಗೆದು ಮೋದಿದಳ್ ನೃಪವರನಂ ೬೮

(ಲೀಲಾವತಿ, ೧೩-೧೫೬; ಸೂಕ್ತಿಸುಧಾರ್ಣವಂ, ೧೨-೪೬)

ಕತ್ತುರಿನೀರಿಂ ಕರ್ಪಂ
ಪೆತ್ತಂಗಂ ಕುಂಕುಮಾಂಬುವಿಂ ಕಡುಗೆಂಪಂ
ಪೊತ್ತು ನೆಱ ಮೆಱಯೆ ತಳಿರಂ
ಸುತ್ತಿದ ವನಚರಿಯನೊರ್ವಳನುಕರಿಸಿರ್ದಳ್ ೬೯

(ಚಂದ್ರಪ್ರಭಪುರಾಣಂ, ೭-೧೩೪; ಸೂಕ್ತಿಸುಧಾರ್ಣವಂ, ೧೨-೪೭)

ಘುಸೃಣರಸಂ ಮೊಲೆಯೆಡೆಯಿಂ
ದಸಿಯಳ ಬಾಸೆವಿಡಿದಿೞಿದು ಸೊಗಯಿಸಿದುದು ತೆ
ಳ್ವಸಿಱ ಪೊಱಗಣ್ಗೆ ಮಿಸುಗುವ
ವಿಸರತ್ತಾಂಬೂಲರಾಗರಸರೇಖೆಯವೋಲ್ ೭೦

(ಚಂದ್ರಪ್ರಭಪುರಾಣಂ, ೭-೧೩೫; ಸೂಕ್ತಿಸುಧಾರ್ಣವಂ, ೧೨-೪೮)

---

[೧] ಜಳಮಾಕುಚಾಗ್ರದೊಳಿಳಿತ್ತರೆಗರ್ಚಿ(ಸ) [೨] ಮಂಡನಂ(ಸ) [೩] ಲಂಜಿಕೆ(ಅ)

ನೀರ್ ಪೊಗಸಿ ಪೊಯ್ಯೆ ಬಿರ್ಚಿದ
ಸೋರ್ಮುಡಿಯೊಳೆ ಮುಸುಕೆ ನಿಜಮುಖಾಬ್ಜಮನಿನಿಸಂ
ಕಾರ್ಮುಗಿಲೆಳಸಿದ ಹಿಮರೋ
ಚಿರ್ಮಾಲೆವೊಲೆಸೆದುದಸಿಯಳಾನನಬಿಂಬಂ ೭೧

(ಅನಂತನಾಥಪುರಾಣ, ೭-೪೭; ಸೂಕ್ತಿಸುಧಾರ್ಣವಂ, ೧೨-೫೩)

ಜಳಮಂ ಕಾಂತನ ಮೊಗೆದೊಳ್
ತುಳುಂಕಲೆಂದಗಿದು ಪೊಗೆವ ಕಾಮಿನಿ ಕೆಯ್ಯಿಂ
ಕಳಸಂ ಜಗುೞ್ದೊಡೆ ಮುೞುಗಿದ
ಕೆಳದಿಯ ಪೆರ್ಮೊಲೆಗೆ ಪಾಯ್ದುಳಬ್ಜಾಕರದೊಳ್ ೭೨

(ಲೀಲಾವತಿ, ೧೩-೧೩೧; ಸೂಕ್ತಿಸುಧಾರ್ಣವಂ. ೧೨-೫೬)

ಮುರಿದೆಲರೆತ್ತೆ ಪೊಯ್ದಿರಿದು ತೋರಮನಾಳ್ದು ಪೊದೞ್ದು ಸೀಳ್ದ ಪಂ
ಕರುಹಪರಾಗಮಂ ಜವದೆ ಮಂದರಮಾಗೆ ಸರೋವರಾಬ್ಧಿಯಂ
ಸ್ಮರಸುರವಲ್ಲಭಂ ಪೊಸೆದು ಪುಟ್ಟಿಸುವಿಂದುಗಳೆಂದದಿಂದಮೇಂ
ಕರಮೆಸೆದಿರ್ದುವೋ ಮುೞುಗಿ ಮೂಡುವ ಮುಗ್ಧೆಯರಾನನೇಂದುಗಳ್ ೭೩

(ಲೀಲಾವತಿ, ೧೩-೧೨೩; ಸೂಕ್ತಿಸುಧಾರ್ಣವಂ, ೧೨-೬೭)

ಸುರ್ಕುೞಿ[1]ದುರುಳಿಗುರುಳ್[1] ನೆಱೆ
ಸುರ್ಕಿದ ಕುಚಚೂಚುಕಂ ಬೆಳರ್ತಧರಂ ನೀರ್
ಪೊರ್ಕುೞಿಯೊಳೆ ಜೋಲ್ದುಳ್ಪಡೆ
ಸಾರ್ಕೆಯೊಳೇಂ ನೃಪನ ಮನಮನಳವಡಿಸಿದುದೋ ೭೪

(ಆದಿಪುರಾಣಂ, ೧೧-೧೪೯; ಸೂಕ್ತಿಸುಧಾರ್ಣವಂ, ೧೨-೮೨)

ತೊಳಗುವ ನಾಗವಟ್ಟಣಿಗೆ ನಾಂದು ಶರೀರಮನೆಯ್ದೆ ಪತ್ತೆ ಬ
ರ್ಪೆಳೆಯಳನೋವಿದೇನೆಲೆಗೆ ಬತ್ತಲೆ ಬಂದಪೆಯೆಂದು ಮತ್ತೆ ಪೊ
ಗೊಳಪೊಳಗೋಡಿಪೊಕ್ಕೊಡದನೀಕ್ಷಿಸಿ ಚಾಪಳೆಯರ್ ಪ್ರಮತ್ತಕೋ
ಕಿಳಕಳನಾದದಿಂ ನಗುತಲಿರ್ತ್ತರಿಳಾಪತಿಗಾದನುೞ್ತಿಯಂ ೭೫

(ಸೂಕ್ತಿಸುಧಾರ್ಣವಂ, ೧೨-೮೫)

---

[1]ದಸೀಳ್ಗುರುಳ್(ಪ)

ದಂತಚ್ಛದಾತಿರಾಗಂ
ಕುಂತಳಕೌಟಿಲ್ಯವೃತ್ತಿ ಪಿಂಗಿದುದಬಳಾ
ಸಂತತಿಗೆ ಪಯಃಕೇಳಿಯೊ
ಳೆಂತುಂ ನಿರ್ಮಳರಸಂಗದಿಂದಾಗದುದೇಂ ೭೬
(ಚಂದ್ರಪ್ರಭಪುರಾಣಂ, ೭-೪೫; ಸೂಕ್ತಿಸುಧಾರ್ಣವಂ, ೧೨-೮೬)

ನೀರಾಟವಾಡಿ ಪೊಱಮಡು
ವೈರಾವತದಂತೆ ದಿವಿಜದೀರ್ಘಿಕೆಯಿಂ ಕಾ
ಸಾರದಿನೇಂ ಪೊಱಮಟ್ಟನೊ
ವಾರವಧೂಸಹಿತಮವನಿಪತಿ ಸಂತಸದಿಂ ೭೭
(ಅನಂತನಾಥಪುರಾಣಂ, ೭-೫೦; ಸೂಕ್ತಿಸುಧಾರ್ಣವಂ, ೧೨-೮೭)

ಪರೆದಾ ನೀಲಾಳಕಂ ಜೋಲ್ದಲೆವ ಕಚಭರಂ ಕೆಂಪುವೆತ್ತಿರ್ದ ಕಣ್ಗಾ
ನರೆ ಬೆಳ್ಪೇಱಿರ್ದ ಬಿಂಬಾಧರಮಣಿ ತನುವಂ ನಾಂದು ಪತ್ತಿರ್ದ ಚೀನಾಂ
ಬರಮಿಂಬಾಗಿರ್ಪಿನಂ ಬಂದುದು ಮೃದುತರಲೀಲಾಪದನ್ಯಾಸಮುದ್ಯ
ದ್ದರಹಾಸಂ ಪೆಂಡವಾಸಂ ವಿಜಿತರತಿವಿಳಾಸಂ ಸುಖಶ್ರೀನಿವಾಸಂ ೭೮
(ಜಗನ್ನಾಥವಿಜಯಂ, ೧೪-೧೧೩; ಸೂಕ್ತಿಸುಧಾರ್ಣವಂ, ೧೨-೮೯)

ಕರಜಕ್ಷತದಶನಕ್ಷತ
ಸರಸಾಂಗುಲಿ ಪಾಣಿಪೀಡನ ಪ್ರತತಿಗಳಂ
ಪರಪುವ ಮೀಂಗಗಿದು ಭೀತೆ
ವರತರಳೆ ಸರೋಜಷಂಡದಿಂ ಪೊಱಮಟ್ಟಳ್ ೭೯

ಮದಕಲಹಂಸಯಾನದ ರಥಾಂಗಕುಚಂಗಳ ವಾರಿಜಾತವ
ಕ್ತ್ರದ ಸಿರಿಯಿಂದಮೆನ್ನ ಸಿರಿ ತಾಂ ಮೆಱೆದಿರ್ದುದು ನಿಮ್ಮ ವಾರ್ಧಿಸೋ
ದದಿನೆಲೆ ವಾರನಾರಿಯರಿರೆನ್ನನೆ ಬಿನ್ನನೆಮಾಡಿ ಪೋಗಲಾ
ಗದು ನಿಮಗೆಂದು ಕಾಲ್ವಿಡಿವವೋಲ್ ತೆರೆ ಪೊಣ್ಮಿದುದಬ್ಜಷಂಡದೊಳ್ ೮೦
(ಅನಂತನಾಥಪುರಾಣಂ, ೭-೫೧; ಸೂಕ್ತಿಸುಧಾರ್ಣವಂ, ೧೨-೯೦)

ಸ್ತನಕುಂಭದ್ವಿತಯಂಗಳೊಳ್ ಮೆಱೆತಂಪಿ ಹಸ್ತಸ್ವಸ್ತಿಕಂ ಕುಂತಳಾ
ಗ್ರನಮ್ರೋತ್ಪಲ್ಲವಮಾಸ್ಯದರ್ಪಣದ ಮೇಲಿಂಬಾಗೆ ನಾಂದಂಬರಂ
ತನುವಂ ಪತ್ತೆ ದಿಗಂಬರೀಮಹಿಮೆಯುಂ ತಂದಿಟ್ಟನೆಂದಿರ್ದ ಕಾ
ಮಿನಿಯರ್ ಮಂಗಳಮಂತ್ರದೇವಿಯರೆನಲ್ ಕಣ್ಗೇಂ ಬೆಡಂಗಾದರೋ ೮೧
(ಅನಂತನಾಥಪುರಾಣಂ, ೭-೫೩; ಸೂಕ್ತಿಸುಧಾರ್ಣವಂ, ೧೨-೯೧)

ಮೃಗಲೋಚನೆಯರ್ ಸಲಿಲಾ
ವಗಾಹಮಂ ಮಾಣ್ದು ಪೊಱಗೆ ನಿಲೆ ಕಟ್ಟಿಲೆ ತಾ
ರಗೆಯನುಗುಟ್ಟಿಪುದೆಂಬಿನ
ಮೊಗೆತಂದುವು ಸಲಿಲಬಿಂದುಗಳ್ ಸೋರ್ಮುಡಿಯೊಳ್ ೮೨

(ಮಲ್ಲಿನಾಥಪುರಾಣಂ, ೬-೩೧; ಸೂಕ್ತಿಸುಧಾರ್ಣವಂ, ೧೨-೯೪)

ಬಸಿಯೆ ಜಳಬಿಂದು ಕೇಶ
ಪ್ರಸರಮನೆಡಗಯ್ಯೊಳಡಸಿ ಪಿಡಿದೆಸೆದುದು ಕಾ
ರಿಸುವೊಲನಂಗನ ಫಣಿಯು
ಬ್ಬಸಮಾಗಿರೆ ಪೀರ್ದ ವಿರಹಿಜನಜೀವನಮಂ ೮೩

(ಲೀಲಾವತಿ, ೧೪-೭; ಸೂಕ್ತಿಸುಧಾರ್ಣವಂ, ೧೨-೯೫)

ಜಲಕೇಳಿಯ ಪೋರ್ಕುಳಿಯೊಳ್
ಪೊಳೆವಾಱಂ[1] ಪಱಿಯೆ ಸೂಸಿ ಕಂಟಕದೊಳ್ ಕೋ
ದೆಳೆಮುತ್ತುಗಳೆನೆ ನಿಂದವು
ಜಳಬಿಂದುಗಳಂಗನಾಪಯೋಧರತಟದೊಳ್ ೮೪

(ಲೀಲಾವತಿ, ೧೪-೧೪; ಸೂಕ್ತಿಸುಧಾರ್ಣವಂ, ೧೨-೯೬)

ಸಲಿಲವಿನೋದದೊಳ್ ಹರಿ ತುಳುಂಕಿದ ಕುಂಕುಮವಾಃಕಣೋತ್ಕರಂ
ಮಲಯಜವಾಃಕಣಾವಳಿ ಮೃಗೋದ್ಭವವಾಃಕಣಬೃಂದವಾಕ್ಷಣಂ
ಲಲನೆಯರಂಗದೊಳ್ ತೊಡರ್ದು ಪೋಗದೆ ನಿಂದುವೆನಲ್ ವರಾಂಗನಾ
ವಳಿಗೆಸೆದತ್ತು ಮಾಣಿಕದ ಮುತ್ತಿನ ನೀಲದನರ್ಘ್ಯಮಂಡನಂ ೮೫

(ಜಗನ್ನಾಥವಿಜಯಂ, ೧೪-೧೧೪; ಸೂಕ್ತಿಸುಧಾರ್ಣವಂ, ೧೨-೯೯)

ವನಮದು ಸುರಕುಜದಾರವೆ
ವನಜಾಕರಮದುವೆ ಸಿದ್ಧರಸಕೂಪಂ ತಾ
ನೆನೆ ನೃಪನೇ ವನಕೇಳಿಜ
ನನಿಮಿತ್ತದಿನರ್ಥಿಗೀಪ್ಸಿತಾರ್ಥಮನಿತ್ತಂ ೮೬

(ಚಂದ್ರಪ್ರಭಪುರಾಣಂ, ೭-೧೫೨; ಸೂಕ್ತಿಸುಧಾರ್ಣವಂ, ೧೨-೧೦೧)

---

[1] ಳೈಳಿಹಾರಂ(ಸ)

ಕಿಱುಂದಾಳೋಕನ ಚುಂಬನಪ್ರಸವದಿಂ ಹಸ್ತಾಬ್ಜವಿನ್ಯಾಸದಿಂ
ಕಿಱುಂದಾಂದೋಳಿತವಹೌಳಿಯಿಂ ಕಿಱುದು ತಾಂಬೂಲಪ್ರದಾನಂಗಳಿಂ
ಕಿಱುಂದಾನನಮ್ರಶಿರಃಕರಾಂಜುಳಿಪುಟವ್ಯಾಲಗ್ನಭಾಳಂ ಜಗ
ಕ್ಕೆಱತಯಂ ಬೀೞ್ಕೊಡೆ ಪೋಯ್ತು ರಾಜಗೃಹದಿಂ ರಾಜನ್ಯಕಾಂತಾಜನಂ ೮೭

(ಅನಂತನಾಥಪುರಾಣಂ, ೭-೫೭; ಸೂಕ್ತಿಸುಧಾರ್ಣವಂ, ೧೨-೧೦೨)

ಘುಸೃಣರಸಾವಗಾಹಭರಮುಂ ರದನಚ್ಛದರಾಗಭೋಗವಾ
ಗಿಸೆ ಘನಸಾರಚಂದನಜಳಪ್ಲವಮುಂ ದರಹಾಸಕಾಂತಿಗಳ್
ಪಸರಿಸೆ [೧]ಮನ್ಮಥೋತ್ಸವರಸಾಮೃತದೊಳ್[೧] ಮುೞುಗಾಡಿ ಮೂಡಿ ಸಂ
ದಿಸೆ ಪುಳಕಂ ನೃಪಂ ಮೆಱೆದನಂಗನೆಯೊಳ್ ಜಲಕೇಳಿಲೀಲೆಯಂ ೮೮

(ಅನಂತನಾಥಪುರಾಣಂ, ೨-೧೯; ಸೂಕ್ತಿಸುಧಾರ್ಣವಂ, ೧೨-೧೦೩)

ಉಟ್ಟ ಘನಜವಳಿ ನಾಂದಳ
ವಟ್ಟರೆ ಮೆಯ್ಪತ್ತಿ ತೋಱೆ ಸರ್ವಾಂಗಮುಮಂ
ದುಟ್ಟುದು ಪೋಯ್ತೆಂದೊರ್ವಳ್
ಬಿಟ್ಟಿರ್ದ ಕಚಾಗ್ರದಿಂದೆ ಮುಸುಕಿದಳುಡೆಯಂ ೮೯

(ಸೂಕ್ತಿಸುಧಾರ್ಣವಂ, ೧೨-೬೯)

ಲಲನಾಸಂತತಿ ಪಲ್ಲವಾಧರದ ಕೆಂಪಂ ಕಣ್ಮಲರ್ಗಿತ್ತು ಕ
ಣ್ಮಲರ್ಬೆಳ್ಪಂ ನಿಜಪಲ್ಲವಾಧರಕೆ ಕೊಟ್ಟೆಂದೀಗ ಮಾಱಾಡಿದರ್
ಸಲಿಲಕ್ರೀಡೆಯೊಳೆಂಬಿನಂ ವನಿತೆಯರ್ ನೀರಾಟದಿಂದಾದ ಕ
ಣ್ಮಲರ್ಗೆಂಪಿಂ ನಿಜಪಲ್ಲವಾಧರದ ಬೆಳ್ಪಿಂ ನಾಡೆ ಕಣ್ಗೊಪ್ಪಿದರ್ ೯೦

(ಜಗನ್ನಾಥವಿಜಯಂ, ೧೪-೧೧೨)

ಭೂವರನಿತ್ತಂಬರ ಭೂ
ಷಾವಳಿಯಂ ತೊಳಪ ತೋರಮುತ್ತಿನ ಮೊತ್ತಂ
ಪೂವಡಿಗೆವಡೆದುದೆಂಬಿನ
ಮಾ ವನಿತೆಯರಂಗಲೇಂ ಪುನಂಗೊಳಿಸಿದರೋ ೯೧

(ಸೂಕ್ತಿಸುಧಾರ್ಣವಂ, ೧೨-೯೮)

---

[೧] ತನ್ಮನೋತ್ಸವ ರತಾಜಲದೊಳ್ (ಸ)

ಸರಮಂ ಮೆಲ್ಲನೆ ತೋಱುಂದಾಕ್ಷಣ ಕರಾಂಭೋಜಾತದಿಂ ಸ್ನಿಗ್ಧಕೇ
ಸರಮಂ ನೇರ್ಪಡೆ ನೀವಿ ಕಂಧರಕೆ ಕಯ್ಯಂ ನೀಡಿ ರತ್ನಾಂಶುಭಾ
ಸುರಮಂ ಲಾಘವದಿಂದಲಂಕವಣೆಯಂ ಪಾದಾಗ್ರದಿಂ ಮೆಟ್ಟಿ ತ
ತ್ತುರಗಾಧೀಶನ [1]ಬೆನ್ನೆ ಬಂದನನವದ್ಯಂ ರಾಜವಿದ್ಯಾಧರಂ[1] ೯೨

(ಮಲ್ಲಿನಾಥಪುರಾಣಂ, ೮-೧೭೦; ಸೂಕ್ತಿಸುಧಾರ್ಣವಂ, ೧೮-೩೮)

ಕವಿವುದ್ಯತ್ಪಟವಾಸದಿಂ ತಳಿವ ಕಾಶ್ಮೀರಾಂಬುವಿಂದೆತ್ತಿಯು
ರ್ಚುವ ಚೀನಧ್ವಜದಿಂ ಪೊಡರ್ವ ಪಟಹಪ್ರಧ್ವಾನದಿಂ ಮಾನಿನೀ
ನಿವಹಂ ಸೂಸುವ ಸೇಸೆಯಿಂ ಪೊಳೆವ ನಾನಾತೋರಣಾನೀಕಪ
ಲ್ಲವದಿಂ ಪಲ್ಲವಿಸಿತ್ತು ಶೋಭೆ ನಗರಕ್ಕಂಭೋಜನಾಭಂ ಬರಲ್ ೯೩

(ಜಗನ್ನಾಥವಿಜಯಂ, ೧೬-೭೬)

ಆರುಮನಾತ್ಮವಿಭ್ರಮನುದಿರ್ಪುವಿನಂ ನಡೆತಂದು ಮಂಗಳ
ಶ್ರೀರಮಣೀಸಖೀಜನನೆನಲ್ಕಿದಿರ್ಗೊಂಡು ನಿಜೇಕ್ಷಣಾಮೃತಾ
ಸಾರದ ಬೆಳ್ಪನಿರ್ಮಡಿಸಿ ಮುಕ್ತಸುಮೌಕ್ತಿಕಾಕ್ಷತಾ
ಸಾರಮನಂದು ಸೂಸಿದುದುಪೇಂದ್ರನಮೇಲೆ ಪುರಾಂಗನಾಜನಂ ೯೪

(ಜಗನ್ನಾಥವಿಜಯಂ, ೮-೭೬)

ತರಳವಿಲೋಚನದ್ಯುತಿ ದರಸ್ಮಿತಕಾಂತಿ ನವೀನಮೌಕ್ತಿಕಾ
ಭರಣಮರೀಚಿ ಕಂಗೊಳಿಸೆ ಮಂಗಳಲಕ್ಷ್ಮಿಯ ಮೇಳದಾಕೆಯರ್
ನೆರೆದವೊಲಾಗಳಂತಪುರದಂಗನೆಯರ್ ನಡತಂದು ಬಾಹುವ
ಲ್ಲರಿ ಕುಡೆ ದೇಸೆಯುಂ ತ್ರಿಭುವನಪ್ರಭುಗಿಕ್ಕಿದರೊಲ್ದು ಸೇಸೆಯುಂ ೯೫

(ಜಗನ್ನಾಥವಿಜಯಂ, ೧೫-೬೯)

ವಿಗಳದ್ಧಮ್ಮಿಲ್ಲದಿಂ ಮಾಲೆಗಳುಗೆ ತೊಡವಿಂ ಮಂಜುಗುಂಜಾರವಂ ಕ್ಕೈ
ಮಿಗೆ ಬಂದಾನಂದದಿಂ ನೋಟ್ಪಿಬಲೆಯರ ವಿಲೋಲತ್ಕಟಾಕ್ಷಚ್ಛಟಾಶ್ರೇ
ಣಿಗಳಂ ಕೈಕೊಂಡಳುಂಬಂ ತೆರೆಮಸಗಿದನಂಗಾಮೃತಾಂಭೋಧಿಯೊಲ್ ತ
ನ್ನಗರಂ ಬೇಱಾಂದು ಚೆಲ್ವಂ ಕುಡೆ ನೃಪಗೃಹಮಂ ಬಂದು ಪೊಕ್ಕಂ ನೃಪೇಂದ್ರಂ ೯೬

(ಜಗನ್ನಾಥವಿಜಯಂ, ೧೦-೯೨)

---

[1]ಬೆಂಗೆವಾಯ್ದು ಜಗವಂದ್ಯಂ ಸತ್ಯ ಭೂಪಾಲಕಂ(ಸೂ)

ಪ್ರತಿಗೃಹಕುಂಕುಮಚ್ಛಟೆಗಳಿಂ ಪ್ರತಿಮಂದಿರರಂಗವಲ್ಲಿಯಿಂ
ಪ್ರತಿನಿಲಯಪ್ರರೂಢಮಣಿತೋರಣದಿಂ ಪ್ರತಿಸದ್ಮವಾದ್ಯದಿಂ
ಪ್ರತಿಭವನೋತ್ಸವಧ್ವಜದಿನಾ ಪೊಱಲೊಪ್ಪಿರೆ ಸೂಸುವಂಗನಾ
ತತಿಗಳ ಸೇಸೆಯಂ ತಳೆದು ಪೊಕ್ಕನುಪೇಂದ್ರನಿಳೇಂದ್ರಗೇಹಮಂ ೯೭

(ಜಗನ್ನಾಥವಿಜಯಂ, ೧೨-೫೮)

ತಳೆಯುತ್ತುಂ ವಾರನಾರೀಜನದ ತಳಿವಶೇಷಾಕ್ಷತಾನೀಕಮಂ ಕೈ
ಕೊಳುತಂ ಬಂಧುಪ್ರಜಾಶೀರ್ವಚನನಿಚಯಮಂ ಕೇಳುತಂ ತೂರ್ಯಘೋಷಂ
ಗಳನೊಲ್ದಾಳೋಕಿಸುತ್ತಂ ಪುರದ ಸಿರಿಯನಂತಃಪುರಸ್ತ್ರೀಯರಿಂ ಮಂ
ಗಳವಸ್ತುಸ್ತೋಮದಿಂ ರಂಜಿಸುವರಮನೆಯಂ ಬಂದು ಪೊಕ್ಕಂ ನೃಪೇಂದ್ರಂ ೯೮

(ಜಗನ್ನಾಥವಿಜಯಂ, ೧೪-೩)

ಕ್ವಣಿತಾನೇಕಪ್ರಧಾನಂ ಸರಭಸಮಹಾಮಾತ್ಯಸಾಮಂತಯೂಥಂ
ಗಣಿಕಾಸಂತಾನನಾನಾನವಮಣಿಗಳ ವಿಸ್ತೀರ್ಣಮಂಜೀರಮುದ್ರಾ
ರಣಿತಂ ತದ್ವೇತ್ರಹಸ್ತಪ್ರಮುದಿತಮುಖರಪ್ರೋದ್ಗತಾಭೀಳಘೋಷಂ
ಪ್ರಣತಾಸಕ್ತಾವನೀಶಂ ಪ್ರಕಟನಿಕಟಮುಕ್ತಂ ಸಭಾವಾಸವಕ್ತ್ರಂ ೯೯

ಓರಂತೆ ಮೆಚ್ಚಿದಂ ಕೃತಿ
ಸಾರಜಲಕ್ರೀಡನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ಡೋರಸಮುದ್ರಾಧಿನಾಯಕಂ ಸೋಮನೃಪಂ ೧೦೦

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣ ಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಜಲಕ್ರೀಡಾವರ್ಣನಂ ದ್ವಾದಶಾಶ್ವಾಸಂ

# ಮಧುಪಾನವರ್ಣನಂ

ಮದಿರಾಪಾನವಿಕಾರಮುಂ ನವವಯಸ್ಸಂಪತ್ತಿಯುಂ ಬಂದು ನೋ
ಡದವೋಲ್ ನೋಡುವ ನಲ್ಲನಿರ್ಪಿರವುಮುತ್ಕೃತ್ಸಾಹಮುಂ ಮೂಡೆ ಚಿ
ತ್ರದೊಳಾಗಳ್ ತನುಮಧ್ಯೆಗೇನೆಸೆದುದೋ ನೃತ್ಯಂ ಚತುರ್ಭಂಗಿ ಭೇ
ದದ ಲೀಲಾಭಿನಯಪ್ರಧಾನವಿಧಿಯಿಂ ಕಾದಂಬರೀಗೋಷ್ಠಿಯೊಳ್ ೧

(ಶೃಂಗಾರರತ್ನಾಕರಂ, ೨-೭೧; ಸೂಕ್ತಿಸುಧಾರ್ಣವಂ, ೧೩-೧)

ಇರೆ ನವಪದ್ಮರಾಗಚಷಕಂ ನಿಜಹಸ್ತತಳಾಗ್ರದೊಳ್ ಮನೋ
ಹರ ತಳಿರ್ದೊಂಗಲಂ ತಳೆದ ಕೋಮಲವಲ್ಲರಿಯಂತೆ ರಕ್ತಪಂ
ಕರುಹಮನಾಂತ ಪಂಕಜಿನಿಯಂತೆ ನವೋದಿತಚಂದ್ರಬಿಂಬಮಂ
ಧರಿಯಿಸಿದಿಂದ್ರದಿಗ್ವನಿತೆಯಂತೆಸೆದಳ್ ಮಧುಪಾನಗೋಷ್ಠಿಯೊಳ್ ೨

(ಜಗನ್ನಾಥವಿಜಯಂ, ೧೬-೧೧೫; ಸೂಕ್ತಿಸುಧಾರ್ಣವಂ, ೧೩-೪)

ಪಚ್ಚಿ ಪರಕಲಿಸಿ ಬೆನ್ನೊಳ್
ಬಿಚ್ಚಿರೆ ಮುಡಿ ಕಳ್ಳಬೆಳ್ಳಿವಟ್ಟಲ್ ಬಾಯೊಳ್
ಬೆಚ್ಚಂತಿರೆ ಸತಿ ಶಶಿಯಂ
ಕಚ್ಚಿ ನೆಲಕ್ಕಿೞಿವ ರಾಹುವಂ ನೆಱಿ ಪೋಲ್ತಳ್ ೩

(ಸೂಕ್ತಿಸುಧಾರ್ಣವಂ, ೧೩-೬)

ತೊಡರೆ ಕೊದಳ್ ಪೊದಟ್ದು ತುದಿನಾಲಗೆಯೊಳ್ ನಸುಗೆಂಪಿನಿಂದೆ ಕ
ಣ್ಣೊಡೆದು ಪಳಂಚಿ ಪುರ್ವನೆವೆಯಿಕ್ಕುವ ತಗ್ಗುವ ತೂಗಿ ಬೀಗುತೊ
ರ್ಗುಡಿಸುವ ಜೋಲ್ವ ರ್ಷಿಸಾಂಪಿಸುವ ಭಂಗಿ ಮನಂಗೊಳೆ ತಕ್ಕಿನೆಕ್ಕೆಯೊಳ್
ತಡತಡಮೆಟ್ಟಿ ಪಾಡಿ ಪೊಸಕಳ್ಗಳನೀಂಟಿದುದಂಗನಾಂಜನಂ ೪

(ಸೂಕ್ತಿಸುಧಾರ್ಣವಂ, ೧೩-೭)

ಮುಡಿ ಮಕರಧ್ವಜಂಬೊಲೆಬಿಲುತ್ತಿರೆ ಬೆಂಬಿಡದೊಯ್ಯನೊಯ್ಯನು
ಳ್ಳುಡೆ ಕಟಿಸೂತ್ರದೊತ್ತಿನೊಳೆ ಜೋಲ್ದಿರೆ ನಾಣ್ ತಲೆದೋಱಿ ಕೂಡೆ ಕೂ
ಕಿಡುವ ಕುಕಿಲ್ವ ಬಿಕ್ಕುಳಿಪ ತೇಗುವ ತನ್ನ ತೊಡಂಕಪ್ಪೆದೆ ನೂ
ರ್ಮಡಿ ಮನದೊಳ್ ಪಳಂಚಲೆಯೆ [1]ತೆಕ್ಕೆಯಿನೆಕ್ಕೆಯಿನೊರ್ವಳಾಡಿದಳ್[1] ೫

(ಪಂಪಭಾರತಂ, ೪-೯೦; ಸೂಕ್ತಿಸುಧಾರ್ಣವಂ, ೧೩-೮)

---

[1] ಥಕ್ಕೆಯೊಳಟ್ಟಜವಾಗೆಯಾಡಿದಳ್ (ಸೂ)

ತೋರಮುಡಿ ಬಿಟ್ಟಲೆಯೆ ಧಾರಿಣಿಯೊಳಗ್ರಕಚಮಾರತಿಯನೆತ್ತೆ [೧]ಕರವಾರಿಜಚಯಂಗಳ್[೧]
ತೋರಮೊಲೆ ಹಾರಮಣಿ ಕಾರಮುಱಿಯಂ ಕಱಿಯೆ ಸೀರೆ ನಸುಜಾಱಿ ಪೊಱಮಾಱ[೨]ಲೆಪದಿಂದಂ
ದಾರ[೩]ಮನಮಂ ಸ್ಮರವಿಕಾರಮನೆ [೩]ತಾಳೆ ಲಲಿತೋರು ಭರದಿಂದೊಲೆದು ಮೆಟ್ಟಿ[೩]ಕುಣಿದಳ್ ಶೃಂ
ಗಾರರಸ[೪]ದೇವತೆಯ ಮಿಂಱಿ ಮಿಗೆ ಸೊರ್ಕಿತ ಮದಿರಮನೀಂಟಿದರಪಾರವಧುವೃದಂ[೪] ೬
(ಸೂಕ್ತಿಸುಧಾರ್ಣವಂ, ೧೩–೯)

ಕುಡಿವುರ್ವಂ ನಸುನೀವುತುಂ ತಿಲಕಮಂ ತಿರ್ದುತ್ತುಮಾಸ್ಯಾಬ್ಜಮಂ
ತೊಡೆವುತ್ತುಂ ಕುಟಿಲಾಳಕಾವಳಿಗಳಂ ಸೈತೊತ್ತಿ ಚೆಲ್ವಾಗೆ ನೇ
ರ್ಪಡಿಸುತ್ತುಂ ಮದಿರಾಲಸೇಕ್ಷಣೆ ಮದಸ್ತಂಬೇರಮಾಕಾರದಿಂ
ನಡಪಾಡುತ್ತಮುಪಾಂಗಣಪ್ರಘಣದೊಳ್ ತನ್ವಂಗಿ ಕಣ್ಗೊಪ್ಪಿದಳ್ ೭
(ಶೃಂಗಾರರತ್ನಾಕರಂ, ೨–೫೯, ಸೂಕ್ತಿಸುಧಾರ್ಣವಂ, ೮–೪೧೧)

ಮನಮನೊಱಲ್ಚೆ ನೂಪುರದ ಮೆಲ್ಲುಲಿ ಕಾಂಚಿಯ ಮಂಜುಳಸ್ವನಂ
ತನಗಿನಿದೀಯೆ ಕಂಕಣಝಣತ್ಕೃತಮೊಪ್ಪಿರೆ ತೋರಹಾರಮೊ
ಯ್ಯನೆ ಮೊಲೆಯಂ ಪಳಂಚಲೆಯೆ ರಾಗರಸಂ ಕರೆಗಣ್ಮೆ ವಾರಕಾ
ಮಿನಿ ನಯದಿಂ ಕರಂ ನಲಿದು ನರ್ತಿಸಿದಳ್ ಮಧುಪಾನಗೋಷ್ಠಿಯೊಳ್ ೮
(ಶೃಂಗಾರರತ್ನಾಕರಂ, ೧–೪೫, ಸೂಕ್ತಿಸುಧಾರ್ಣವಂ, ೧೩–೨)

ಕಡಗಣ್ಣ ಕೆಂಪು ಜೆಳ್ಪಿಂ
ಗೆಡೆಗುಡೆ ಬೆಳರ್ವಾಯ್ ಪಳಂಚಿ ಸೊಗಯಿಸೆ ಮುದ್ದಿಂ
ಗೆಡೆಗುಡೆ ಕೆಯ್ತುಂ ಸೊರ್ಕಡ
ನುಡಿವಂತೆ ತೊದಳ್ ಪೊದಱಿ ದ್ದಡಂಬಡೆ ನುಡಿದಳ್ ೯[೫]
(ಸೂಕ್ತಿಸುಧಾರ್ಣವಂ, ೧೩–೧೬)

---

[೧]ಪವನೆಱಪು ವಲಗಣ್ಗಳ್(ಸೂ) [೨]ಮುದದಿಂಕಂಡಾ(ಸ) [೩]ತಾಳ್ದವರನೂರುಬಲದಿಂ ದೊಲೆದುಯೇಱಿ(ಸ) [೪]ವಾರಿಧಿ ಪೋರೆಯ ನತಿಕ್ರಮಿಪ ವಾರವಧುಗಳ್ ನುಡಿಪ ಸೊರ್ಕಿ ದೆಸೆವಿಟ್ಟರ್(ಸೂ)

ತುಂಬಿಗುರುಳೊಳ್ ತಡತಡಂಬಡೆದು ದುಂಬಿಗಳ ಬಿಂಬವೆಳಸುತ್ತಿರೆ ಮುಖಾಂಬುಜದ ಕಂಪಂ
[೧]ಪೊಂ[೧]ಬಳೆಯ ಸೋರ್ಮುಡಿ ವಿಡಂಬಿಸೆ ಮನೋಜನಲರಂಬು ಮಱಿಯಂ ಕಱಿ[೨]ಯೆ ಕಾರಮುಗಿಲಂ[೨] ಬ
ಕ್ಕಂಬಯಲೊಳೆಂಬವರ್ದು ಮೀಂಬೊಣರ್ಗಳಂತಿರೆ ತೆಱಂಬೊಳೆವ ನೀಳ್ದ ನಿಡುಗಣ್ [೩]ಬೆಳಗೆ ತೊಂ[೩]
ಡಂ ಬೆಳಗೆ [೪]ತೊಂಡರದ[೪] ಮಾಱ್ಕಯಿನೊಡಂಬಡುತಲಾಡಿದಳು [೫]ಬೆಂಬಱಿಯ [೫]ಸಂಭ್ರಮದಲೊರ್ವಳ್ ? ೧೦

(ಸೂಕ್ತಿಸುಧಾರ್ಣವಂ, ೧೩-೧೦)

ಸಕಲಸುಗಂಧಸಾರದೊದವಿಂ ಪೊರೆಯೇಱುತೆ ಗಂಧದಿಂದೆ ಕೌ
ತುಕವೆನಲೊತ್ತು[೬]ತೊಪ್ಪಿ[೬] ತಿಳಿಗಳ್ಗಳನೊಪ್ಪುವ ಹೇಮಪಾತ್ರೆಯೊಳ್
ಸುಕರವೆನಲ್ಕೆ ತುಂಬಿ ಸಖಿಯರ್ವೆರಸುತ್ಸವದಿಂದೆ ಪೀರ್ದಳ
ಚ್ಚುಕಮೆನೆ ರಾಜಮಂಜರಿಯುಮೊಂದುದಿನಂ ಪೆಸರ್ವೆತ್ತ ಜೊನ್ನದೊಳ್ ೧೧

ಕಡುಹುಳಿಗಳ್ಳದೊಂದುನರಿವಟ್ಟಲನಿಟ್ಟೆಣೆಯಲ್ಕೆ ಮೂಱುಸೂಟಿನ್
ಮಿಡಿಮಿಡಿವರ್ಥಮಂ ಕುಡಿದು ಚಪ್ಪಱಿದಿಕ್ಕಿದ ಸಣ್ಣಮೀನ್ಗಳಂ
ಮಿಡಿಗಳನಂ ಕುಱುಂಕಿ ಮುಗುಳೊಟ್ಟಲು ಡಜ್ಜನೆ ತೇಗಿ ಬಾಱ್ಗಯೆ
ನ್ನೊಡಯನೆನುತ್ತಮೇಂ ನೆಱಿದರೋ ಸುಖಿಗಳ್ ಮಧುಪಾನಕೋವಿದರ್ ೧೨

ಹುಳಿ ಘನವಾಗೆ ಕೊಕ್ಕರಿಸಿ ಗುಗ್ಗುರಿಯಿಕ್ಕಿರೆ ಮುಕ್ಕಿ ಮಿಕ್ಕುದಂ
ಕೆಲದವರ್ಗಿತ್ತು ಮತ್ತೆ ತಿಳಿಗಳ್ಳೆಱೆಯಲ್ ಕುಡಿದಳ್ಳಿ ಹಿಗ್ಗಲಾ
ಗಳೆ ದಣಿಪೆದ್ದು ಡೆಂಡಣಿಸಿ ಬೀೞ್ದು ನೆಟಿಲ್ ಸುಱಿಯಲ್ಕೆ ನಕ್ಕು ಕಂ
ಗಳನರೆಮುಚ್ಚಿ ಮತ್ತೆ ತೆಱವುತ್ತೆಸೆದರ್ ಮಧುಪಾನಗೋಷ್ಠಿಯೊಳ್ ೧೩

ಅಲರ್ಗಣ್ ಕೆಂಪಡರಲ್ಕೆ ಪೊಂಗಿದಧರಂ ಬೆಳ್ಪೇಱೆ ರೋಮೋದ್ಗಮಂ
ತಲೆದೋಱಲ್ ಬೆಮರುಣ್ಮೆ ಲಜ್ಜೆ ತೊಲಗಲ್ ನಿತ್ರಾಣವಾಗಲ್ ಮದಂ
ಬಲಿಯಲ್ ಕಣ್ ಮುಗಿವುತ್ತ ಮೂರ್ಛೆ ಮಿಗೆ ತೋಱಲ್ಕಂದು ಚೆಲ್ವಾದುದ
ಗ್ಗಳಮೆಂಬಂತಿರಲಿನ್ನದೇಂ ಪೊಗಱ್ವನೋ ಕಾದಂಬರೀ ಸಂಗಮಂ ೧೪

---

[೧]ಪುಂ(ಸ) [೨]ಯುಲಂಬುದಮಿದೆಂ(ಸ) [೩]ಬಳಸೆತೊಂ(ಸ)
[೪]ಬೆಂಬೊಬರ(ಸ) [೫]ಬೊಂಬುಳಿಯುಬೆಂಬಱಿಯು(ಸ) [೬]ತೋಪ (ಸ)

ವಿಧುಮುಖಿ ಮೆಲ್ಲಮೆಲ್ಲನೆ ಮಧುದ್ರವಮುಂ ಕೆಗೆದೀಂಟುವಲ್ಲಿ ತ
ನ್ನಧರದಳಾಗ್ರಮುಂ ಪೊರೆದುದಂ ಮಧುವಂ ಬೆಱಗಾಗಿ ನೋಡುತಂ
ಮಧುರಸಮುಲ್ಲು ಕುಂಕುಮರಸಂ ದಿಟವೆಂದು ಬಟೀಕ್ಕೆ ಶಂಕೆ ತ
ನ್ನಧುಮುದಗಂಧದಿಂ ತೊಲಗೆ ಸಲ್ಲಿಸಿದಳ್ ಮಧುವಂ ನಿಜೇಚ್ಛೆಯಿಂ ೧೫
(ಜಗನ್ನಾಥವಿಜಯಂ, ೧೬-೧೧೬, ಸೂಕ್ತಿಸುಧಾರ್ಣವಂ, ೧೩-೨೫)

ತನುಲತೆಗಂಕುರಂ ತಳಿತಲರ್ ಮಧುಸಂಗದೊಳಾಯ್ತು ಚೋದ್ಯಮೆಂ
ದೆನೆ ಮಧುಪಾನಜಾತಪುಳಕೇಕ್ಷಣಶೋಣಿತ ಘರ್ಮಬಿಂದುಗಳ್
ತನಗೆಸೆಯಲ್ ಮಹೋತ್ಸವದೆ ಕೋಗಿಲೆವೇಣ್ ಗಟಿಪಂ ನೆಗಟ್ಚುವಂ
ತನುವಿಪ ಸೊರ್ಕಿನಿಂ ಪಿಕನಿನಾದೆ ಪೆಱಳ್ ಗಟಿಪಂ ನೆಗಟ್ಚಿದಳ್ ೧೬
(ಜಗನ್ನಾಥವಿಜಯಂ, ೧೬-೧೧೭, ಸೂಕ್ತಿಸುಧಾರ್ಣವಂ, ೩-೨೬)

ಎನ್ನ ಕೆಲಂಗಳೊಳ್ ಪೆಱತವುತಿರ್ದಪುವೀ ಶ್ರುತಿಪೂರಕೈರವಂ
ತನ್ನ ಬೆಡಂಗನೆಂದು ಸೆಣಸುತ್ತವಱತೊಳ್ ತೊಡರ್ದಿಂತವಲ್ತೆ ಕೆಂ
ಪಂ ಮುಳಿಸಿಂದವಾಂತವೆನೆ ಕೆನ್ನೆವರಂ ನಿರ್ಮಿರ್ದಕ್ಷಿಗಳ್ಗೆ ರಾ
ಗಂ ಮಧುಸೇವೆಯಿಂ ನೆಗೆಟ್ಚು ರಂಜಿಸಿದರ್ ಮಧುಮತ್ತಕಾಂತೆಯರ್ ೧೭
(ಜಗನ್ನಾಥವಿಜಯಂ, ೧೬-೧೧೮; ಸೂಕ್ತಿಸುಧಾರ್ಣವಂ, ೧೩-೨೭)

ಮದಿರಾಪಾನವಿಕಾರದೊ
ಳೊದವಿದಸಭ್ಯೋಕ್ತಿ ಬೇಱತ ಬಗೆಗೊಳಿಸೆ ಕದ
ಕ್ಕದಿಸೆ ಪೊಲೆ ನಳಿಯೆ ನಡು ಮಿಳಿ
ರ್ದದಿರೆ ಕುರುಳ್ ಸುದತಿ ಜತಿಗೆ ಮೆಟ್ಟಿದಳೊರ್ವಳ್ ೧೮
(ಶೃಂಗಾರ ರತ್ನಾಕರಂ, ೧-೪೭; ಸೂಕ್ತಿಸುಧಾರ್ಣವಂ, ೧೩-೩)

ಮುದದಿಂದುಣ್ಮಿದ ಪಾಟಲಚ್ಛವಿಯ ವಕ್ತ್ರಂ ಘೂರ್ಣಿತಾಕ್ಷಿದ್ವಯಂ
ಪದಪಂ ಬೀಱಿ ಲತಾಂಗಿ ತನ್ನೊಳೆ ತೊದಲ್ಮಾತಾಡುತಂ ಪಾಡುತೊಂ
ದಿದ ತನ್ನ ನೆಟಿಲ್ಗೆ ಬೆಚ್ಚಿ ತೊಲಗುತ್ತಂ ಮುಗ್ಗಿ ಜೈವುತ್ತೆ ನೂಂ
ಕದಿರೆಂದಿಂಗದಿರ್ಗಂಡು ನಕ್ಕು ನಲಿದಳ್ ಕಾದಂಬರೀಗೋಷ್ಠಿಯೊಳ್ ೧೯

ಅರಿವರಿತ್ತರೊತ್ತೆಯನುರಾಗಿಗಳೆಲ್ಲಿಯುದಲ್ಲಿ ರಾಗಿ ಹೆ
ಮ್ಮಾರಿಯ ಭಾರಿತಪ್ಪದೆಲೆ ಮೇಲೆನೆ ಕೋಮಲೆ ಬೆಚ್ಚಬಿಚ್ಚ ಬಂ
ದಾರಿಯು ಕನ್ನುಂಪೆಕ್ಕಟೆಯೊಳಿರ್ಪವನಾರುಗೆ ಜೋಹರಣಂ ಸಂ
ಸಾರವೆನುತ್ತ ನಕ್ಕು ಕುಣಿದಾಡಿತು ಮಧ್ಯಪಿಬಂತ ನಾರಿಯರ್ ? ೨೦

ಆರಿವರುಟ್ಟ ಹೂವೆಲೆಗೆ ನಿನ್ನಯ ಬಾಯದು ನಮ್ಮ ತಮ್ಮನಾ
ದಾರಿಯೊಳಿರ್ದ ಚಪ್ಪರದ ಮೇಲೊಗೆತಂದನುಯಿಂದು ನಾಳೆ ಕೇ
ಳಾರಿಯರಮ್ಮ ಕಟ್ಟಿದಳು ಹೆಬ್ಬುಲಿಯುಂ ಕರೆಯಲ್ಕೆ ನೊಂದು ಹೆ
ಮ್ಮಾರಿಯೆ ಬಲ್ಲುದೆಂದೆನುತಲೊರ್ವಳು ಸೊರ್ಕಿಯೆ ನೃತ್ಯವಾಡಿದಳ್ ? ೨೧

ಆನೆಯಿದಲ್ಲಿ ಬೆಕ್ಕು ಮುದಿಗೋಡಗದಂತಿದೆ ಸಾದುಹೊತ್ತೊಡಂ
ದಾನವಕೊಟ್ಟನಯ್ಯನೆಳೆನಾಗರಬಾವಿಯಕೊಂಡು ಪೊಡೊಡಂ
ಮಾನಕೆ ಮಾವಖಂಡುಗದ ಗೊಂಗಡೆಯೆಂದು ವಿಕಾಳಗೊಂಡು ಸು
ಮ್ಮಾನದಿ ಕೈಗಳಂ ಮುಗಿದು ನಕ್ಕಡು ಮಿಕ್ಕ ಪಿಬಂತನಾರಿಯರ್ ? ೨೨

ತಂಗಿಯ ಹಣ್ಣಕ್ಕೈಮುಗಿದು ಮಂಗಳವಾರದ ನಾಳೆ ಕಂಡನಾ
ತಿಂಗಳ ಮಾವನಣ್ಣ ಬೆಳುದಿಂಗಳ ರಕ್ಕಸಿ ಭಾವ ನೋಡವಂ
ನಂಗಕೆ ಹೂವ ಹೊಳಿರಿಸಿದಂಗುಟದಲ್ಲಿದು ಮೆಚ್ಚೆ ಮೆಚ್ಚನೀ
ಯಂಗಕೆನುತ್ತ ನಕ್ಕು ಕುಣಿದಾಡಿತು ಮದ್ಯಪಿಬಂತನಾರಿಯರ್ ? ೨೩

ಏಗುವೆನೇಗುವೆಂ ಮುಗಿಲು ಬಿದ್ದಿದೆ ಮಂಡೆಯಮೇಲೆ ಹಾವು ಹಾ
ನಾಗಯಸಾಮಿ ಜೋಯೆನುತೆ ಕತ್ತೆಗೆ ಕೈಮುಗಿದಕ್ಕ ಬಲ್ಲೆನಾಂ
ಬಾಗಿಲಕಂತಿಯುಂಣಗೆಜಱ ಸೋದರ ನಾದಿನಿ ದಿಮ್ಮಿದಿಮ್ಮಿತೋ
ಕೋಗಿಲೆಗೂರು ಸಾರೆಯೆನುತೊರ್ವಳು ಸೊಕ್ಕೆಯೆ ನೃತ್ಯವಾಡಿದಳ್ ? ೨೪

(ಸೂಕ್ತಿಸುಧಾರ್ಣವಂ, ೧೩–೨೧)

ಬೆಟ್ಟವಿದಿರಾಗಿ ಬರುತಿದೆ
ಮುಟ್ಟುತ್ತಿದೆ ಮುಗಿಲು ತಲೆಯ ಧರಣಿಯು ಬೆನ್ನಱ
ಯುಟ್ಟುತಿದೆ ಕೇಳು ಕೇಳದೀ
ಕೊಟ್ಟಗೆಯುಂ ನೆರೆದು ಪೂಸೆ ಮಾಣ್ಬುದು ಜೇಗಂ ? ೨೫

ಓರಂತೆ ಮೆಚ್ಚಿದಂ ಕೃತಿ
ಸಾರಂ ಮಧುವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ಡೋರಸಮುದ್ರಾಧಿನಾಯಕಂ ಸೋಮನೃಪಂ ೨೬

ಇದು ಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ ಪುರಾತನ
ಪ್ರಮಾಣಕವಿಪುಂಗನ ಮಲ್ಲನಿರ್ಮಿತ ಕಾವ್ಯಸಾರಮಹಾಪ್ರಬಂಧದೊಳ್
ಮದ್ಯಪಾನವರ್ಣನಂ ತ್ರಯೋದಶಾಶ್ವಾಸಂ||

# ಸುರತಕ್ರೀಡೆ

ಪರಿರಂಭಂ ಚುಂಬನಂ ಸೀತ್ಕೃತಿ ಗಳರುತಿ ದಂತಕ್ಷತಂ ರೇಖೆ ಪೊಯ್ಲುಗಳ್
ಕರಣಂಗಳ್ ಪಲ್ಲಟಂ ನಚ್ಚಿನ ಮುಖರತೆ ಸುರ್ಯ್ ಕಂಪನಂ ಸ್ವೇದಮುಂಗಾಂ
ತರಪೂರಂ ರೋಮಹರ್ಷಂ ನಯನಮುಕುಳನಂ ಮಂಚಚಂಚಚ್ಚಕುಂತೀ
ಸ್ವರಮೊಪ್ಪಲ್ಕೊಪ್ಪುವನ್ನಂ ಮೆಱೆಗೆ ಕವಿತೆಯೊಳ್ ನಾಡೆ ಸಂಭೋಗದೊಳ್ಪಂ ೧

(ಸೂಕ್ತಿಸುಧಾರ್ಣವಂ, ೧೪-೧)

ರತಿಗೇಹಂ ಹಾಸುಮಂಚಂ ಪಡಿಗನಡಪಮಿಂಗೆಜ್ಜೆಯುಂ ಪಾನಕಂ ಧೂ
ಸಿತವಸ್ತ್ರಂ ಮಂಡನಂ ಲೇಪನಮುಲಸ್ವಸೆ ಪೂ ದರ್ಪಣಂ ವೀಜನಂ ಸ
ತ್ಕೃತಿಚಿತ್ರಂ ವೀಣೆ ನೇತ್ರಂ ಸಹಚರಿಯಿವನುಳ್ಳಂಗದರ್ಗ್ಯಕರೂಪಾ
ನ್ವಿತೆ ಜಾಣುಳ್ಳಾಕೆ ಮಾಟ್ಕಿಂ ವಿಟರ್ಗಭಿಮತಮುಂ ಕಾಮಸಾಮ್ರಾಜ್ಯದೊಳ್ಪಂ ೨

(ಸೂಕ್ತಿಸುಧಾರ್ಣವಂ, ೧೪-೨)

ನೆಲೆಮೊಲೆಯೊತ್ತೆ ವಾತಮಧುರಾಮೃತಸೇವನೆಯಿಂದೆ ಪಿತ್ತಮ
ಗ್ಗಲಿಸಿದಲಂಪಿನಿಂದಮಿರುಳೆಂಟು ಪಗಲ್ ಪದಿನಾಱುಗೊಳ್ವ ಕೋ
ಟಲೆಯೊಳೆ ಪೋಗುಗುಂ ಕಫಮುದಕ್ಕಟಿಱನೆಜ್ಜರ ಪೇಟ್ದಿ ಶಂಠಿ ಪಿ
ಪ್ಪಲಿ ಮೆಣಸೇಂ ತ್ರಿದೋಷಹರಣಕ್ಕಬಲಾಜನಸೇವೆ ಸಾಲದೇ ೩

(ಸೂಕ್ತಿಸುಧಾರ್ಣವಂ, ೧೪-೪)

ಹಾರಮನೊಯ್ಯನೋಸರಿಸುವಂತೆ ಕುಚಂಗಳ ಮೇಲೆ ನಾಂಟಿಪಂ
ಕೂರುಗುರಿಂದೆ ಮತ್ತೆ ಪಣೆಗತ್ತುರಿಬೊಟ್ಟು ಕಲಂಕಿತೆಂದು ತಾ
ನೋರೆಯನೊಮ್ಮೆ ತಿದ್ದುವವೊಲೊಯ್ಯನೆ ಚುಂಬಿಸನಕ್ಕ ನೋಡೆ ಚಿ
ತ್ತಾರಮನೆಲ್ಲಿ ಕಲ್ತನೆ ಮನೋವರ ಸತ್ಕವಿ ಕಾಮಭೂಪತಂ ೪

ಬೆರಲೊಳ್ ಮುದ್ರಿಕೆಯುಂ ತೊಡರ್ಚುವ ಕಪೋಲಸ್ಥಾನದೊಳ್ ಪತ್ರವ
ಲ್ಲರಿಯುಂ ಚಿತ್ರಿಪ ಹಾರಮಂ ಪಿಡಿದು ನೋಟ್ಪಾಸ್ಯಾಂಬುಜಸ್ವೇದನುಂ
ಕರದಿಂದಂ ತೊಡೆದೊಯ್ಯನುಳ್ಳುಡೆಗೆ ಕಾಂಚೀದಾಮಮಂ ಸಾರ್ಚುವೊ
ಳ್ಪುರುಳಂ ನೇರ್ಪಡೆ ತೀರ್ದುವೀ ನೆವದೆ ಕೃಷ್ಣಂ ಪೊರ್ದಿದಂ ನಲ್ಲಳಂ ೫

(ಜಗನ್ನಾಥವಿಜಯಂ, ೧೦-೩೯, ಸೂಕ್ತಿಸುಧಾರ್ಣವಂ, ೬-೯೭)

ನುಡಿಯಲ್ ಕೇಕಿ ಶುಕಾಳಿಯೊಳ್ ನುಡಿವ ಸೊಂಕಲ್ ಪಿಂಗೆ ಸಾರ್ದಿರ್ದ ಕೌ
ಳುಡೆಯುಂ ಸೋಂಕುವ ವಕ್ತ್ರಮುಂ ಪದೆದು ನೋಡಲ್ ಪಾರ್ಶ್ವವಿದ್ಯಂಗಳಿಂ
ನಡೆನೋಟಿತ್ತೋಪಳದೊಂದು ಭಾವರಸಗರ್ಭಕ್ರೀಡೆಯುಂ ನಾಡೆಯುಂ
ಪಡೆವನ್ನಂ ಮುದಮುಂ ನೃಪೇಂದ್ರನತಿರಾಗೋದ್ರೇಕಮುಂ ತಾಳ್ದಿದಂ ೬

ಒಲವಿಂ ನೋಡುವ ನೋಟದಿಂ ಪದೆದು ಸೋಂಕುತ್ತಿರ್ಪ ಸೋಂಕಿಂ ಮನಂ
ಗೆಲೆ ಮಾತಾಡುವ ಮಾತಿನಿಂ ಕಳೆದು ಲಜ್ಜಾಸಾಧ್ವಸೋದ್ರೇಕಮುಂ
ಜಲಜಾತಾಕ್ಷನೊಳಾಕೆ ಬಿಚ್ಚತಿಕೆಯುಂ ಮಾಡಲ್ ಬಱಿಕ್ಕಂ ಕಳಾ
ನಿಲಯಂ ಮಾಡಿದನೊಲ್ದು ಚುಂಬನಪರಿಷ್ವಂಗಪ್ರಪಂಚಂಗಳಿಂ ೭
(ಜಗನ್ನಾಥವಿಜಯಂ, ೧೦-೧೪೦; ಸೂಕ್ತಿಸುಧಾರ್ಣವಂ, ೬-೧೧೬)

ಉರದಿಂ ಪೆರ್ಮೊಲೆ ಬೆಂಗೆ ಬೀಗೆ ಬೆಮರುಂ ಬಲ್ವಜ್ರಲೇಪಂಬೊಲಾ
ಗಿರೆ ಕೀಲ್ಗೊಟ್ಟು ಬೆಡಂಗನೀಯೆ ಪುಳಕಂ ತೋಳ್ ತಳ್ತು ಗಂಟಿಕ್ಕಿದಂ
ತಿರೆ ಮೆಯ್ಮೆಯ್ಯೊಳಡಂಗೆ ತಳ್ತಮರೆ ಗಾಢಾಲಿಂಗನಂಗೆಯ್ದು ನ
ಲ್ಲರದೇನಿರ್ದರೊ ಕಾಸಿ ಬೆಚ್ಚತೆಱದಿಂ ಶ್ರೀಸತ್ಯಭಾಮಾಚ್ಯುತರ್ ೮
(ಜಗನ್ನಾಥವಿಜಯಂ, ೧೧-೬೦)

ಮಾನಿನಿಯ ಸುರತರತ್ನನಿ
ದಾನಂ ಚಾತುರ್ಯದೀಪವರ್ತಿಯು ತಾನಂ ದಲ್
ತಾನೇಂ ಕೋಳ್ಪೋಯ್ತೆನಲಾ
ಮಾನಿನಿಯೊಳೆ ಕ್ರೀಡಿಸಲ್ಕೆ ವಧುನುನವಡೆದಂ ೯

ಶಕುನೀವಕ್ತ್ರಾರವಂ ಮನ್ಮಥರಸಬಹುಳಂ ಸೀತ್ಕೃತಂ ಕಂಠನಾದಂ
ಮುಕರಾಂಕಜ್ಯಾಲತಾಟಂಕರರುತಿ ದೃಢಹಸ್ತಪ್ರಹಾರಸ್ವನಂ ದ
ರ್ಪಕಭೇರೀಭಾಂಕೃತಂ ತಾನೆನೆ ಯುವತಿರತಾರಂಭಕೋಳಾಹಳಧ್ವಾ
ನಕಮಂತಾ ಕಂತುಸೇನಾಕಳಕಳವವೊಲಾಶ್ಚರ್ಯಮಂ ತಂದುದಾಗಳ್ ೧೦
(ಜಗನ್ನಾಥವಿಜಯಂ, ೧೬-೧೨೩; ಸೂಕ್ತಿಸುಧಾರ್ಣವಂ, ೮-೪೭೯)

ಮದನಸುಖಕ್ಕೆ ತಾನೆ ನೆಲೆ ಪೆಂಡಿರೊಳೆಂಬಿನಮುಂತುಟೊಂದು ನೋ
ಟದ ತೆಱನಂತುಟೊಂದು ತನಿಸೋಂಕಿನ ಸಮ್ಮದಮಂತುಟೊಂದು ಮೇ
ಳದ ಚದುರಂತುಟೊಂದು ಪರಿರಂಭದ ಸಂಭ್ರಮಮಂತುಟೊಂದು ಕೂ
ಟದ ಪರಿ ಸತ್ಯಭಾಮೆಯೊಡಗೂಡೆ ಮುರಾರಿಗೆ ಕೂಡಿತುತ್ಸವಂ ೧೧
(ಜಗನ್ನಾಥವಿಜಯಂ, ೧೧-೫೬)

ಕರಕೃಷ್ಟಾಳಕಮುತ್ಪದಾರ್ಪಿತನಖಂ ನಿಷ್ಪೀಡಿತೋಷ್ಠಂ ಸನು
ತ್ಸರಹಸ್ತಾಹತಿ ಹೂಂಕೃತಾನ್ವಿತಪದಾಘಾತಂ ಯಥೇಚ್ಛಾವಚ
ಸ್ಫುರಣಂ ಸಭ್ರುಕುಟೀಕ್ಷಣಂ ದೃಢಪರಿಷ್ವಂಗಂ ವಿಮುಕ್ತಾಂಗಸಾ
ಕರಣಂ ಕೈತವವೃತ್ತಮೇಂ ನೆಗಟ್ದುದೋ ಸಂಭೋಗಕೋಲಾಹಲಂ ೧೨

(ಜಗನ್ನಾಥವಿಜಯಂ, ೧೧-೫೭; ಸೂಕ್ತಿಸುಧಾರ್ಣವಂ, ೬-೧೦)

ಅವಲುಪ್ತಾಂಗವಿಲೇಪನಂ ಚ್ಯುತಲಲಾಮಂ ಸ್ರಸ್ತಮಾಲಾಳಿ ವ
ಕ್ತ್ರವತಂಸಂ ಶ್ಲಥಮೇಖಲಂ ತ್ರುಟಿತಹಾರಂ ಮುಕ್ತಮಂಜೀರಕಂ
ಪ್ರವಿಕೀರ್ಣಾಳಿಕಮಸ್ತಬದ್ಧಕಬರೀಸ್ವಿನ್ನಾಂಗಮಾರಕ್ತನೇ
ತ್ರವರಾಗಾಧರಮಾಯ್ತು ಕಾಮಕಲಹಂ ಸತ್ರಾಜಿತಾದೇವಿಯೊಳ್ ೧೩

(ಜಗನ್ನಾಥವಿಜಯಂ, ೧೧-೫೮; ಸೂಕ್ತಿಸುಧಾರ್ಣವಂ, ೬-೧೦೮)

ಪೊಡರ್ವುತ್ತುಂಗಸ್ತನಂ ಕೊಂಕಟಿದು ನಿಮಿರ್ದ ನೀಲಾಳಕಂ ಜೋಲ್ದ ಬಂಬ
ಲ್ಮುಡಿ ಬೆಳ್ಪೇಱಿರ್ದ ಬಿಂಬಾಧರಮಣಿ ನಸುಸೋಂಕಿರ್ದ ಕರ್ಣೋತ್ಪಲಂ ಕೆಂ
ಪಡರ್ದಾಲೋಲೇಕ್ಷಣಂ ಕಂಪಿಸುವ ತನು ರತಿಶ್ರಾಂತಿಯಿಂದಂ ಬೆಡಂಗಂ
ಕುಡೆ ನೆಮ್ಮಿರ್ದೋಪನಂ ಮೆಯ್ಬೆಮರನೆಲರೊಳಂದಾಱಿಸುತ್ತಿರ್ದಳೊರ್ವಳ್ ೧೪

(ಜಗನ್ನಾಥವಿಜಯಂ, ೧೬-೧೨೪; ಸೂಕ್ತಿಸುಧಾರ್ಣವಂ, ೮-೪೮೦, ೧೪-೩೮)

ಅಲರ್ಗಣ್ ಬೆಂಡೇಱಿ ರೋಮಾಂಚದ ಜಲವನಿತುಂ ತಾಱುತಟ್ಟಾಗೆ ಬಾಯೊಳ್
ಪಲವುಂ ಸುಣ್ಣಾಕ್ಷರಂಗಳ್ ಲಾವುಗೆಯ ಕೊರಳೆನಲ್ಲಾಡಿದಂತಾಗೆ ಜುಮ್ಮೆಂ
ದೊಲೆದಂಗಂ ತೂಗೆ ಸುಯ್ಲುಂತೊಳಗಿಱಿಯೆ [1]ಗಳಂ ಬೀಗೆ[1] ನಾಣ್ ಸೂಸೆ ಕಾಮಂ
ಚಲದಿಂ ಕೈಮಿಕ್ಕಮುಳ್ಗಂತ್ರಮನೆ ಕೆಡಪಿದಂತಿರ್ದರುಂ ಮೂರ್ಛೆವೋದರ್ ೧೫

(ಸೂಕ್ತಿಸುಧಾರ್ಣವಂ, ೧೪-೭೬)

ಅತಿಮುಗ್ಧಾಪಾಂಗಭೃಂಗಂ ಮುಖಸರಸಿಜದೊಳ್ ತನ್ನ ಬಾಹಾಭುಜಂಗಂ
ಸುತನುಶ್ರೀಖಂಡಶಾಖಾಂತರದೊಳಧರಸದ್ವಿದ್ರುಮಂ ದಂತಮುಕ್ತಾ
ತತಿಯೊಳ್ ಪಾಣಿಪ್ರವಾಲಂ ಕುಚಕಲಶದೊಳಿಂಬಾಗೆ ತಳ್ತಿರ್ದನಿಂದ್ರ
ಪ್ರತಿಮಂ ಲೀಲಾವತೀದೇವಿಯ ಹೃದಯದೊಳಾ ರೂಪಕಂದರ್ಪದೇವಂ ೧೬

(ಲೀಲಾವತಿ, ೧೪-೯೭)

---

[1]ಬೆಮರ್ ಪೊಣ್ಮೆ (ಸ)

ಪದುಳಿಸದಂಗಸೆಟ್ಟಿಱದ ಕಣ್ಮಲರಾಱದ ಸೇದೆ ಮುಗ್ಗುಲಿ
ಕ್ಕಿದ ಪುಳಕಂಗಳಿಂಗದ ಬೆಮರ್ ಮಿಡುಕೋಡದ ಪುರ್ವು ಬೀಗಿ ಬೀ
ಯದ ತುಟಿ ಕೆತ್ತುಗುಂದದ ಕುಚಂ ನಡುಕಂಗಡದೂರು ಗಂಡೆಯೇ
ಱಿವ ಕರಘಾತಮೊಪ್ಪೆ ಸುಸಿಲಿಂ ತಣಿದೊಯ್ಯನೆ ಜಾರೆ ಜಾಱಿದಳ್ ೧೭

(ಲೀಲಾವತಿ, ೩–೧೫; ಸೂಕ್ತಿಸುಧಾರ್ಣವಂ, ೮–೧೬೨)

ಪೊಸಸುಸಿಲೊಳ್ ನೃಪಾತ್ಮಜೆ ವಿದಗ್ಧೆಯವೊಲ್ ಪ್ರಿಯನೊಲ್ದು ಮೇಳಿಪೊಂ
ದೆಸಕದೆ ನಾಣನೊಕ್ಕು ಗತಭೀತಿಯಿನಪ್ಪುವ ಲಲ್ಲೆಗೆಯ್ವ ಚುಂ
ಬಿಸುವ ಮುರಳ್ವ ಪ್ಪೈಗೊಡುವ ಮೆಯ್ಮಱಿಸಕ್ಕಱುಮಾಸೆಗೆಯ್ವುತಿ
ರ್ಪ ಸಿಯುಳಿದೇಂ ಮನಂಬಡೆದಳೋ ಚದುರಿಂ ಮುದದಿಂದೆ ಭೂಪನಾ ೧೮

ಪದಯಿಸಿ ಸೋಂಕಿ ಸೋಂಕಿನೆಡೆ ಮೇಳಿಸಿ ನೀರೆಯ ನೀಳ್ದ ತೋಳತ
ಱ್ಪಿದಿರ್ಗೊಳೆ ಪೆಲ್ಲನಪ್ಪಿ ಮೊಗಮೆತ್ತಿರೆ ಚುಂಬಿಸಿ ಸೋಲ್ತು ನಾಣನೊ
ಕ್ಕುದನಱಿದಿಚ್ಛೆಗಾರ್ತನದ ಲಲ್ಲೆಗಳಂ ನುಡಿದಂತಲಂಪಿನು
ಬ್ಬಿದಿಗಮನಾ ಲತಾಂಗಿಗೆ ನೃಪಂ ಪಡೆದಂ ನವಸಂಪ್ರಯೋಗದೊಳ್ ೧೯

(ಕಾವ್ಯಾವಲೋಕನಂ, ೮೦೦; ಸೂಕ್ತಿಸುಧಾರ್ಣವಂ, ೧೪–೧೩)

ಬಗೆಯೊಳ್ ಪೊಣ್ಮುವಲಂಪು ಕಾತರತೆಯಂ ತಂದೀಯೆ ಮೆಯ್ ಮೆಯ್ಗೆ ಸಂ
ದುಗಳೇನಪ್ಪೊಡಮಿಲ್ಲದಂತಮರ್ದಿನಂ ತಳ್ತಪ್ಪಿ ಬಾಯ್ಗೂಡಿದೊಳ್
ಮಿಗೆ ಪೀರ್ವಂತೆ ಮನೋಜರಾಗರಸಮಂ ಪೆಯ್ವೆರ್ಚೆ ಕಾದಲ್ಮೆ ಕೆ
ಯ್ಮಿಗುವನ್ನಂ ನೆರೆದರ್ ಮನಃಪ್ರಿಯತಮರ್ ನಾನಾಕಲಾಪ್ರೌಢಿಯಿಂ ೨೦

(ಕಾವ್ಯಾವಲೋಕನಂ, ೮೦೧)

ತೆಱಪಱಮೋಪನಪ್ಪಿದೊಡೆ ಮೆಯ್ಮಱಿವಪ್ಪು ಸಡಿಲ್ದುದಕ್ಕೆ ಮೆ
ಯ್ಯಱಿವ ಪೊದಳ್ದ ಬಾಯ್ಬಿಱಿಗೆ ಮೆಯ್ಮಱಿಸಂತದು ಮೆಲ್ಲನಾಗೆ ಮೆ
ಯ್ಯಱಿವ ಜವಂ ಜವಂಗಿಡಿಸೆ ಮೆಯ್ಮಱಿವಾಸನಪಲ್ಲಟಕ್ಕೆ ಮೆ
ಯ್ಯಱಿವೆಡೆ ಸಾವ ಹುಟ್ಟುವೆಡೆಯಾದುದವಳ್ಗೆ ರತಾತಿರೇಕದೊಳ್ ೨೧

(ಲೀಲಾವತಿ, ೧೨–೨೦; ಸೂಕ್ತಿಸುಧಾರ್ಣವಂ, ೧೪–೩೮)

ಕಾದಲಸೀಂಟೆ ತಿಂದ ತುಟಿಯುಣ್ ಮಿಗೆ ಚುಂಬಿಸಲೆಂದು ಬಾಯ್ಗೆಬಾ
ಯಾದವೊಲೊಪ್ಪೆ ನೋಟ್ಪಿರಕೆಯಿಂ ಪೊಱಪೊಣ್ಮುವ ಬೆಳ್ಪು ಕಣ್ಗೆ ಕ
ಣ್ಣಾದವೊಲೊಪ್ಪೆ ತೋಳ ನೆಱಲೋಪನ ಮೆಯ್ಯೊಳಗಾಗೆ ತೋಳ್ಗೆ ತೋ
ಳಾದವೊಲೊಪ್ಪೆ ತಳ್ತು ಮನಕಂ ಮನವಾದವೊಲಾಕೆ ಕೂಡಿದಳ್ ೨೨

(ಲೀಲಾವತಿ, ೧೩–೨೩)

ಗಳನಾದಂ ತಳ್ತ್ತ ನೀರ್ವಕ್ಕಿಗಳುಲಿಪುಮುಕೀರ್ಣಾಳಕಂ ಭ್ರಾಂತಭೃಂಗಾ
ವಳಿ ಸಸ್ವೇದಪ್ರಕಂಪಂ ಮೊಲೆ ನೆಗೆವ ರಥಾಂಗಂಗಳಾಗಲ್ಕೆ ಸಂಭೋ
ಗಲಸತ್ಕಾಂತಾಸ್ವರೂಪಂ ಸೊಗಸಿನ ಕೊಳನಂ ಪೋಲೆ ತಾಂ ಪೀರ್ದನೊಲ್ದು
ಳ್ಳಲರ್ದಾಸ್ಯಾಂಭೋಜದಿಂ ಫುಲ್ಲಧರದಳಮನಾನಂದದಿಂ ರಾಜಹಂಸಂ ೨೩

ಸವಿ ತವದಾದುದೀಯಧರಮುಂ ಪುಳಕಾಂಕುರ ಮಾಯುನಾಯ್ತು ಮ್ಸೆ
ಗವಳ ಕುಚಕ್ಕೆ ಕರ್ಕಶತೆ ಜೀವನನಾಯ್ತುಱುದಂತಿರೆನ್ನ ಬಾ
ಯ್ಪಿವರದೊಳೆನ್ನ ತೋಳ್ಪರಣ ತೊರ್ತುಳಿಯೊಳ್ ಕಡಿಕೈದವಿಂತು ಬಾ
ಳ್ಪವೆ ಪೊಡರ್ಪೆನ್ನುರೋಹತಿಯೊಲೆಂಬವೊಲೀಕ್ಷಿಸುತಿರ್ದನಲ್ಲನಾ (?) ೨೪

ಕೆದಱುವ ಕುಂತಳಂ ಕುಸಿದು ಕೊರ್ಬಿದ ಪೆರ್ಮೊಲೆ ದೊಂಡೆ[1]ವೊಂಡಿದಂ[1]
ಗಿದ ತುಟಿ ತಳ್ಪಿನಿಂ ಮುಱುದ ಮ್ಸೆನವಿರೋಪನ ತಟ್ಟಿ ತೋಳ್ಗಳೊ
ತ್ತಿದ ಬಳೆ ಮೆಯ್ಯ ಕೂರುಗುರ ಬಾಸುಳೆ ಭೂಷಣಮಾಗಳುಂ ರತಾಂ
ತದೊಳೆನಗೆಂಬವೊಲ್ ತೊಡಡೆಯುಂ ತೊಡವಂ ಕರನೊಪ್ಪುತಿರ್ದಳಂ ೨೫
(ಲೀಲಾವತಿ, ೧೩–೩೫)

ಸತಿಯ ಕೃತೋಪರಿಷ್ಟರತಿಸಂಭ್ರಮದೊಳ್ ಸರಳಾಂಗುಲಿಚಟ
ತ್ಕೃತಿ ಪಟುತಾಲುಟತ್ಕೃತಿ ಗಳೋತ್ಥಿತಹೂಂಕೃತಿ ಚಾರುಮಂಚಚೀ
ತ್ಕೃತಿ ಶಕುನಿಪ್ರತಾನ ಕುಹರತ್ಕೃತಿ ಕಂಕಣಶೃಂಖಲ ಝಣ
ತ್ಕೃತಿ ಸಮಪಾದಝಂಕೃತಿ ಸಚುಂಬನಸೀತ್ಕೃತಿ ಪೊಣ್ಮೆ ತೆತ್ತಲುಂ ೨೬
(ಶೃಂಗಾರರತ್ನಾಕರಂ , ೪–೩೬; ಸೂಕ್ತಿಸುಧಾರ್ಣವಂ, ೧೪–೨೫)

ಗಳರವನಾದ ವೃತ್ತಕುಚದಂಗುಲಮಧ್ಯನಿನಾದ ಹಸ್ತದಿಂ
ಪೊಳಗುವ ನಾದಮುನ್ನತ ಪದಂಗಳ ನೂಪುರನಾದ ಮಂಚದಿಂ
ದಲುಗುವ ನಾದವಾವರಿಸೆ ಪಂಚಮಹಾಸಬುದಂಗಳಿಂದೆ ಕೋ
ಮಲೆ ರವಿಕಾಂತನರ್ಚನೆಯ ಮಾಡಿದಳಾ ಸುರತದ್ವಿನೋದದಿಂ ೨೭

ಬಿಸಿಬೆಮರಿಂಗುಮಂತಗಲ್ಪ ಮತ್ತಮರ್ದಪ್ಪುವ ಮಾಣ್ದು ಮಾಣ್ದು ಚುಂ
ಬಿಸಿಯಧರಾಗ್ರಮಂ ಸವಿವ ಸೌಮ್ಯಸುಖಂ ತಲೆದೋಱೆ ಮೂರ್ಛೆಯಿಂ
ದೆಸೆವ ಮನೋಭವದಂ ಮಿಗುವ ಕೂಟದ ತೋಟಿಗೆ ಮೇಲೆಮೇಲೆ ರಂ
ಜಿಸುವ ಮನೋಜಕೇಳಿಯಿನದೇನೆಸೆದಿರ್ದುದೋ ನಿತ್ಯಕಾಮಿಗಂ ೨೮

---

[1] ದೊಂಗವೊಂ(ಅ)

ಅಡಿಗಡಿಗಪ್ಪಿಕೊಳ್ವ ಚುಬುಕಾಗ್ರಮನೊತ್ತಿ ಸುಧಾಧರೋಷ್ಠಮಂ
ಪಿಡಿದೊಲವಿಂದೆ ಚುಂಬಿಸುವ ಘಾಸಿಗೆ ನೂಂಕಿದ ಕೇಶಪಾಶಮಂ
ಮುಡಿಸುವ ನಾಣ್ಗೆ ನಾಚಪೆ ವಿನೋದವಿಚಿತ್ರದ ಕೂಟದಿಂ ಸುಖಂ
ಬಡೆವ ಲತಾಂಗಿ ಮನ್ಮಥನಮಂದಿರಮಂಗಳಲಕ್ಷ್ಮಿಯಲ್ಲವೇ ೨೯

ಪೊಸತೆನಿಪೊಲ್ಮೆಯುಗ್ಗಲಿಸೆ ಕಣ್ಬೆಳಗೋಪನವಕ್ತ್ರಪದ್ಮದೊಳ್
ಪಸರಿಸೆ ಸಣ್ಣಸುಯಿ ನರುಗಂಪು ಪೊದಟ್ಟಿರೆ ನುಣ್ಗೊರಳ್ ವಿರಾ
ಜಿಸೆ ಜಲಪಕ್ಷಿಯಂ ಜಱಿದು ನಾಣ್ನಿರಿ ಡಿಳ್ಳಮನೆಯ್ದೆ ನಲ್ಮೆಯಿಂ
ಮಿಸುಪಧರಾಗ್ರಮಂ ಸವಿದಳಂಗನೆ ಜಾಣ್ ಮಿಗುತಂ ನೃಪಾಲನಾ ೩೦

ಕೆದಱಿದ ಕುಂತಳಂ ಪರೆದ ಕಜ್ಜಳಮುಣ್ಮುವ ನುಣ್ಬೆಮರ್ ಕರಂ
ಪುದಿದ ವಿಲೋಚನಂ ಬಟಿಯಿನಟ್ಟುವ ಸುಯ್ ಕಡು ಜೋಲ್ದ ವೇಣಿ ಬ
ತ್ತಿದ ಬೆಳರ್ವಾಯ್ ಬಟಿಲ್ದ ಲುಳಿತಾಂಬರವೊಪ್ಪೆ ರತಾಂತಕಾಲದೊಳ್
ಮುದನುನೊಡರ್ಚುವಂಗನೆಯ ರೂಪು ವಿಚಿತ್ರಮನುಂಟುಮಾಡದೇ ೩೧

ಒಡಗೂಡಿರ್ದ ಮನೋಜನೊಳ್ ಸುರತಸಂಗ್ರಾಮಂಗಳಂ ಗೆಲ್ದವಂ
ಗುಡಲಿತ್ತಳ್ ಜಘನಕ್ಕೆ ವಸ್ತ್ರವ ಕುಚಕ್ಕಂ ಹಾರಮಂ ಹಸ್ತಕಂ
ಕಡಗಂ ಮುದ್ರಿಕೆಯಂ ಕರಾಂಗುಲಿಗೆ ಸತ್ತಾಂಬೂಲಮಂ ಬಾಯ್ಗೆ ಸೋ
ರ್ಮುಡಿ ಬೆಂಗೊಟ್ಟುದೆನುತ್ತೆ ಕಟ್ಟಿದಳು ಕೋಪಾಟೋಪದಿಂ ಕೇಶಮಂ ೩೨

ಭರದಿಂ ಬಂದಚ್ಚಟಿಯದೆ
ಸಿರಿಮಂಚದಮೇಲೆ ಲೀಲೆ ಮಿಕ್ಕಾದರದಿಂ
ತರದಿಂ ಪುಳಕಂ ನೆಗೆವು
ತ್ತಿರೆ ಸುರತಾಂಬುಧಿಯ ಸುಧೆಯ ಸುಟಿಯೊಳಗಿರ್ದಳ್ ೩೩

ಮನವರಳೆ ಮುಖವರಳೆ ಲೋ
ಚನವರಳೆ ಕಪೋಲವರಳೆ ಕಂಠವರಳೆ ಸು
ಯ್ಯನುವರಳೆ ತನುವರಳೆ ಮಿ
ಕ್ಕನುಭವಸುಖವರಳೆ ಸುರತಸುಖದಿಂದಿರ್ದರ್ ೩೪

ಪುದಿದಾಲಿಂಗನದೊಳಗಾ
ವುದು ಸೋಂಕಿತ್ತದೆ ಮುಖೋತ್ಸವವೆ ಸುಖವವೆ ಕಾ
ಮದವದೆ ವಿಳಾಸಾಸ್ಪದ
ವದೆ ತಾಂ ಸರ್ವಾಂಗಹರ್ಷವದೆ ಸಮಯೋಗಂ ೩೫

ನಡತರೆ ಕಂಡುಕಂಡು[ಬಿರ್ದು]ವಂದವ್ರೊಲೊರ್ವರನೊರ್ವರೀಕ್ಷಿಸು
ತ್ತಡಿಯಿಡುತೊಂದು ಮುಂದುವರಿವಿಂದ್ರಿಯದಿಂ ನಡೆಮುಂಚೆ ಮೀಜಿ ಬಂ
ದೆಡೆಗುಡದಪ್ಪಿಯಪ್ಪಿ ನಿರುತಂ ಸುರುತಾಬ್ಧಿಯೊಳಾಟುತೇಟುತಂ
ಕಡೆಮೊದಲಿಲ್ಲದೆಟ್ಟಿರದ ಕಾಮಿಗಳಿರ್ದರನೂನಸಂಗದಿಂ ೩೬

ಘನಗಾಢಾಲಿಂಗನಂ ಚಾಪಳಗಳರುತಿ ದೈನ್ಯೋಕ್ತಿಯುಕ್ತಾಧರಂ
. . . . . . . . .ಮುಕುಳಿತನಯನಂ ಲಾಸ್ಯಲೀಲಾಳಕಂ ಕಂ
ಪನಹಸ್ತಂ ಸ್ವೇದಗಂಡಂ ಪುಳಕಪರಿತಗಾತ್ರಂ ಸುಖಶ್ವಾಸಮಾನಂ
ದನಿವಾಸಂ ಲೀನಚಿತ್ತಂ ಗುರುತರಸುರತಂ ಕೂಡೆ ಕೂಡುತ್ತಮಿರ್ದರ್ ೩೭

ನಯನರ್ಘುಷಾವಳಿಯಿಂದತಿ
ಶಯದಧರೋದ್ಯತ್ಪ್ರವಾಳದಿಂದಂ ದ್ವಿಜಸಂ
ಚಯದಿಂ ಮೌಕ್ತಿಕದಿಂ(?) ಸುರತಾ
ಬ್ಧಿಯ................................ ೩೮

ಸೆಳೆಮಂಚದ ಕಳನಿನದಂ
ಬಳಸಿದ ಶಕುನಿಗಳ ನುಣ್ಚರಂ ನೇವುರದು
ಜ್ವಲನಾದಂ ಲಲನಾಗಳ
ಗಳಿತಧ್ವನಿ ಬೆರಸಿ ಬೆಳೆದು ನೆರಪಿದುವಾಗಳ್ ೩೯

ಕರಘಾತಂ ಸೌಖ್ಯಜಾತಂ ಕಳಮಣಿತಸಮೇತಂ ಲಸತ್ಕರ್ಣಪೂತಂ
ಸ್ಮರಯಂತ್ರಂ ಸಾರತಂತ್ರಂ ಘನಗಳರವಮಂತ್ರಂ ಪ್ರಮೋದಸ್ವತಂತ್ರಂ
ಸ್ಫುರಿತಾಂಗಂ ಸ್ವೇದಸಂಗಂ ಸುರತರಸತರಂಗಂ ಪ್ರರೋಮಾಂಚಲಿಂಗಂ
ಗುರುನೇತ್ರಂ ಬಾಷ್ಪಪಾತ್ರಂ ಸುಖರವಮುದಿತಶ್ರೋತ್ರವಾನಂದಗಾತ್ರಂ ೪೦

ಗಳರವದಿಂದಪ್ಪಿಂ ಕೋ
ಮಳರೂಪಿಂದಧರರಸದಿ ಸುಯ್ಗಂಪಿಂದಾ
ಗಳೆ ಕಿವಿ ಮೈ ಕಣ್ ನಾಲಗೆ
ವಿಲಸನ್ನಾಸಿಕಮನಲ್ಲಿ ತಣಿಪುತ್ತಿರ್ದಳ್ ೪೧

ಮದನೋದ್ರೇಕನಖಾಗ್ರಘಾತಕುಚಕುಂಭೀಕುಂಭದಿಂ ಹೂಂಕೃತಂ
ಜೊದವಿರ್ದೊಪ್ಪುವ ನಾದದಿಂದಧರಮಂ ಪೀರ್ದಪ್ಪುವಾ ಸಂಗದಿಂ
ಮದಿಸುತ್ತಂ ಸಲೆ ಮುಚ್ಚಿದಕ್ಷಿಯುಗದಿಂ ರತ್ಯಂತದಾ ಕಾಮಿನೀ
ವದನಂ ಪ್ರೋಲ್ಲುತ್ತಿದು ಸಿಂಹಮಂ ಶರಭಮಂ ಭೇರುಂಡಮಂ ರುಂಡಮಂ ೪೨

ಸುರತೋದ್ರೇಕಮೊಳೊಂದಿ ಬಾಲಕಿ ಗಡಾ ಕಂದರ್ಪನಂ ರಾಜನಂ
ಉರಗಾಧೀಶನ ಜಿಹ್ವೆಯುಂ ತ್ರಿದಶಮಾಲಾಗಾರಮುಂ ಪೋಲ್ತುಳಾ
ಮರತ್ಯಂತದೊಳಂದು ಕಾರುಕನಪದ್ಮಾನೇಕಪಾನಾದನುಂ
ಹರಿಯುಂ ಪೋಲ್ತುರೆ ತೋಱಿ ಮೀಱಿ ಮೆಱೆದಳ್ ನೋಡಲ್ಕಿದೇಂ ಚೋದ್ಯಮೋ ೪೩

ಎಸೆವಸಿಯಳ ನಿಷ್ಠುರರತಿ
ಮುಸಗಲ್ ಬಱಲಿಕೆಯ ತೋರ್ಪ ಬೆಮರಿನಿಯುಂಗತಿ
ಪಸಿಯಡಕೆಯ ಪೊಂಬಾೞೆಯ
ಪಸುರ್ಗಣಿಕೆಯ ಪೋಲ್ತುವವಳ ತ್ರಿಸ್ಥಾನಂಗಳ್ ೪೪

ಉಸಿರ್ವೆಡೆಯೊಳ್ ಬೆಸರ್ವೆಡೆಯೊಳ್
ಒಸರ್ವೆಡೆಯೊಳ್ ಯುವತಿಯಾದಿಮಧ್ಯಾಂತದೊಳಂ
ಪಸಿಯಡಿಕೆಯ ಪೊಂಬಾೞೆಯ
ಪಸುರ್ಗಣಿಕೆಯ ಪೋಲ್ತುವವಳ ತ್ರಿಸ್ಥಾನಂಗಳ್ ೪೫

ಉಟ್ಟ ದುಕೂಲಮೊಳ್ ಬೆಮರ ಬೀಸುತ ಮೋಱೆಯನೆತ್ತಿ ಗಲ್ಲಮುಂ
ತಟ್ಟುತ ನಲ್ಲನಲ್ಲಯೆನುತೆಬ್ಬಿಸಿ ಚುಂಬಿಸಿ ಚುನ್ನವಾಡುತಂ
ದಿಟ್ಟಿಸಿ ನೋಡುತಂ ಕುಟುಕುದಂಬುಲವೀವುತ ಕೂಡಿ ಸೌಖ್ಯದಿಂ
ಮುಟ್ಟಿದ ಮೋಹದೊಳ್ ಸುರತಸೇದೆಯನಾಱಿಸಿದಳ್ ಮನಃಪ್ರಿಯಳ್ ೪೬

ನಸುಸೊಪ್ಪಾದಧರಂ ಸಡಿಲ್ದ ವಸನಂ ಕಂಪಂ ಪೊದಱ್ದೂರುಗಳ್
ಮುಸುಕಂಗುಂದಿದ ಘರ್ಮಬಿಂದುಗಡಣಂ ಮುಗ್ನತ್ವದಿಂ ನೋಟ್ಪ ಸಾ
ರಸನೇತ್ರಂ ಪರಿತಪ್ಪ ಮನ್ಮಥರಸಂ ಚೆಲ್ವಾಗೆ ರತ್ಯಂತದೊಳ್
ಮಸೆದುಂ ಲಜ್ಜಿತೆಯಾದ ಕಾಂತೆಯ ಮಿಗಿಲ್ ತೞ್ಕೈಪನೇಂ ಪುಣ್ಯನೋ ೪೭

ಸ್ತನಶೈಲೋದ್ಭೂತಗಂಗಾನದಿಯೆನಿಸುವ ಹಾರಾಳಿ ಕಾಳಿಂದಿಯಾದ
ತ್ತನೆ ನೈಲ್ಯಂಬೆತ್ತ ರೋಮಾವಳಿಯುಭಯನದೀಸಂಗದಿಂ ಪಾಪವಿಚ್ಛೇ
ದನರೂಪಂಬೆತ್ತ ದೋಷಾಕರನಿದಱೊಳೆ ತಾಂ ಮಜ್ಜನಂಗೆಯ್ವನೆಂದೆಂ
ಬಿನೆಗಂ ಚೆಲ್ವಾಯ್ತು ಕಾಂತಾಘನಕುಚಯುಗಳೋನ್ಮಧ್ಯಸ್ಥಂ ನಖಾಂಕಂ ೪೮

ರಾಜಶುಕಂ ಕೆಂದಳಿರ್ಗಳ
ನೋಜೆಯಿನೊಳ್ಪೆಸೆಯೆ ಕರ್ದುಂಕುವಂದದಿನಾಗಳ್
ಕೂಜಿತರವದಿಂ ಕರ್ದುಕಿದ
ನಾ ಜಂಗಮಕಲ್ಪಲತೆಯ ಬಿಂಬಾಧರಮಂ ೪೯

ನಿಯತಸ್ಥಾನಮನೀಂಟೆ ಸತ್ವದೊದವಂ ಮುನ್ನೋಡಿ ಕಾಲಪ್ರಬೋ
ಧೆಯನಾರೈದು ನಿರಂತರಂ ಪ್ರಕೃತಿಯಂ ಭಾವೇಂಗಿತಜ್ಞಾನನಿ
ರ್ಣಯದಿಂ ಭಾವಿಸಿಯಾತ್ಮಶುಕ್ಲಭರವಂ ಹೃನ್ಮಾರುತವ್ಯಾಪ್ತಿಯೋ
ಳಿಗ್ಗಯಿನಾಂತಂಗನೆಯಿಚ್ಛೆಯಂ ಸಲಿಸಿದಂ ಸಂಭೋಗದೊಳ್ ಯೋಗದೊಳ್ ೫೦

ಸಹಜಪ್ರೀತಿಮನೋಹರಾಧರಮಣಿಪ್ರಾಂಶ್ಚುಂಬನಂ ಕುಂತಳ
ಗ್ರಹಣಂ ಕೋಮಲದೀನಚಾಟುವಚನಂ ಜಿಹ್ವಾಂಕುರೋಚ್ಚಾಟನಂ
ವಿಹಗಾಸೀಕಲಸನ್ಮಹಾಗಳರವಂ ಲಜ್ಜಾಭಿಭಂಗಂ ಮುಹು
ರ್ಮುಹುರಾಲಿಂಗನವಂತದೇಂ ಮೆಱೆದುದೋ ಸಂಭೋಗಕೋಳಾಹಳಂ ೫೧

ನೆಲಸಿದ ಲಜ್ಜೆಯೋಸರಿಸೆ ಘರ್ಮಜಲಂ ಪೊಱಪೊಣ್ಮೆ ಬುದ್ಧಿ ಸಂ
ಚಲಿಸೆ ಪೊದೞ್ದ ಲಲ್ಲೆ ಮಿಗೆ ಸುಯ್ದು ಸುಯಲ್ಕಿನಿರ್ದತ್ತೆ ಲೋಚನೋ
ತ್ಪಲವರೆಮುಚ್ಚಿಯುಪ್ಪುಗೆ ಸಡಿಲ್ದು ಮನಂ ಬೆಱಗಾಗಿ ಪುಷ್ಪಕೋ
ಮಲೆ ಮಱವಟ್ಟಿರಲ್ ಮೆಱೆದುದಾ ರತಿಕಾಂತನ ಕೇಳಿಗಾಳಿಗಂ ೫೨

ವಿಲಸದ್ರಕ್ತವಿಲೋಚನಂ ಶ್ರಮಜಲಂ ವ್ಯಾಕೀರ್ಣಗಾತ್ರಂ ಮತಿ
ಸ್ಖಲನಂ ಕೀರ್ಣ ಚಲಾಲಕಂ ಶಿಥಿಲವೇಣೀಬಂಧಮುತ್ತುಂಗನಿ
ರ್ಮಲಬಿಂಬಾಧರವಾಸ್ಯಸಂಭವಮುದಂ ಚಿತ್ತಪ್ರಸನ್ನಂ ಮನ
ಕ್ಕೊಲವಂ ಪೊತ್ತುದು ಕಾಂತೆಯಾಕೃತಿ ಕರಂ ರತ್ಯಂತದೊಳ್ ಸಂತತಂ ೫೩

ನೆಗೞ್ದ ಕುಚಂಗಳೊಡ್ಡೞಿದು ಚಪ್ಪಲರ್ದಪ್ಪಿನಮಂಗಮಂಗದೊಳ್
ಸೊಗಸುವಿನಂ ಪೊಗರ್ವಿಗುವ ತೋಳ್ ನಳಿತೋಳ್ಗಮರಲ್ಕಿಮಿತ್ತ ಬ
ಲ್ಪಿಗಿದಮರ್ದಪ್ಪಿಕೊಂಡು ಸುರತಾಂತ್ಯಮದೊಳ್ ಸುಖನಿದ್ರೆಗೆಯ್ವ ಕಾ
ಮಿಗಳೆಸೆದರ್ ಮನೋಭವನ ನಾಟಕದಿಂಬಿನ ಬೊಂಬೆಯಂದದಿಂ ೫೪

ತವೆಯದ ನಲ್ಮೆ ತೋರ್ಕೆಗೆಡದಾಸೆ ಮಗುೞ್ದಸೆವೆತ್ತಿಯಿಚ್ಛೆಪೆ
ಚ್ಚುವ ಮನದೇೞ್ಗೆ ಕೂಡಿ ತಣಿವಿಲ್ಲದ ಕೂರ್ಮೆ ನವೀನಮಾಗೆ ನು
ಣ್ಪುವಿರಳಮಪ್ಪಿನಂ ನಲಿದು ಕೂಡೆ ಸುಖಾಂಬುಧಿಯೊಳ್ ಮುೞುಂಗಿಯೊ
ಪ್ಪುವರಾವಗಂ ಸುರತಕಾಲಮೆ ಕಾಲಮೆನಿಪ್ಪ ಮಾೞ್ಕೆಯಿಂ ೫೫

ಸ್ಥಿರಗಾಢಾಲಿಂಗನಂ ಹೂಂಕೃತಗಳರವಮನ್ಯೋನ್ಯಸಲ್ಲಾಪನಾದಂ
ಕರಘಾತಂ ಚುಂಬನಂ ಸೀತ್ಕೃತಿ ಕುಟಿಲಕಚಾಕರ್ಷಣಂ ಸೂಕ್ಷ್ಮಜಿಹ್ವಾ
ನಿರುತಂ ಚಿತ್ತಾನುಮೋದಂ ಪರಿವಡಿಯೆ ಮನೋರಾಗದಿಂ ಕಾಮಕೇಳೀ
ತರಣಪ್ರಾರಂಭಮಂ ಕೂರ್ತೆಸಗಿದಳೊಲವಿಂ ಕಾಂತೆಯುತ್ಸ್ವಾರ್ಥದಿಂದಂ ೫೬

ಸಡಿಲದ ತೋಳತೆಕ್ಕೆ ಸವಿಬೀಯದ ಬಾಯ್ಗಳ ಕೊಟವಕ್ಕಜಂ
ಕಡೆಯಿಡದಿರ್ಪ ಕಾತರಿಕೆ ಕುಂದದ ನಲ್ಮೆಸೆಯಿಂಪು ತೆಳ್ಪದಂ
ಬಿಡುಗಡೆಯಾಗದಿರ್ಪೊಱಸು ನಿಲ್ಲದ ಮೆಯ್ಮಱತಿವಾಱದಿಚ್ಛೆ ಸಂ
ಗಡಿಸಿರೆ ಕಾದಲರ್ ಕಡೆಯನಾ ಕಡೆಗಾ ರತಿಗಿಟ್ಟು ಕೂಡಿದರ್ ೫೭

ಉಗುರ್ಗಳ ಸೋಂಕು ಸೋಂಕು ಮಿಗೆ ಸೋಂಕು ಮನಂ ಮನವೆಯ್ದೆ ಝುಮ್ಮುವಾ
ಸೊಗಸುವ ಜೋಡು ಝುಮ್ಮು ಪುಳಕಂ ಪುಳಕಾತನುದ್ವಯಂ
ಮಗಲದ ಕೊಟದಿಂಪು ಸವಿಗೂಟಮೆ ಜೀವನಲೀಲೆ ಲೀಲೆಯಾ
ಸೊಗಗಡಲಾಗಲಾ ಕಡಲನೀಸುತೆ ಚೆಲ್ವಿನ ನಲ್ಲರೊಪ್ಪಿದರ್ ೫೮

ನಾಣೆಡೆಗೊಂಡಿರಲ್ ನಯದೆ ನೂಂಕಿ ಭಯಂಗಳನೊಲ್ದು ಮುದ್ದಿನಿಂ
ದಾಣೆಯನಿಟ್ಟವೊಲ್ ನಿಲಿಸಿ ಮೆಯ್ ಸದರಕ್ಕೆಡೆಗೊಟ್ಟು ಬಾಲ್ಯಮಂ
ಕಾಣಿಸುತೊಪ್ಪುವೊಳ್ನುಡಿಗಳಿಂ ಹುದುಹೊಕ್ಕು ಹದಕ್ಕೆ ತಂದ ಹೋ
ಜಾಣನದೊರ್ವ ಮುಗ್ಧೆಗೆ ವಿದಗ್ಧತೆಯಾಗಿಸಿ ಮೇಣ್ ಸುಭೋಗಿಪಂ ೫೯

ನಸೆಮುಸೆವುಬ್ಬಸಂ ತುರಿಪವಂತದು ತಲ್ಲಣವೇಟ್ಟಿ ಬೀಟ್ವಿದೊಂ
ದಸವಸವೆಯ್ದೆ ಕಂಠದ ಚಮತ್ಕೃತದೊಂದು ಕಠಾರಿಗಾಳೆಗ
ಕ್ಕಸಮುರೆ ಪೊಕ್ಕವೊಲ್ ಜಡಿವ ಜಾಱುವ ಜಂಕಿಪ ಪೊತ್ತುವೊತ್ತುವಾ
ಬಸಿವ ಬಟಿಲ್ವ ಬಾಜಿಸುವ ಕೂಜಿಪ ರಾಜಿಪ ನಲ್ಲರೊಪ್ಪಿದರ್ ೬೦

ಕರಹತಿ ಕಾಮುಕೈನ್ಯನಿನದಂ ಕೃತಕಪ್ರತಿತರ್ಜನಂ ಲಸತ್
ಸರಸನಿನಾದಮುನ್ನತಗಳಧ್ವನಿ ಸೀತ್ಕೃತಿ ಸೇವ್ಯರಾವಮು
ದ್ಧುರನಖಸಾಗ್ನಿಕಾಕೃತಮುಹಾರತತೀವ್ರರವಂ ಸಚುಂಬನ
ಸ್ವರಮುರು ಹೂಂಕೃತಾರವಮುದಾವಗಮುಣ್ಮಿರೆ ನಲ್ಲರೊಂದಿದರ್ ೬೧

ಕನಲ್ದಡಿಯೊಳ್ ಬಿಸುಟ್ಟು ಕಟಿಯಂ ಮಿಗೆ ಮೆಟ್ಟಿ ನಖಾಗ್ರದಂತದಿಂ
ಘನತರನೇಮಮಂ ತಿವಿದು ಸೀತ್ಕೃತಪೂತ್ಕೃತಮಾ ವರಾಂಗದೊಳ್
ತನಿಮುದವುರ್ಕೆ ಪೀನಕುಚಕುಂಭದೊಳಂ ಸೆಳೆದಿಟ್ಟು ನಲ್ಲಜೋ
ದನನುರೆ ಸಾಯದಂತೆ ರತಿಯೊಳ್ ಪೊರೆವಾಸೆಯೊಳೊರ್ವಳೊಂದಿದಳ್ ೬೨

ಉರುಪಿಂ ಭಾವದ ಭರಕಾ
ಶರಿರಂ ಬೆಮರಿಟ್ಟು ಸೂಸಲಾಕೆಯ ದೇಹಂ
ವರ ಕನಕದ ಪುತ್ಥಳಿಯಂ
ಪರಿಮಳಜಲದಿಂದೆ ತೊಳೆದವೋಲ್ ಕಂಗೆಸೆಗುಂ ೬೩

ಕಡೆಗಣ್ ಕುಂಕುಮಮೀಯೆ ಬಾಯ್ದೆಱೆ ಕರಂ ಕರ್ಪೂರಮಂ ಸೂಚಿಸೆ
ಲ್ಪೆಡೆಗೊಂಡಾ ಮೊಗದೊಳ್ ರಸಂ ಬಳಿದೊಡಂ ಕೈವ್ಯೆಗೆ ಪಾಯ್ದೆಲ್ಲರಂ
ತೊಡರ್ವಂತೊಪ್ಪಿರೆ ದೇಹದಾಕೃತಿ ನಯಂ ಪೊಂಬಣ್ಣಕಂ ಮುತ್ತುಗಂ
ಕಡನೀವಂತಿರೆ ಕಾಂತೆ ಕೂಟಗಡೆಯಾ ಸೌಭಾಗ್ಯಮಂ ಸಾರಿದಳ್ ೬೪

ಮನವಱಿದೀಂಟೆಯಿಚ್ಚೆಯಱಿದಪ್ಪಿ ಕಡಂಗಱಿದೊಲ್ದು ಚುಂಬಿಸು
ತ್ತನುವಱಿದಾಸೆವಟ್ಟು ನಸೆನುಣ್ಪಱಿದಾ ಪುಟವೇೞ್ದು ಕೂಟದೊಂ
ದಿನಿದಱಿವೆಯ್ದೆ ಬರ್ಪ ಸುರತಾಂತ್ಯದ ಸೋಲಮನೊಲ್ಲದಾವಗಂ
ಮನಸಿಜಸೂತ್ರಪುತ್ರಿಕೆಯವೊಲ್ ಕೆಡೆದರ್ ಮಿಗೆ ದಿವ್ಯವಲ್ಲಭರ್ ೬೫

ಸೊಗದಿಟ್ಟಿಡೆಯೊಳ್ ಸಿಕ್ಕಿರೆ
ಬಗೆ ಮೆಯ್ಗಳ್ ತಮ್ಮನಿಱಿಕಿನೊಳ್ ಜೋಂಪಿಸಲಾ
ತಗೆ ದೞದೞುಪುವಮನದೊಳ್
ಮಿಗೆ ಕೀಲಿಸೆ ದೇವವಲ್ಲಭರ್ಕಳ್ ನೆರೆದರ್ ೬೬

ಮೊಗಮದು ಮುತ್ತೊಂದಂದಂ
ಬುಗೆ ನಲ್ಲಳ್ ಮನದೊಳಱಿದು ನಲ್ಲನ ಮೊಗಮಂ
ಸೊಗಿಸಿಯೆ ಚುಂಬಿಸಿ ರತಿಯಾ
ತಗಹಂ ತಡೆಗಡಿದ ಚೆಲ್ವದೇಂ ಚದುರಿಕೆಯೋ ೬೭

ಮಾಡುವ ರತಿ ಕೂಡುವ ರತಿ
ಬೇಡುವ ರತಿ ಬೆಳೆವುತಿರ್ಪ ರತಿ ರತಿ ರತಿಯಂ
ಮಾಡುವ ರತಿ ನೋಡುವ ರತಿ
ಬಾಡದ ರತಿ ಬೞಲದಾರ್ಪ ರತಿ ರತಿ ರತಿಯೊಳ್ ೬೮

ನೋಡುವ ನೋಡಿ ಸೋಲಿಸುವ ಸೋಲ್ವಱಿದಪ್ಪುವ ಪಪ್ಪಿ ಚುಂಬನಂ
ಮಾಡುವ ಮಾಡಿ ತಲ್ಲಣಿಪ ತಲ್ಲಣದಿಂ ನಿಲಲಾಱದಕ್ಕಱಿಂ
ಕೂಡುವ ಕೂಡಿ ಮೆಯ್ಮಱೆವ ಮೆಯ್ಮಱೆದೆಚ್ಚಱಿದೆಚ್ಚಱುತ್ತು ಮಾ
ತಾಡುವ ಮಾತಿನೊಳ್ ನಿಮಿಷಕಂ ಬೆಳಗಾಯ್ತು ವಿಚಿತ್ರ ಕೇಳ್ ಸಖೀ ೬೯

ಪದೆದಮರ್ದಪ್ಪಿದಪ್ಪುಗಳ [೧]ಕಾಂಕ್ಷೆಗಳುಂ[೧] ಸಮಸಂದು ವಜ್ರಲೇ
ಪದೊಳೆಣೆಯಾಗಿ ಪತ್ತಿ ಸುರತಶ್ರಮಮುಂ[೨] ಕ[೨]ಳೆವಲ್ಲಿ ನಾಂದು ಪ
ತ್ತಿದ ಸಿರಿ[೩]ತಳ್ತ[೩]ವೋಲೆಗಳನೊಯ್ಯನಗಲ್ಚುವ ಮಾಟಿಕ್ಕೆಯಾದುದೇ
ನೊದವಿದಲಂಪು ದಂಪತಿಗೆ ಪೊಂಪುೞಿಯೋಯ್ತು ರತಿಪ್ರಬಂಧದೊಳ್ ೨೦

ಕದಪಿನ ಕಣ್ಣ ಸಾರ್ಕೆಯನಲಂಕೃತಿವೆತ್ತ ಗಳಪ್ರದೇಶಮಂ
ಪದಕದ ತಾಣಮಂ ಕುಚತಟಾಂತರಮಂ ನಿಜಬಾಹುಮೂಲಮಂ
ಮೃದುರಸನಾಗ್ರದಿಂ ಬಳಸಿ ಚುಂಬಿಸಿದರ್ [೪]ಸವಸೀಳ್ದ ನಾಂ[೪]ಗುಲೀ
ಕದ ಕುಸುಮಂಗಳಂ ಪಱಿದು ಪತ್ತಿಸಿದಂತೆವೊಲೊಪ್ಪಿ ತೋರ್ಪಿನಂ ೨೧

(ಶೂದ್ರಕಕಾವ್ಯಸಾರಂ, ೬೬೬, ಸೂಕ್ತಿಸುಧಾರ್ಣವಂ, ೧೪-೭)

ಪಂಕರುಹವದನೆಗೆಸೆದುವು
ಕುಂಕುಮದಿಂ ತೊಯ್ದು ಚಮರಿಯುಂ ಮೋದಿದವೊಲ್
ಕೊಂಕಿ ನಖರೇಖೆ ಕೊರಲೊಳ್
ಕಂಕುಳ [೫]ಬೆನ್ನ್ಬರಿಯು[೫] ಮೊಲೆಗೆಲಂಗಳೊಳಿತ್ತಂ ೨೨

(ಸೂಕ್ತಿಸುಧಾರ್ಣವಂ, ೧೪-೨೯)

ತೆಗೆದಮರ್ದಪ್ಪಿ ಬಾಯ್ವಿಡಿದು ಚುಂಬಿಸಿ ನಂಬಿಸೆ ಪೋದಜವ್ವನಂ
ಮುಗುಳ್ಪುದು ಪೇವರಾಯು ದೊರೆಕೊಂಬುದು ಕೋಮಳ ಗಾತ್ರೆಯರ್ಕಳೋ
ಲಗದ ವಿನೋದವಿಲ್ಲದರಸಂ ವಿರಸಂ ಮರದಿಂದೆ ಕಷ್ಟಮಾ
ಕೆಗಳತನುಪ್ರಸಂಗದೊಳೆ ಬಾಳ್ಪ ನರಂ [೧]ಮರನಲ್ತೆ ಧಾತ್ರಿಯೊಳ್[೧] ೨೩

(ಸೂಕ್ತಿಸುಧಾರ್ಣವಂ, ೧೪-೧೧)

ತಂಬೆಲರಂತೆ ಸೋಂಕಿ [೨]ಮೃ[೨]ಗದಂತಿರೆ ಮೋಳಿಸಿ ತುಂಬಿಯುಂಡದಿಂ
ಚುಂಬಿಸಿ ಸೊಕ್ಕನಿಕ್ಕಿ ಮಱಿಪಿಕ್ಕಿ ಪದಂಬಿಡೆ ಚಿತ್ತಮೆಯ್ದೆ ನಾ
ಣಂಬಿಡೆ ಬಿಟ್ಟಮೆಯ್ಯಱಿದು ಮೈನವಿರುರ್ವಿ ಪೊದಳ್ದಿಲರ್ಚೆ ಮೆ
ಯ್ಯಂ ಬಿಗಿಯಪ್ಪಿ ಬಾಲೆಯ ಭಯಂಗಳೆದಂ ನವಸಂಪ್ರಯೋಗದೊಳ್ ೨೪

(ಲೀಲಾವತಿ, ೧೩-೧೬; ಸೂಕ್ತಿಸುಧಾರ್ಣವಂ, ೧೪-೧೨)

---

[೧] ಕಾಳಸೆಗಳ್(ಸೂ) [೨] ತ(ಸೂ) [೩] ತಾಱಿ(ಸೂ) [೪] ಸ್ಮರನಿದರ್ಶನಾಂ(ಕಾವ್ಯಸಾರಂ)
[೫] ಮುಯ್ವುಗಳ(ಸೂ)

ನೃದುಮುಗಳನಾದಮಂ [1]ಸಲಿಸಿ ಸನ್ಮುದಪಲ್ಲಟಮಂ ನಿಮಿ[1]ರ್ಚಲೀ
ಯುದೆ ನಿಜಮುಗ್ಧಮಂ ತಳೆದ ಕಾಲದೊಳಾದನುರಾಗದಿಂದೆ ಸಾ
ರ್ಚಿದ ಬೆಳರ್ವಾಯನೇಂ ನೃಪತಿ ಪೀರ್ದನೊ ಚಿತ್ರದ ಮೆಚ್ಚನಿಚ್ಚೆಯಂ
ಮುದಮನಲಂಪಿನಿಂಪಿನೊಲವಂ ಸುಖಮಂ ಬರೆಪೀರ್ವ ಮಾಟಿಕ್ಕೆಯಿಂ ೭೫

(ಸೂಕ್ತಿಸುಧಾರ್ಣವಂ, ೧೪–೧೬)

ಜಾಯಿಲನಂತೆ ಲಜ್ಜೆ ತೆಱದೋಡೆ ಬೆಡಂಗಿ ನೃಪಂ ಕಡಂಗಿ ವಾ
ತ್ಸ್ಯಾಯಿನನಂತೆ ಮರ್ಮವಱಿದಾಕೆಗೆ ತೀರ್೯ ಮಸೆಪಾಸನಂಗಳಿಂ
ಪಾಯೆ ತಗುಳ್ದು ಪಾಯ್ದು ಭರದಿಂದೊಡವಾಯ್ದು ಜುಲುಮ್ಮನೊಟ್ಟಿಗುಂ
[2]ಪೀ[2]ಯೆನೆ ಕಮ್ಮಗಿಂಮನೆಳದೆಂಗಿನಕಾಯೊಡೆದಂತೆ ತೆಳ್ಪದಂ ೭೬

(ಸೂಕ್ತಿಸುಧಾರ್ಣವಂ, ೧೪–೨೦)

ಮಂಚದ ಪಿಂಚದಂಚಿಗಳೊಳಿಂಚರದಂಚರಮಾಗದಂಚೆ ಪೆ
[3]ಚ್ಚಂಚರವಿುೀಟಮುಂಚದಿದು ಪಿಂಚದಿರಿಂ[3] ಚದುರೆಂಬ ದೂಸಱಿಂ
ದಿಂಚರಮುಂಚೆಯಿಂಚರವ ಪಿಂಚದ ಚಂಚಳೆ ಚಂಚರೀಕದೊಂ
ದಿಂಚರದೊಳ್ ಪಳಂಚಲೆಯೆ ಮುಂಚರವಂ ಮೊಱೆದೇಱೆ ಕೂಡಿದರ್ (?) ೭೭

(ಸೂಕ್ತಿಸುಧಾರ್ಣವಂ, ೧೪–೨೧)

ಗಳರುತಿಮಂತ್ರನಾದ[4]ವಲಘು[4]ಸ್ತನತಾಡನ ಮುಷ್ಟಿಮುದ್ರೆ ಕೋ
ಮಳ ನಖರೇಖೆ ಯಂತ್ರಲಿಖಿತಂ ಸಮುಬಿಂದುವೆ ನಿಗ್ರಹಾಕ್ಷರಂ
ತಳಹತಿ ವೇತ್ರದಂಡಹತಿಯಾ ನಱುಸುಯ್ ನವಧೂಪಮಾಗೆ ಕಾ
ದಲರ ಮನೋಭವಗ್ರಹಮನಲ್ಲಿ [5]ಕಟಿಲ್ಚು[5]ವರಿಚ್ಚೆಗಾರ್ತಿಯರ್ ೭೮

(ಸೂಕ್ತಿಸುಧಾರ್ಣವಂ, ೧೪–೨೨)

ಸುರತದ ಲೆಕ್ಕವಿಕ್ಕಿದೆಡೆಯಂತೆ ತಗುಳ್ದಿರೆ ನಲ್ಮೆಯೆಂಬ ಪೊ
ನ್ನೊರೆಯೊರೆದಂತೆ ರಾಗರಸದಿಂ ಪರಿಪೂರಿತಮಾದ ದೇಹ ತಾಂ
ಬಿರಿದೆಡೆಯಂತೆ ಕಾಮಿನಿಯ ಕೋಮಲಮಪ್ಪ ಶರೀರದೊಳ್ ತರಂ
ತರಮೊಗೆದೊಪ್ಪಿ ತೋಱುದುವು ಕಾಮುಕದಂತನಖಕ್ಷತಾದಿಗಳ್ ೭೯

(ಸೂಕ್ತಿಸುಧಾರ್ಣವಂ, ೧೪–೨೮)

———

[1] ಸಲಿಸಲಸನ್ಮದೆಪಲ್ಲಟಮಂಪೊಣ(ಸೂ) [2] ಪಿ(ಸೂ) [3] ರ್ಚಂಚರವಿುೀಯೆಮುಂಚಮುಲಿಪಿಂಚದುರಿಂ(ಸೂ) [4] ಮಳಕ(ಸೂ) [5] ತಳಚರ್ು(ಸೂ)

ನವಲಜ್ಜಾಭಾರನಮ್ರಾನನೆಯನುರದೊಳೊತ್ತಂಬದಿಂದೊತ್ತಿ ಸರ್ವಾಂ
ಗವನೆನ್ನಂಗಂಗಳೊಳ್ ಪೊಯ್ಗರೆದುವೆನಿಸಿ ಪೊಯ್ಯಾರೆ ತಳ್ತಪ್ಪಿ ದೇವ
ರ್ಗವಣಂ ಕೈಸಾರದಂತಪ್ಪವಳಧರಮುಮಂ ತೃಪ್ತಿರಾಗಾಬ್ಧಿಪರ್ಯಂ
ತವಲಂಪಿಂ ಪೀರ್ದು ಮದ್ವಲ್ಲಭೆಯ ಸುಸಿಲಸ್ಸೈಪಿಂ ಕೃತಾರ್ಥಾತ್ಮನಪ್ಪೆಂ ೮೦

(ಕಾದಂಬರಿ, ಉ. ಭಾ. ೫೨೨; ಸೂಕ್ತಿಸುಧಾರ್ಣವಂ, ೧೪-೩೦)

ಪ್ರತಿಘಾತಾಯತಲೋಲ ಕಂಕಣಝಣಜ್ಝೇಂಕಾರ ಚಂಚತ್ಕಳಾ
ಹತಿ ಮಂಚಾಗ್ರಶಕುಂತಿಕಾ ಪಟುತರಪ್ರೋದ್ಧಾನನಾಸಾಗಳಾ
ರುತಿ ಮಧ್ಯಾಂಗುಳೀ ತಾಡನೋಚಿತಲಯಪ್ರವ್ಯಕ್ತಜಿಹ್ವಾಟಳ
ತ್ಕೃತಿ ಪೊಣ್ಮುತ್ತಿರೆ ರಮ್ಯಮಾಯ್ತು ಸುರತಪ್ರಾರಂಭಕೋಳಾಹಳಂ ೮೧

(ಸೂಕ್ತಿಸುಧಾರ್ಣವಂ, ೧೪-೩೧)

ಮೊಱೆ ತಡಮಾಗೆ ನಾಣಗಲೆ ತೆಳ್ಪದನೊಳ್ಪದನಾಗಿ ಪಾಯೆ ಮೆಯ್
ಪಱಿಪಱಿಯಾಗಿ ತೀನ್ ಮಸಗೆ ಸೋಲಮುಗುಂದಲೆಯಾಗೆ ಕೂಡುವ
ಟ್ಕಱು ಮಿಗೆ ನೀಳ್ದಲಂಪೊದವೆ ಜೇಡಿಸುವಪ್ಪಿನಿತೆಂಬ ಲೆಕ್ಕಮಂ
ಮಱೆಯಿಸೆ ನಾಡೆ ಸೂಳ್ಗಳನೊಡಂಬಡೆ ಕೂಡಿದರೊಂದುಜಾವಮುಂ ೮೨

(ಸೂಕ್ತಿಸುಧಾರ್ಣವಂ, ೧೪-೩೩)

ಮಲ್ಲಿಗೆ ಜೊಲ್ಲೆಹಂ ಕುಣಿವ ಕುಂಡಲಮುಂಡಲವಾಡೆ ಕಂಕಣಂ
ಮೆಲ್ಲುಲಿಯಂ ಪಳಂಚಿ ಮೃದುಕಂಠರವಂ ಪೊಸತಾಗೆ ಮಾತುಗಳ್
ಲಲ್ಲೆಯನಪ್ಪುಕೆಯ್ಯೆ ಬೆಮರುಣ್ಮೆ ಸುಖಂ ತಲೆದೋಱೆ ನುಣ್ಪದಂ
ಝಲ್ಲನೆ ಪಾಯ್ದು ಜೆಲ್ಲೆ ಪುರುಷಾಯತಮೇನತಿಚಿತ್ರಮೊದುದೋ ೮೩

ನೆಲೆಮೊಲೆಯಂ ತಗುಳ್ದಡಸಿ ತಾಗುವ ಹಾರಮನೇಱನೂಂಕಿ ಮುಂ
ದಲೆಯ ಕುರುಳ್ಗಳಂ ಕವಿಯದಂತೆ ಮುಖಾಂಬುಜದಿಂ ಮುಗುಳ್ಚಿ ಸೂಱಿ
ಸಲೆ ನಿಲೆ ಬೆನ್ನನಪ್ಪಳಿಪ ಸೋರ್ಮುಡಿಯಂ ಕಲಿಗಂಟನಿಕ್ಕಿ ಕಾ
ದಲನೊಳೆ ಕೂಡೆ ಕೋಮಲೆಗೆ ಬಿಚ್ಚತಮೊಪ್ಪಿದುದೌಪರಿಷ್ಟಕಂ ೮೪

(ಸೂಕ್ತಿಸುಧಾರ್ಣವಂ, ೧೪-೩೬)

ತಳಿರಡಿಯೇಱೆ ಚೆಲ್ವ ಕಣೆಕಾಲ್ ಮಣಿವುತ್ತಿರೆ ತೋರದೊರುಗಳ್
ತಳೆಹೊಳನಾಗೆ ಸಾರಜಘನಂ ಜಡಿವುತ್ತಿರೆ ಸಲ್ವ ತೆಳ್ವಸುರ್
ವೊಳಪುಗೆಯೊಡ್ಡಿ ಪಾಯ್ವ ಮೊಲೆ ನಲ್ಲನ ಕಂಗಳೊಳಾಡೆ ನಲ್ಮೊಗಂ
ಕಳೆಯಿಡೆ ದೀಪ್ತಕೇಶ ಕುಣಿಯಲ್ ಪುರುಷಾಯತದಾಕೆಯೊಪ್ಪಿದಳ್ ೮೫

ರತಿಯಿಂದಂ ವಿಪರೀತಮುಪ್ಪ ರತಿಯಿಂ ಪ್ರಾಣೇಶನೊಳ್ ಕೂಡಿ ಮೂ
ರ್ಛಿತೆಯಿಂ ಕಣ್ಣರೆಮುಚ್ಚಿ ಮೆಯ್ಮಱೆದು ಕೇಶಂ ಬಿಟ್ಟು ಗೋಣ್ ಜೋಲ್ದು ಪು
ಷ್ಪಿತೆಯಾಗಿರ್ದವಳೊಪ್ಪಿದಳ್ ಮನಸಿಜಂ ತನ್ನಾಜ್ಞೆಯಂ ಮೀಱದಾ
ಸತಿಯಂ ಶೂಲದೊಳಿಕ್ಕಿದಂತೆ ಮೆಱೆವಳ್ ತತ್ಕಾಂತೆ ಲಿಂಗಾಗ್ರದೊಳ್ ೮೬

ನೆಗೆದುವು ಕಂಪನಂ ಪುಳಕಮುಂ ಬೆಳರ್ವಾಯ್ದೆಱೆ ಬತ್ತೆ ಘರ್ಮವಾ
ರಿಗಳೊಗೆತಂದುವಂಗಜರಸಂ ಪೊನಲೆಟ್ಟಿದು ಬಿಟ್ಟ ಕೇಶದಿಂ
ನೆಗಟ್ದುದು ದುರ್ದಿನಂ ಮದನಮಾಂತ್ರಿಕಸೃಷ್ಟಿಯಿನಿಂತು ಮಾಗಿ ಬೇ
ಸಗೆ ಮಱೆಗಾಲವೆಂಬಿವೊಡನಾದುವು ನಲ್ಲರ ಸಂಪ್ರಯೋಗದೊಳ್ ೮೭

(ಸೂಕ್ತಿಸುಧಾರ್ಣವಂ, ೧೪-೪೦)

ಹರವಸಮೊಯ್ಯನಾಱೆ ಮುಗುಳ್ದಕ್ಷಿಗಳೆಚ್ಚಱೆ ಮೆಯ್ಯೊಳಾಗಳು
ಬ್ಬರಿಸಿದ ರೋಮರಾಜಿ ನಸುವಕ್ಕೆಗೆ ಸಾರೆ ಬಱಲ್ದ ಮೆಯ್ಗೆ ಚೇ
ತರಣಮೊಡರ್ಚೆ ಬಾಯ್ಗೆ ಬಱಪಂ ಬರಿಸುತ್ತಿರೆ ಪೋದಕೂಟಮುಂ
ಪರಿವಿಡಿಗೆಯ್ಯೆ ಚಿತ್ತಮೆಳಸಿತ್ತು ರತಾಂತಸುಖಂಗಳೋಪರಾ ೮೮

(ಚಂದ್ರಪ್ರಭಪುರಾಣಂ, ೮-೭೦; ಸೂಕ್ತಿಸುಧಾರ್ಣವಂ, ೧೪-೪೨)

ಕಿಚ್ಚಿನಳುರ್ಕೆಯಿಂ ಬಿದಿರ ಗಂಟೊಡೆವಂತಿರೆ ತಾಲುರತ್ನಕೃತಂ
ಬಿಚ್ಚತಮುಣ್ಮೆ ಪೊಣ್ಮೆ ಕಡುತಾಡನದಿಂ ನವರಕ್ತಧಾರೆಗಳ್
ಬೆಚ್ಚರಮೆಚ್ಚು ಪಾಯ್ತರೆ ಪದಂಗಳ ನಾದದ ಸುಯ್ಯಲೊಪ್ಪೆ ಕ
ಟ್ಟಚ್ಚರಿಯಾದುದೊರ್ವನ ಮಹಾರತಸಂಭ್ರಮವೊಂದು ತಾಣದೊಳ್ ೮೯

(ಸೂಕ್ತಿಸುಧಾರ್ಣವಂ, ೧೪-೪೫)

ಪೆರ್ಮೊಲೆಗಳ್ ಕದಕ್ಕದಿಸೆ ನರ್ತಿಸೆ ಕುಂಡಲಮಾಡೆ ಕುಂತಳಂ
ಸೋರ್ಮುಡಿ ಬೆನ್ನನಪ್ಪಳಿಸೆ ಸಂಚಳಿಸುತ್ತಿರೆ ಮಧ್ಯಮುಣ್ಮೆ ಸುಯ್
ಘರ್ಮನವೋದಬಿಂದು ಬಿಡುತಂದುಗೆ ಭೂಷಣಮುಂಜುಳಸ್ವನಂ
ನ[೧]ರ್ಮುದೆ[೧] ಪೆರ್ಚೆ ತನ್ವಿ ಪುರುಷಾಯತದೊಳ್ ಪ್ರಿಯನಂ ಮುಗುಳ್ಚಿದಳ್ ೯೦

(ಸೂಕ್ತಿಸುಧಾರ್ಣವಂ, ೧೪-೫೧)

ವದನಸ್ವೇದಾಂಬುವಿದಂ ಕೊನೆನನೆದ ಕುರುಳ್ ಪಾಟಲಚ್ಛಾಯೆಯಿಂ ಬೀ
ಗಿದ ಬಾಯ್ ಕೆಂಪಾದ ಕಣ್ಣುಂ ನಖಮುಖಹತಿಯಿಂ ಸೂಕ್ಷ್ಮರೇಖಾಳಿಗಳ್ ತೀ
ವಿದ ವಕ್ಷೋಜಾತಪಾರ್ಶ್ವಂ ತೊಳಪವಡೆದ ಮೆಯ್ ನೀಳ್ದ ಸುಯ್ ಜಂಗೆ ಬಿಣ್ಪೇ
ಱದ ಕೇಶಂ ಮಂದಯಾನಂ ನೆಱೆ ಮೆಱೆದುವು ರತ್ಯಂತದೊಳ್ ಕಾಂತೆಯರ್ಗಂ ೯೧

(ಸೂಕ್ತಿಸುಧಾರ್ಣವಂ, ೧೪-೬೩)

---

[೧]ವೊರ್ಣಡೆ(ಸೂ)

ಮೊಲೆ ಮಲೆಯೆ ಭಾಳಪಟ್ಟಮ
ನಲೆಯೆ ಕುರುಳ್ ತಾರಹಾರಮಂಡಲಮುರದೊಳ್
ನಲಿಯೆ ಶಕುನಿಗಳ ತೆಱದಿಂ
ದುಲಿಯೆ ಕೊರಲ್ ಕಾಂತೆ ಕೂಡಿದಳ್ ಪ್ರಿಯತಮನೊಳ್ ೯೨
(ಸೂಕ್ತಿಸುಧಾರ್ಣವಂ, ೧೪-೬೫)

ಒದೆದು ಕಲಂಕಿ ಪಾಯ್ವ ಪದದೊಳ್ ಪದವೆತ್ತು ಪುಡುಂಕನೀರನ
ದ್ದಿದಳುಱೆ ನೋದಿ ಮುಂದಲೆಗೆ ಪಾಯ್ದು ಪೊರಳ್ಚಿದಳುರ್ಬಿ ಬಾಹುಪಾ
ಶದೊಳೆ ತೊಡರ್ಚಿದಳ್ ಕರದ ಕೂರುಗುರಿಂದಮೆ ಬೆನ್ನ ಬಾರನೆ
ತ್ತಿದ[೧]ಳವಳಾಱಿದೋಪನವನಂ[೧] ವನಿತಾಜನಚಿತ್ತಚೋರನಂ ೯೩
(ಲೀಲಾವತಿ, ೧೩-೨೨, ಸೂಕ್ತಿಸುಧಾರ್ಣವಂ, ೧೪-೬೮)

ಎತ್ತಿ ಮುಖಾಬ್ಜಮಂ[೨] ಚದುರಿನೊತ್ತಿ[೨] ಕುರುಳ್ಗಳನೊಪ್ಪಿ ನೀವಿ ಮೆ
ಯ್ವೆತ್ತು ಕದಂಪಿನೊಳ್ ಕದಪನಿಟ್ಟು ತೊಡಂಕಿದ ಭೂಷಣಂಗಳಂ
ಬಿತ್ತರದಿಂದೆ ತಿದ್ದಿ ರಸದಂಬುಲಮಂ ಸವಿಮಾಡಿ ನೀಡಿ ಸು
ಯ್ವೆತ್ತ ರತಾಂತದೊಳ್ ಸುರತಸೇದೆಯನಾಱಿಸಿದಂ ಮನಃಪ್ರಿಯಂ ೯೪
(ಸೂಕ್ತಿಸುಧಾರ್ಣವಂ, ೧೪-೭೩)

ಪರೆದಳಕವ್ರಜಂ ಕೆದಱಿ ಸೂಸಿದ ಮುಂದಲೆ ಗುಜ್ಜುಗೊಂಡ ಪೀ
ನರಕುಚಮಂಡಳಂ ತುಳುಕಲಾದೆರ್ದೆ ಬಿಚ್ಚಿದ ಕೇಶಪಾಶಮು
ಬ್ಬರಿಸಿದ ರೇಖೆಗಳ್ ಸುಗಿದು[೩]ರಂ ಕಡು[೩]ಜರ್ಝರಮಾದ ಬೊಟ್ಟು ಸೌಂ
ದರತರಮಾಗೆ ದಂಪತಿಗಳಂತೆಸೆದರ್ ಸುರತಾವಸಾನದೊಳ್ ೯೫
(ಸೂಕ್ತಿಸುಧಾರ್ಣವಂ, ೧೪-೭೧)

ಸಲಿಗರ್ಚುಗಂ ನಖರೇಖೆಯುಂ ಸುಲಿದುರೋಜೋಮಧ್ಯಮಂ ಸ್ವೇದವಾ
ರಿಲವಂಗಳ್ ಪೊಳೆವಾಸ್ಯಮುಂ ಪರೆದ ಚಂಚತ್ಕುಂತಳಾನೀಕಮುಂ
ಸಲೆ ಮೈದೋಱೆ ರತಾಂತದೊಳ್ ಸುದತಿ ಸಸ್ವೇದಾಂಬುವಂ ತೀರ್ಚೆ ಬ
ತ್ತಲೆ ನಿಂದಿರ್ದಳೆಲರ್ಗೆ ತೀರ್ದ ರತಖೇದಶ್ರಾಂತಿಯಿಂ ಬಿಚ್ಚತಂ ೯೬
(ಸೂಕ್ತಿಸುಧಾರ್ಣವಂ, ೧೪-೭೪)

---

[೧] ಳುವೀಱಿಲಾಱಿದವನಂ(ಸ) ಳಡಬಾಱಿಲೊಲ್ಲಪವನಂ(ಸೂ) [೨] ಬೆಮುರನೂಱಿ(ಸೂ)
[೩] ಪೋಗದ (ಸೂ)

ಜೆಮುರ್ಗಳನೂದಿ ನುಣ್ಡೊಡೆಗಳಂ ಪಿಡಿದೌಂಕಿ ಬೆರಲ್ಗಳೆಲ್ಲಮಂ
ಕ್ರಮದೊಳೆ ಕೋದು ತಳ್ತು ಚಿಟುಕಿತ್ತು ತೊಡಂಕಿದ ಕುಂತಳಂಗಳಂ
ಸಮುದಯಮೊಪ್ಪೆ ನೀವಿ ರಸೆದಂಬುಲಮಂ ಸವಿಮಾಡಿ ನೀವಿ ಮೇ
ಲಮರಿ ಬಬಿಲ್ದ ತನ್ನಿನಿಯಳಂ ನೃಪನಾಱಿಸಿದಂ ರತಾಂತದೊಳ್ ೯೭
(ಸೂಕ್ತಿಸುಧಾರ್ಣವಂ, ೧೪–೭೫)

ಜೆಮುರಂ ಬೀಸಿ ತೊಡಂಕಿದೊಳ್ಗುರುಳನಾದಂ ನೀವಿ ಪಚ್ಚೆಂಗಳಂ
ಕ್ರಮದಿಂ ತಿದ್ದಿ ಕದಂಪಿನೊಳ್ ಕದಪನಿಟ್ಟೋರೋರ್ಮೆ ಕೊಂಡಾಡಿ ಸಂ
ಭ್ರಮದಿಂದಂ ಪಿಡಿಕೆಯ್ಸಿ ನುಣ್ದೊಡೆಗಳಂ ಕಾದಲ್ಮೆ ಕೈಮಿಕ್ಕು ನೇ
ರ್ಪಮರ್ವನ್ನಂ ರತಖೇದನಂ ಮಱಿಸಿದಂ ನಲ್ಲಂ ಸರೋಜಾಸ್ಯೆಯಾ ೯೮
(ಸೂಕ್ತಿಸುಧಾರ್ಣವಂ, ೧೪–೭೭)

ನಿತ್ಯಂ ಚಿತ್ತಪ್ರಸನ್ನಂ ನಿರತಿಶಯಸುಖಂ ಜಾಡ್ಯವಿದ್ರಾವಣಂ ಮ
ತ್ತತ್ಯಂತಪ್ರೀತಿಕಾಂತಪ್ರದವಭಯವನಂತೋತ್ಸವಂ ಸರ್ವಲೋಕ
ಸ್ತುತ್ಯಂ ಚಾತುರ್ಯಪೂರ್ವಂ ನಿರುಪಮವಿಭವಂ ಕಾಮಕೇಳೀವಿಲಾಸಂ
ಸತ್ಯಂ ಕೇಳ್ ಯೋಗಿವೃಂದಾರಕಪಶುಮೃಗಪಕ್ಷಿಪ್ರತಾನಕ್ಕೆ ಸಾಧ್ಯಂ ೯೯

ಓರಂತೆಮೆಚ್ಚಿದಂ ಕೃತಿ
ಸಾರಂ ರತಿವರ್ಣನಕ್ಕೆ ಹೊಯ್ಸಳವಂಶೋ
ದ್ಧಾರಂ ನರಸಿಂಹಸುತಂ
ದೋರಸಮುದ್ರಾಧಿನಾಯಕಂ ಸೋಮನೃಪಂ ೧೦೦
(ಸೂಕ್ತಿಸುಧಾರ್ಣವಂ, ೧೪–೮೨)

ಇದು ಸರಸ್ವತೀಸರ್ವಾಂಗದರ್ಪಣಾಯಮಾನ ಪ್ರತಿಭಾಸನೂತನ
ಪುರಾತನಪ್ರಮಾಣಸುಕವಿಪುಂಗವ ಮಲ್ಲನಿರ್ಮಿತ ಕಾವ್ಯಸಾರಮಹಾ
ಪ್ರಬಂಧದೊಳ್ ಸುರತಕೇಳೀವರ್ಣನಂ ಚತುರ್ದಶಾಶ್ವಾಸಂ

# ವಿಪ್ರಲಂಭವರ್ಣನಂ

ಪುರುಡಿಂ ಮ್ಲಾನದಿನನ್ಯದೇಶಗಮನವ್ಯಾಸಂಗದಿಂ ಸುವ್ರತಾಂ
ತರದಿಂ ಕೂಡಿದ ವಲ್ಲಭರ್ಗೆ ವಿರಹಂ ಪೂರ್ವಾನುರಕ್ತರ್ಗೆ ತಾಂ
ವಿರಹಂ ಸಂಧಿಸೆ ಪಾಱಯಿಂದೆ ಪಿರಿದುಂ ಬರ್ಕುಂ ದಶಾವಸ್ಥೆಗಳ್
ಹರಿಣಾಂಕಾದಿಗಳಂಜಿಕುಂ ಸರಸಸೇವ್ಯಂ ವಿಪ್ರಲಂಭಸ್ಥಳಂ ೧

(ಸೂಕ್ತಿಸುಧಾರ್ಣವಂ, ೧೫-೧)

ಸ್ಮರವಶದಿ[೧]ನನ್ಯ[೧]ಜನ್ಮಾಂ
ತರಕೃತಸಂಸ್ಕಾರದಿಂ ವಿಭೋಗಸ್ಪೃಹೆಯಿಂ
ವರಚಾತುರ್ಯ ಕಳಾಗಮ
ಪರಿಣತಿಯಿಂ ಸ್ನೇಹ[೨]ಪ್ರೀತಿ[೨]ಗಳ್ ಸಂಭವಿಕುಂ ೨

(ಶೃಂಗಾರರತ್ನಾಕರಂ, ೪-೭೦; ಸೂಕ್ತಿಸುಧಾರ್ಣವಂ, ೧೫-೨)

ಪರಿಭಾವಿಸುವುದು ಪೂರ್ವಾ
ನುರಾಗ ಮಾನಾಖ್ಯ[೩]ಕಂ ಪ್ರ[೩]ವಾಸಾಖ್ಯಾನಂ
ಕರುಣಾತ್ಮಕವೆಂದಿಂತವ
ತರಿಸೆ ಚತುರ್ಭಂಗಿ ವಿಪ್ರಲಂಭದ ಭೇದಂ ೩

(ಶೃಂಗಾರರತ್ನಾಕರಂ, ೪-೩೯; ಸೂಕ್ತಿಸುಧಾರ್ಣವಂ, ೧೫-೩)

ನಳಿತೋಳಂ ನೀಡಿ ಕಾಲಂ ಮಡಿದು ಪೆಱಗಣಿಂ ಬಾಗಿ ಬಂಬಲ್ಗುರುಳ್ಸಂ
ಚಳಿಪನ್ನಂ ನೀವಿಬಂಧಂ ಸಡಿಲೆ ನಿಱಯನೇಱತೂತ್ತಿ ಸೌರಂಭದಿಂ ಕೆಂ
ದಳವಂ ಸಂಚಾರಿಕಾಸ್ಕಂಧದೊಳವಯವದಿಂದೂಱ ನೆಮ್ಮಿರ್ದು ಮುಳ್ಳಂ
ಕಳೆಯುತ್ತಂ ನೋಡಿ[೪]ದೆನ್ನೋಪಳ್[೪] ತೆಱನೆನಗಂ ಭ್ರಾಂತಿಯಂ ಮಾಳ್ಪುದಿನ್ನುಂ ೪

(ಶೃಂಗಾರರತ್ನಾಕರಂ, ೪-೪೨; ಸೂಕ್ತಿಸುಧಾರ್ಣವಂ, ೧೫-೪)

---

[೧] ಸರಿಕೆ(ಸ) [೨] ವೃತ್ತಿ(ಸೂ) [೩] ತತ್ಪ್ರ(ಸ) [೪] ದಾ ಕಾಂತೆಯಾ(ಸೂ)

## ಪೂರ್ವಾನುರಾಗಂ

ಇನಿಯಂ ಪ್ರಾಣಮುಗಲ್ದು ಪೋಪ ತೆಱದಿಂದೆನ್ನಿಂದಗಲ್ದಿರ್ದನಾ
ತನಪೋಗಿಂಗೆನಗಕ್ಕ ನೋವಿನಿಸುಮಿಲ್ಲೇಕೆಂದೊಡೊಂದುಂಟು ನ
ಲ್ಲನ ಚಿತ್ತಂ ಪೆಱಪಿಂಗೆ ಪಿಂಗದೆ ತಗುಳ್ದೀರಂತೆ ನಿಷ್ಕಾರಣಂ
ನೆನೆವೀ ಚಿತ್ತದ [1]ಮಾಯ್ದು[1] ನಾಣಿಲಿತನಕ್ಕಾಂ [2]ನೋಂತೆ[2]ನಬ್ಜಾನನೇ ೫

(ಶೃಂಗಾರರತ್ನಾಕರಂ, ೪–೪೫; ಸೂಕ್ತಿಸುಧಾರ್ಣವಂ, ೧೫–೫)

## ಮಾನಾಖ್ಯೆ

ಪ್ರಿಯೆಯೊಡನಾದ ಕೂಟಮೊಳಗಲ್ಕೆಯೊಳಾರೆಯೆ ಕೂಟದಿಂದಗ
ಲ್ಕೆಯೆ ಕರಮೊಳ್ಳಿತೆನ್ನಬಗೆಗೆಂತೆನೆ ನೆಟ್ಟನೆ ನೋಟಿಪ್ಪೊಡಂತೆ ಮ
ತ್ಪ್ರಿಯೆಯನೆ ಕಾಣ್ಬೆನೊರ್ವಳನೆ ಭಾವಿಪೊಡೀಗ ಕಣ್ಗೆ ತ
ನ್ಮಯಮೆನಗೀ ಜಗತ್ರಿತಯಮೆಲ್ಲಮುಗಲ್ಕೆಯೊಳೆನ್ನನಲ್ಲಳಾ ೬

(ಶೃಂಗಾರರತ್ನಾಕರಂ, ೪–೪೮; ಸೂಕ್ತಿಸುಧಾರ್ಣವಂ, ೧೫–೬)

ಶಿಥಿಲಂಗಾಣದೆ ಪೋದರ್ು ಪಕ್ಕೆಪಡದೀಗಳ್ ಮತ್ಪ್ರಿಯಂ ಪೋಗೆ ಮ
ನ್ಮಥನಾಕ್ಷೇಪದಿನೆಚ್ಚು ಕೊಂದಪನದಿನ್ನೇತಕ್ಕೆ ಚಿತ್ತಕ್ಷತ
ವ್ಯಥೆಯಂ ಸೈರಿಪೆನೆಂದು ದೀನವದನಾಂಭೋಜಸಂತಾಪದಿಂ
ಶ್ಲಥಧಮ್ಮಿಲ್ಲೆ ಮನೋಭವಪ್ರಥಿತಬಾಣಾಘಾತದಿಂ ಬಿರ್ದಿದಳ್ ೭

(ಶೃಂಗಾರರತ್ನಾಕರಂ, ೪–೪೭)

## ಪ್ರವಾಸಂ

ಇವನಿಂತೀಕೆಗೆ ಗಂಡನೆಂದೊಡೆನಗಾಗಳ್ ರಾಜ್ಯಮಾದಂತೆ ತೋ
ಱುವುದೆತ್ತಾನುಮುಗಲ್ದು ಪೋದೊಡವನಿನ್ನುಂ ಬರ್ಕುಮೋರೊರ್ಮೆ ನೋ
ಡುವೆನೆಂಬಾಸೆಯನೆಂತು ಮಾಣ್ಬೆನಗಿನ್ನಾರಾಸೆಯೆಂದಾಗಳಾ
ಡುವೆನಾರಂ ಬರಪಾರ್ವೆನೆಂತು ಕಳೆವೆಂ ಪೊತ್ತಂ ವಿಲೋಲೇಕ್ಷಣೇ ೮

(ಶೃಂಗಾರರತ್ನಾಕರಂ, ೪–೫೦)

ಕೆಳದೀ ಕೀರಾಳಿಗಳ್ ಕೈಯೆಡೆ ನಿನಗೊಡಲಂ ತಾಳಲಾರ್ತಪ್ಪೆನಿಲ್ಲೀ
ಗಳಿವೊಂದುಂ ಬೇಡ ಕಾಂತಂ ತಳರ್ದನೆನಗಿರಲ್ ತಕ್ಕುದಲ್ಲೆಂದು ಕೈಗೆ
ಯ್ದೆಳೆಯಳ್ ತನ್ನಂ ಪರಿಚ್ಛೇದಿಸಿ ಬಗೆಯುಪೆ ಬಂದುಣ್ಬ ಪರ್ವಿರ್ದ ಜೆಳ್ದಿಂ
ಗಳ ಕೋಳ್ಗಂ ತೆಂಬೆಲರ್ಗಂ ಪ್ರಿಯ ಶರಣೆನುತುಂ ಸಾರ್ಚಿದಳ್ ಮೆಯ್ಯನೊರ್ವಳ್ ೯

(ಶೃಂಗಾರರತ್ನಾಕರಂ, ೪–೫೧; ಸೂಕ್ತಿಸುಧಾರ್ಣವಂ, ೧೫–೭)

[1]ಮೋಹ(ಸೂ) [2]ನೋವೆ(ಸೂ)

## ಕರುಣಾತ್ಮಕಂ

ಆಭಿಲಾಷೆ ಚಿಂತೆ ಸಂಸ್ಮೃತಿ
ವಿಭುಗುಣನುತಿ ತಾಪನಂ ಕ್ರಿಯಾದ್ವೇಷಂ ಸಂ
ದಭಿಮಾನಚ್ಯುತಿ ಗಮನಂ
ಕ್ಷುಭಿತಾತ್ಮಾವಸ್ಥೆ ಮರಣಮಿವು ದಶ[೧]ಭೇದಂ[೧] ೧೦
(ಶೃಂಗಾರರತ್ನಾಕರಂ, ೪–೬೯; ಸೂಕ್ತಿಸುಧಾರ್ಣವಂ, ೧೫–೮)

ನೋಟಂ ಚಿಂತೆ ಸುಯಿಲ್ ಜಟಿ
ದೂಟಂ ಬಿಡುವಂಗ ಬಡವು ವಿಕಳಂ ಮೌನಂ
ನಾಂಟೆಸಿದ ಮೂರ್ಛೆ ಪರಣಂ
ದಾಂಟಲ್ಕಂ ಪತ್ತವಸ್ಥೆಗಳ್ ಸೊಗಯಿಸುಗುಂ ೧೧

ಅರವಿಂದಮಶೋಕಂ ಮಿಗೆ
ವರ ಚೂತಂ ಮಲ್ಲಿಕಾಖ್ಯೆ ನೀಲೋತ್ಪಲಮೆಂ
ದೊರೆದೈದಲರಂಬಿಂದಂ
ವರ ನಾರಿಯರಿಂದೆ ನೋಡಲಾರ್ತೆನೆನಿಕ್ಕುಂ ೧೨

ಮೆಲ್ಲೆರ್ದೆಗೆ ಕಮಲ ಬಲ್ಮೊಲೆ
ಯಲ್ಲಿಗೆ ಚೂತಂ ಸುನೇತ್ರದೆಡೆಗೆಯಶೋಕಾ
ಪಲ್ಲವ ಮಸ್ತಕದೆಡೆಗಂ
ಮಲ್ಲಿಗೆ ನಾಣೆಡೆಗೆ ಮದನ ನೆಯ್ದಿಲನೆಸುವಂ ೧೩

ವನಜ ನೆನಯಿಪುದು ಚೂತಂ
ತನುವಂ ಕಂದಿಪುದಶೋಕೆ ನುಡಿಪುದು ಮಲ್ಲಿಗೆ
ನನೆ ಮಲಗಿಸುವುದು ನೆಯ್ದಿಲೆ
ಮೊನೆಯಂಬು ಸತೀಜನಂಗಳಸುವಂ ಕಳೆಗುಂ ೧೪

ನಳಿನಕ್ಕೀಕ್ಷಣಚಿಂತೆ ಕೇಸರಕೆ ಸುಯಲ್ತಾಪ ಚೂತಕ್ಕೆ ಕಂ
ಗೊಳಿಪೂಟಂ ಬಿಡುವಂಗಮುಂ ಕೃಶತೆ ಮಲ್ಲೀಪುಷ್ಪಕಂ ವಿಭ್ರಮಂ
ಕಳಮೌನಂ ಕುಮುದಕ್ಕೆ ಮೂರ್ಛೆ ಮರಣಂ ತೋರ್ಕುಂ ರತೀಕಾಂತನೈ
ದಲರಂಬಿಂ ದಶವಸ್ಥೆ ಪಾಂಥತತಿಗಂ ಕಂದರ್ಪತತ್ವಜ್ಞರಿಂ ೧೫

---

[೧] ಮೊನಿಕುಂ(ಸ)

ಉಂಟೆಲ್ಲವಸ್ಥೆ ಮುಳಿಸಿಂ
ನಂಟೆಂದೊಂದೆರಡು ಮೂಱು ನಾಲ್ಕೈದಾಱೇ
ೞೆಂಟೊಂಬತು ಪತ್ತೊಂಬ
ತ್ತೆಂಟೇೞಾಱೈದು ನಾಲ್ಕು ಮೂಱೆರಡೊಂದುಂ ೧೬
(ಸೂಕ್ತಿಸುಧಾರ್ಣವಂ, ೧೫-೯)

ಪರವಶದರುಶನದಿಂದಮೆ
ಪಱಿದುದು ಮನಮೆನಗೆ ಕೂಟಬೇಟದೊಳಿ ಮನಂ
ಬರಲಱಿಗುಮಱಿಯನೆನಗಂ
ದೊರಕೊಳ್ಗುಮೊ ಕೊಳ್ಳದೆಂದವಳ್ ಚಿಂತಿಸಿದಳ್ ೧೭
(ಶೃಂಗಾರರತ್ನಾಕರಂ, ೪-೭೮; ಸೂಕ್ತಿಸುಧಾರ್ಣವಂ, ೧೫-೧೧)

ಇಂತು ನುಡಿಯಲ್ಕೆ ಬಲ್ಲನ
ನಿಂತಿಂಬಱಿವನನಿಂತು ಚೆಲ್ವನನಿಂತ
ತ್ಯಂತ ಗುಣಗಣಸಮೇತನ
೧ನಿಂತಪ್ಪನನನ್ಯ ಗಂಡರೊಳ್೧ ಕಂಡಱಿಯೆಂ ೧೮
(ಶೃಂಗಾರರತ್ನಾಕರಂ, ೪-೮೧; ಸೂಕ್ತಿಸುಧಾರ್ಣವಂ, ೧೫-೧೩)

ಕದಳೀಶಯ್ಯಾತಳಮುಂ
ಕದಳೀಗರ್ಭಾವಗೂಹನ ಮಣ್ಣುಂ ಶೈತ್ಯಮ
ನೊದವಿಸುಗುಮೆಂದು ಮಾಡಿದೊ
ಡದೆ ಘಟಪಾಕದವೊಲಾಯ್ತುದವಳ್ಗಂಗಜನಿಂ ೧೯
(ಶೃಂಗಾರರತ್ನಾಕರಂ, ೪-೮೧)

## ಸಂತಾಪ

ಇಂಬಱಿದು ನುಡಿವ ನುಡಿಯುಮೊ
ಡಂಬಡಿಪೆನಿಸಿದ ವಿಲಾಸಮುಂ ವರರೂಪಾ
ಡಂಬರಮುಮಾರ ಬಗೆಯಂ
ನಂಬಿಸಿ ಪತ್ತಿಸವೆ ಚತುರಚತುರಾನನಾ ೨೦
(ಶೃಂಗಾರರತ್ನಾಕರಂ, ೪-೭೭; ಸೂಕ್ತಿಸುಧಾರ್ಣವಂ, ೧೫-೧೦)

---

೧ನಿಂತೀ ಲೋಕದೊಳು ಕಂಡರೊಳು(ಸ)

## ಚಿಂತೆ

ಪಲತೆಱದ ವಿನೋದಂಗಳ್
ಚಲಿಯಿಸುತಿರೆ ಮನಮನೆಂತುಮಾಕೆಯ ಮನದಿಂ
ಚಲಿಯಿಸದಿರ್ಪನನಂ ಸಂ
ಚಲಿಸುವ ಕೇತನದ ಪಟದ ರೂಪಿನ ತೆಱದಿಂ ೨೧

(ಶೃಂಗಾರರತ್ನಾಕರಂ, ೪–೭೯; ಸೂಕ್ತಿಸುಧಾರ್ಣವಂ, ೧೫–೧೨)

ಆಲೇಪನ ಕಜ್ಜಲ ತಾಂ
ಬೂಲಂ ಸ್ರಗ್ಭೂಷಣಾದಿ ವಿಭವಂಗಳನಾ
ಬಾಲೆ ಸಖೀಪ್ರಾರ್ಥನೆಯೊಳ್
ಮೇಳಿಸಿ ನಿನ್ನನೆ ಪಲುಂಬಿ ಪಂಬಲಿಸಿದಪಳ್ ೨೨

(ಶೃಂಗಾರರತ್ನಾಕರಂ, ೪–೮೨; ಸೂಕ್ತಿಸುಧಾರ್ಣವಂ, ೧೫–೧೫)

## ಕ್ರಿಯಾದ್ವೇಷ

ಬಗೆಯದೆ ತಾಯುಂ ತಂದೆಯ
ಮೊಗಕಂಜದೆ ಬಂಧುವರ್ಗಮುಂ ಮೀಱೆ ಕೆಲ
ಕ್ಕಗಿಯದೆ ನಿನ್ನೊಳ್ ನೆರೆಯಲ್
ಮೃಗಶಾಬೇಕ್ಷಣೆ ತಗುಳ್ದು ಪಂಬಲಿಸಿದಪಳ್ ೨೩

(ಶೃಂಗಾರರತ್ನಾಕರಂ, ೪–೮೩; ಸೂಕ್ತಿಸುಧಾರ್ಣವಂ, ೧೫–೧೬)

## ಅಭಿಮಾನಚ್ಯುತಿ

ಕಳವಳಿಸಿದಪಳ್ ಬಾಯೞಿ
ದೆಳಸಿದಪಳ್ ಬೀದಿಬೀದಿಯೊಳ್ ನಿನ್ನಂ ಕೋ
ಮಳೆ ಪಿಡಿಯಲೆಂದು ಸಾರ್ದಳೆ
ವಳಿಸಿದಪಳವಳ್ಗೆ ನೀನೆ ಕರುಣಿಸವೇೞ್ಕುಂ ೨೪

(ಶೃಂಗಾರರತ್ನಾಕರಂ, ೮–೮೪; ಸೂಕ್ತಿಸುಧಾರ್ಣವಂ, ೧೫–೧೭)

## ಮರಣಾವಸ್ಥೆ

ಅನವರತಮೆಸುವ ಕಾವನ
ನನೆಯ ಸರಲ್ ಸವೆಯೆ ಸವೆಯದಾಕೆಯ ಪದ್ಮಾ
ನನದಿನೆಡೆಗುಡದೆ ಪೊಣ್ಮುವ
ಘನಸಾರಾಮೋದ[1]ಮುಖ್ಯ[1] ಮಂದಶ್ವಾಸಂ ೨೫

(ಶೃಂಗಾರರತ್ನಾಕರಂ, ೪-೮೬; ಸೂಕ್ತಿಸುಧಾರ್ಣವಂ, ೧೫-೧೯)

## ಮರಣ

ತಳಿರ್ಗೊಂಬಂ ಬಲಗೊಂಡು ಚಂದ್ರಬಲಮಂ ಕೈಕೊಂಡು ತೆಂಗಾಳಿಯಂ
ಕೆಳೆಗೊಂಡಾಮ್ರಮನೊತ್ತುಗೊಂಡು ಮಧುವಂ ಮುಂದಿಟ್ಟು ಪುಷ್ಪಾಸ್ತ್ರಸಂ
ಕುಳಮುಂ ತೀವಿರೆ ತೊಟ್ಟು ನಲ್ಲರೞಿವಂ ಪಾರ್ದೆಚ್ಚನಿಂತೀಗಳೀ
ಖಳನೀ ಪಾತಕನೀ ಬಹುವ್ಯಸನನೀ ಚಂಡಾಲನೀ ಮನ್ಮಥಂ ೨೬

(ಸೂಕ್ತಿಸುಧಾರ್ಣವಂ, ೧೫-೨೦)

ಉಭಯಾನುರಾಗಮೆ ಮನ್ಮಥನ ರೂಪಂ
ಕ್ಷುಭಿತಾರ್ಥಮಾನಸಂ ತಾನೆ ಕುಸುಮಾಸ್ತ್ರಂ
ಅಭಿಲಾಷೆಗೂಡಿದಾ ನೋಟಮದು ತಾನೆ
ಯಿಭಯಾನೆ ಕೇಳ್ ದಶಾವಸ್ಥೆಯೆನಿಸಿರ್ಕುಂ ೨೭

## ಮನ್ಮಥಾಗಮನ

ಧನುವುಂ ಕರ್ಬಿನ ಬಿಲ್ ಗಡಂ ಗೊಣೆಯುಮುಂ ನೀರೇಜಸೂತ್ರಂ ಗಡಂ
ನನೆಗಳ್ ಬಾಣಚಯಂ ಗಡಂತತನು ತಾಂ ಮುತ್ತಂ ಮನಂನೊಂದು ನಿ
ಬ್ಬನಿಪಂತಾರ್ದಿಸುತಿರ್ಪನುರ್ಚಿದೆರ್ದೆಯೊಳ್ ಪುಣ್ ನೆತ್ತರೆಂದಿಂತಿದ
ಲ್ಲಿನಿಸಂ ಮನ್ಮಥಶಸ್ತ್ರಕಲ್ಪಮಿದು ದಲ್ ಬೇಱೊಂದು ಶಿಕ್ಷಾಕ್ರಮಂ ೨೮

(ಕಾವ್ಯಾವಲೋಕನಂ, ೭೫೨)

---

[1] ಘೂರ(ಸೂ)

ಬಿರಿದಪುದೆರ್ದೆ ಪೋಬಿಾಗದು
ಶರೀರಮುರಿದಪುದು ಭಸ್ಮಮಾಗದು ತನುವುಂ
ಸ್ಮರನೆಚ್ಚಪನೇಬಿಾಗದು
ಮುರಹರ ನಿನ್ನೊಂದಗಲ್ಕೆಯಿದು ಚಿತ್ರತರಂ ೨೯

(ಸೂಕ್ತಿಸುಧಾರ್ಣವಂ, ೧೫-೨೧)

ಗಣಿತಮದೇವುದಿಕ್ಷುಧನುವುಂ ಕುಸುಮಾಸ್ತ್ರಮುಮೆನ್ನ ಕೈಗೆ ಸಂ
ದಣಿಸೆ ಬಱಿಕ್ಕಮೆತ್ತಣ ತಪೋಮಯರೆತ್ತಣ ಶಾಂತಿಭೂಷರೆ
ತ್ತಣ ಜಿತಕಾಮರೆತ್ತಣ ದಿಗಂಬರರೆತ್ತಣ ಕರ್ಮನಿಷ್ಠರೆ
ತ್ತಣ ಬುಧರೆತ್ತಣಾತ್ಮವಿದರೆತ್ತಣ ನಿಸ್ಪೃಹರೆತ್ತಣುತ್ತಮರ್ ೩೦

(ಗಿರಿಜಾಕಲ್ಯಾಣಂ, ೭-೬೯)

ಮಿಳಿ ಲತೆ ಗುಱಿಮೇ ಪತ್ರಂ
ಫಳರಸಮೆ ಮದಾಂಬು ನೀಳ್ದ ಕೊಂಬೆ ಕರಂ ಪೂ
ತೆಳಗೊಂಬುಗಳೇ ದಂತಂ
ಕಳಕಂಠನಿನಾದಮೆಸೆವ ಬೃಂಹಿತನಾದಂ ೩೧

(ಗಿರಿಜಾಕಲ್ಯಾಣಂ, ೭-೪೪)

ವಿಪುಳೋನ್ನತ ಪಲ್ಲವಮು
ಗ್ರಪಲ್ಲವಂ ಡಿಂಡಿಮಸ್ವನಂ ಮತ್ತಾಳೀ
ಚಪಳಸ್ವನಮನೆ ಚೂತ
ದ್ವಿಪಘಟೆಯಂ ತೋಱಿದಂ ಸಮಂತು ವಸಂತಂ ೩೨

(ಗಿರಿಜಾಕಲ್ಯಾಣಂ, ೭-೪೫)

ವರಮೊಗರಾಗದ ಮೊಗವಡ
ಮುರುಕಾಂತಿಯ ವಾಘೆ ಚರಣದಂಕಣಿಗಳ್ ಭಾ
ಸುರ ಪಕ್ಷದ ಪಚ್ಚೆಯ ಪ
ಕ್ಕರಿಯೆಸೆವ ಶುಕಾಶ್ವವೀಧಿಯಂ ಕಾಣಿಸಿದಂ ೩೩

(ಗಿರಿಜಾಕಲ್ಯಾಣಂ, ೭-೪೬)

ಎರಡುಂ ಪಕ್ಷಂ ಚಕ್ರಂ
ಪೊರೆದಾಲಿಂಗನವೆಯಚ್ಚು ಚಂಚುಪುಟಂ ಬಿ
ತ್ತರಿಸುವ ಮುಂಕಣಿಯಾ
ಗಿರೆ ನೆರೆದಿರ್ದ ರಥಾಂಗರಥಮನೊಪ್ಪಿರೆ ಕಂಡಂ ೩೪

(ಗಿರಿಜಾಕಲ್ಯಾಣಂ, ೭-೪೭)

ತಳಿರ್ಗಳ ಚಕ್ರದ ಕದಳೀ
ದಳಫಲಕದ ಸುರಗಿಯುರಲ ಕೌಕ್ಷೇಯದ ಪ
ಡ್ಡಳಿಗಳ ಸಬಳದ ಬಂದುಗೆ
ಗಳ ತಿಸುಳದ ಮೊಲ್ಲೆಯರಳ ಕಾಲಾಳುಗಳಂ ೩೫

(ಗಿರಿಜಾಕಲ್ಯಾಣಂ, ೭-೫೩)

ನಳನಳಿಪಿಕ್ಷುದಂಡದ ಧನುವ್ರಜದಿಂ ಶತಪತ್ರಸೂತ್ರದಿಂ
ತೊಳಗುವ ನಾರಿಯಿಂ ತಳಿರ ಕೈಪೊಡೆಯಿಂ ಕುಸುಮಾಸ್ತ್ರಮಾಲೆಯಿಂ
ದಳವಡೆ ನಿಂದು ನೀಡಡಿಗೆ ನೀಡಡಿ ಸಾರ್ದಿರೆ ಸಾರ್ದು ಬೊಬ್ಬೆಗೊ
ಟ್ಟೆಳೆ ಜೆಱಗಾಗೆ ನಾರಿಯರ ಬಿಲ್ವಡೆ ತೋಱತು ಮೀಱ ಲೋಕಮಂ ೩೬

(ಗಿರಿಜಾಕಲ್ಯಾಣಂ, ೭-೭)

ಕೀರತುರಂಗಸಂಘಮುಯಮೀ ಧರೆ ಪುಷ್ಪಚಯಾಸ್ತ್ರಶಸ್ತ್ರವಿ
ಸ್ತಾರಸುಗಂಧವೃಂದಮುಯಮೀ ಕಕುಭಂ ಮಕರಂದಸಾಂದ್ರವಿ
ಸ್ತಾರರಜೋನಿಕಾಯಮುಯಮೀ ನಭಮೆಂದೆನೆ ಕೌತುಕಪ್ರದಂ
ಮಾರನೃಪಾಲಸೇನೆ ನಡೆದತ್ತು ಜಿತೇಂದ್ರಿಯಚಿತ್ತಶೋಷಣಂ ೩೭

(ಗಿರಿಜಾಕಲ್ಯಾಣಂ, ೮-೨)

ಮುನಿಚಿತ್ತಾಕರ್ಷನೀ ಬಂದನೆ ಋಷಿವಿಮಳಾಚಾರಸಂಹಾರನೀ ಬಂ
ದನೆ ಧರ್ಮಜ್ಞಾರಿಯೀ ಬಂದನೆ ಜಿತವಿಷಯವ್ರಾತವಿಧ್ವಂಸನೀ ಬಂ
ದನೆ ಶಾಂತಾರಾತಿಯೀ ಬಂದನೆ ಯತಿಹರನೀ ಬಂದನೀ ಬಂ
ದನೆಯೆಂದಲ್ಲಲ್ಲಿ ಭೃಂಗೀಬಹುವಿಧಕಹಳಾನಾದಮುಣ್ಮಿತ್ತದೆತ್ತಂ ೩೮

(ಗಿರಿಜಾಕಲ್ಯಾಣಂ, ೮-೪)

ಕೊರಗಿದರಾ ಯತಿಪತಿಗಳ್
ಹರಣಂಗಳೆದರ್ ವಿಯೋಗಿಗಳ್ ಮುನಿಮುನಿಗಳ್
ಶರಣೆಂದರ್ ಜಿತಕಾಮರ್
ಮರುಳಾದರ್ ಪುಷ್ಪಶರನ ಪಡೆ ನಡೆವಾಗಳ್ ೩೯

(ಗಿರಿಜಾಕಲ್ಯಾಣಂ, ೮-೮)

ಮುನಿಗಳ ಧೈರ್ಯಭೂಮಿ ರಜಮಪ್ಪಿನೆಗಂ ಮುನಿಚೇತನಾದ್ರಿ ಭೋಂ
ಕನೆ ಪುಡಿಯಪ್ಪಿನಂ ಯತಿಚರಿತ್ರತರಂಗಿಣಿ ಪಂಕಮಪ್ಪಿನಂ
ಘನವಿಮಳವ್ರತೀಂದ್ರರ ತಪೋವಿಪಿನಂ ಬಯಲಪ್ಪಿನಂ ರತೀ
ಶನ ಚತುರಂಗಸೇನೆ ನಡೆದತ್ತು ಧರಿತ್ರಿಗೆ ಚಿತ್ರಮಪ್ಪಿನಂ ೪೦

(ಗಿರಿಜಾಕಲ್ಯಾಣಂ, ೮-೭)

ಅಳಿಗಳ್ ಸೇನಾಬ್ಧಿ ಮಂದಾನಿಲಪತಿ ನಡೆವಾ ರಾಜಹಂಸಾಳಿಯಶ್ವಾ
ವಳಿಗಳ್ ಮಾಕಂದ ದಂತಿವ್ರಜರಥತತಿಯಂತಾ ರಥಾಂಗಂಗಳುಂ ಕೋ
ಕಿಳನಾದಂ ನಿಸ್ವನಂ ಪಾಠಕರುಲಿವ ಶುಕಾನೀಕಮುಂ ರಾಜಮಿತ್ರಂ
ಚೆಲುವಿಂ ಪಿಂದೈದಲುಂ ಭೂಪತಿರತಿಪತಿಯೆಟ್ಟಿಂದನಂತಾ ಜನಕ್ಕಂ ೪೧

ಮುನಿತತಿಯೆಂಬ ವೈರಿನೃಪರೊಗ್ಗೊಡೆಮೋಡೆ ವಿಯೋಗದೇಶ ಬೆ
ಚ್ಚನೆ ತೆಗೆದೆಯ್ದಿ ಪೋಗಿ ಕೃತಕಾದ್ರಿಯನೆಯ್ದೆ ವಿರಕ್ತರೆಂಬ ಪೆಂ
ಪಿನ ಪುರ ಸೂಱೆವೋಗೆ ವಿಟಜೀವನಮೆಂಬ ನಿದಾನದೇಟಿಗ್ಗೆಯಂ
ತನತನಗೆಯ್ದಿ ಕಟ್ಟಿತು ರತೀಶನ ಸೈನ್ಯಬಳಾದಿಸಂಕುಳಂ ೪೨

ಬೆಳೆದೆಳವಳ್ಳಿಯೊಳ್ ಪುದಿದು ತೋಱುವ ಮಾವಿನ ತೋರಗಂಭದಿಂ
ತಳಿರ್ಗಿಳಿನಿಂಪುವೆತ್ತ ಪೊಸಲೋವೆಗೆಳಿಂ ನಸು ಬಾಗಿ ಕೊಂಬಿನಿಂ
ಪೊಳೆವೆಳಕಾಯ ನುಣ್ಗೊನರಿನಿಂದೆಲರಿಂದೆ ನೆಲಕ್ಕೆ ಬೀಟ್ವಿ ಪೂ
ಗಳ ಕಡೆಯಿಂ ಕರಂ ಸೊಗಯಿಪೋಲಗಶಾಲೆಯೊಳಿರ್ದ ಕಾವನುಂ ೪೩

ನಡೆ ಕೆಲಕಂಚೆ ಬಿನ್ನವಿಸು ಬೇಗದಿ ಕೋಗಿಲೆ ಪಾಡಿನೋಜೆಯಂ
ಗಡಣಿಸು ತುಂಬಿ ಸೋಗೆ ದನಿಯೆತ್ತಿರದೊಯ್ಯನೆ ಬಂದು ಕುಳ್ಳಿರೀ
ಯೆಡೆಗೆ ಬಸಂತಯೆಂದು ಗಿಳಿಗಳ್ ಕಡುಪಿಂ ನಡೆತಂದು ಸುತ್ತಲುಂ
ಪಡಿಯರರಾಗಿ ಚಪ್ಪರಿಪುವೋಲಗದೊಳ್ ಸಲೆ ಕರ್ವುವಿಲ್ಲನಾ ೪೪

ತೊಲಗದೆ ಪಕ್ಕದೊಳ್ನಡಿ [ವ ಪಂಡಿತ] ವಕ್ಕಿಗಳೋಳಿ ಬಿಂಕದಿಂ
ಬಲಗೆಲದೊಳ್ ನೆಗಱ್ತ್ರವಡೆದಿರ್ಪರಸಂಚೆಯಪಿಂಡು ಬೇಟವ
ಗ್ಗಲಿಸಿದ ಜಕ್ಕವಕ್ಕಿಗಳ ವಂಗಡವಿಂಬಱದಿಪ್ಪ ಗಂಡುಗೋ
ಗಿಲೆಗಳ ತಂಡವೊಪ್ಪೆ ಬಗೆದೋಱದುದೋಲಗವಂದು ಕಾವನಾ ೪೫

ಕಿವಿಗಿಂಪಂ ಕಱತವಂತೆ ನುಣ್ಚರದಿ ಪಾಡುತ್ತಿರ್ಪ ಪೆಣ್ದುಂಬಿಗೊ
ಪ್ಪುವ ಬಂಡಂ ಬಿಡದೀವುತಂ ಗಿಳಿಗಳೋದಂ ಕೇಳ್ದು ಮೆಲ್ಪೊಂದಿ ತೋ
ಱುವ ಪಣ್ಣಂ ತಿಱದಿಚ್ಚೆಯಿಂದೆ ಕುಡುತುಂ ಚೆಲ್ವಿಂದೆ ಸಾರ್ದಂದು ಬೇ
ಡುವ ಮುದ್ದಂಚೆಗೆ ಕಯ್ಯ ತಾವರೆಯ ಕಾವಂ ಚೆಲ್ಲದಿಂ ನೀಡುತಂ ೪೬

(ಕಬ್ಬಿಗರಕಾವಂ, ೧೩೬)

ತೊಡೆಯೊಳ್ ಕಾದಲಳಿರೆ ಬಲ
ಗಡೆಯಲ್ಲಿ ಬಸಂತನೊಲವಿನಿಂ ಕುಳ್ತಿರೆ ತ
ನ್ನೆಡದೆಸೆಯೊಳ್ ಸೊಬಗಿಯರಿರೆ
ಕೆಡುಚೆಲ್ವಂ ಪಡೆದನಾವಗಂ ನನೆಗಣೆಯಂ ೪೭

ಮಡದಿಯರ ಮೆಯ್ಯ ಕಂಪುಂ
ಕಡುಮೆಱತವಿನಮಿಟ್ಟ ಕತ್ತುರಿಯ ಪೊಸಗಂಪುಂ
ಮುಡಿಯಲರ್ಗಳ ನಱುಗಂಪುಂ
ಗಡಣಿಸಿ ಕಡೆಗೋಡಿವರಿದುವೊಡ್ಡೋಲಗದೊಳ್ ೪೮

ಮುಂತಿರ್ದಂ ಪುಷ್ಪಮಾಲಾನಿಚಯರಚಿತಸೌರಭ್ಯಲೋಲುಪ್ತ ಭೃಂಗೀ
ಸಂತಾನಂ ಬದ್ಧಧಾರಾವಳಿಯನಿಳಯಮಧ್ಯಪ್ರದೇಶಪ್ರರತ್ನಾ
ನಂತಪ್ರದ್ಯೋತವೀಥೀಪ್ರಯುತಸಿಯತಸಿಂಹಾಸನಾರೂಢತಾನಿ
ಶ್ಚಿಂತಂ ಶೃಂಗಾರಕಾಂತಂ ಜನವಿನುತ ರತೀನಾಥನಾನಂದಯೂಥಂ ೪೯

(ಗಿರಿಜಾಕಲ್ಯಾಣಂ, ೭–೧೧)

ಅಲರಂಬೈದೊಂದೆಬಿಲ್ಲಿಂದಿವಱಿತೂಳಿ ನೆಗಱ್ದೀ ದ್ವೀಪವೇೞಿಂ ತ್ರಿಲೋಕಂ
ಗಳನೆಂತಾಂ ಗೆಲ್ವೆನೆಂದಂಜುವೆನೆಲೆಯೆನಗಿಂದೀಕೆಯಕ್ಷಿದ್ವಯಾಸ್ತ್ರಂ
ಗಳಿವೇೞಿಂತೀಕೆಯುದ್ಯದ್ಭ್ರುಕುಟಿಧನುಗಳಿಂತೀತ್ರಿಚಾಪಂ ಕಣಾ ಕೋ
ಮುಳಿಸೊಂದಂದಾರ್ದು ಕಾಮಂ ರತಿಯುವತಿಯ ಕೈವೊಯ್ದು ಮಾತಾಡುತಿರ್ದಂ ೫೦

ಸಲೆ ಸೌಗಂಧಮನೀಂಟಿ ಗಟ್ಟಿಸವಿಯಂ ಸಾಲಿಟ್ಟು ತೆಂಗಾಳಿಯಂ
ಮೆಲಿದಾಕಾಶಮನಪ್ಪಿ ವಾರಿವಿಪಿಯಂ ತಳ್ತೋದಿ ವಿದ್ಯುಲ್ಲತಾ
ವಳಿಯಂ ಬಂಧಿಸಿ ಜೊನ್ನಮಂ ಪಿಡಿಯಲಕ್ಕುಂ ನಿನ್ನಕಟ್ಟಾಳ್ಗಳಿಂ
ಬ ಲತಾಂಗಿಪ್ರಜದಿಟ್ಟೆಯಿಂ ಗೆಲುವನಾರ್ಪೈ ಧಾತ್ರಿಯೊಳ್ ಮನ್ಮಥಾ ೫೧

ಕಲಿಯಾವಂ ಬಲವಂತನಾವನಧಿಕಸ್ವಾತಂತ್ರನಾವಂ ಸಮು
ಜ್ವಲನಾವಂ ಮುನಿಯಾವನೂರ್ಜಿತಕಳಾಸಂಪನ್ನನಾವಂ ಮಹಾ
ಚಲಿಯಾವಂ ಗುಣಿಯಾವನಿಂದ್ರಿಯಜಯಪ್ರಾಗಲ್ಭ್ಯನಾವಂ ಭವ
ದ್ವಿಲಸನ್ಮೋಹನಬಾಣಮಾಡುವ ಸಮೀಪಾಸ್ಥಾನದೊಳ್ ೫೨

ನನೆವಿಲ್ಲಂ ತಿರುವೊಯ್ದು ಭೃಂಗಕುಳಮೌರ್ವೀನಾದಮಂ ಗೆಯ್ದು ಚಂ
ದ್ರನ ಮುಂದಿಟ್ಟರಲೆಂಬ ಚೂಣಿಯದಳಂ ಮೆಯ್ದೋಱಲುಂ ಕೂಡಿ ಗ
ರ್ಜನದಿಂ ವಾರಿಸೆ ಕೋಕಿಲಂ ಜಡಿಯೆ ಬೊಬ್ಬಿಟ್ಟಂಗಜಂ ನಿಂದು ಪೂ
ಗಣೆಯಿಂದಂ ತೆಗೆದೆಚ್ಚನಕ್ಕಟ ವಿಯೋಗಂಬೆತ್ತ ನಿಸ್ತ್ರಾಣರಂ ೫೩

ಪುರುಷರ್ ಸ್ತ್ರೀಯರ್ಗಾ ಸ್ತ್ರೀ
ಯರ್ ಪುರುಷರ್ಗಂತು ಸೋಲ್ವುದುಚಿತಮಲ್ತೀ
ಧರೆಯೊಳು ಬಿಡದೆ ವರಸ್ತ್ರೀ
ಯರು ಮದನೆಗೆ ಸೋಲ್ವರೆಂಬುದಿದು ಚಿತ್ರತರಂ ೫೪

## ವಿರಹ

ಪೋದವರಾರುಮೇಂ ಮಗುಟ್ದು ಬಾರರೆ ಪೋದಪೆನೆಂದೊಡೇಕೆಯಿಂ
ತಾದಪೆಯೆಂದೊಡಂತುಗುವ ಕಣ್ಬನಿಯಂ ನೆಗೆವುತ್ತರಂಗಳಂ
ಕಾದು ಪೊದಟ್ದು ನಾಣ್ಬೆರಸು ಮೆಲ್ಲನೆ ನೋಡಿ ವಿಯೋಗದುಃಖದಿಂ
ಕಾದಲಳಂದು ನಕ್ಕಳದು ಮುಂದಣ ಸಾವಿನೊಳಾದನಿಶ್ಚಯಂ ೫೫
(ಸೂಕ್ತಿಸುಧಾರ್ಣವಂ, ೧೫-೨೨)

ಮಿಡುಕುಱೞ ಪೊಯ್ದು ತನ್ನೆರ್ದೆಯನೊತ್ತಿ ಕರಾಗ್ರದೊಳಾರೊಳಪ್ಪಡಂ
ನುಡಿಯದೆ ಚಿಂತಿಸುತ್ತಮೆಮೆಯಿಕ್ಕುವುದಂ ಮಱೞದೊಂದು ಜಾವಮುಂ
ಮಿಡುಕದೆ ಸಾಲಭಂಜಿಕೆವೊಲಿರ್ದ ಲತಾಂಗಿಯ ರೂಪು ಕಣ್ಗಳೊಳ್
ತೊಡರ್ದಿರೆ ಪೋಗುಗೆಟ್ಟನಿಸುಬೇಗಮನಲ್ಲಿಯೆ ನಿಂದು ನೋಡಿದಂ ೫೬
(ಸೂಕ್ತಿಸುಧಾರ್ಣವಂ, ೧೫-೨೩)

ಸುರಚಾಪಂ ಕುಡಿವುರ್ಬು ಕುಂತಳಕುಲಂ ಧಾರಾಧರಂ ರೋದನ
ಸ್ವರಮಂಭೋದರನಿಸ್ವನಂ ಪೊಳೆವಪಾಂಗಂ ನೀಳ್ದ ವಿದ್ಯುತ್ತು ಭೋ
ರ್ಗರೆಪೋರಂತುಗುವಶ್ರು ವೃಷ್ಟಿ ದಿಟದಿಂ ತಾನಾಗೆ ಕಾರ್ಗಾಲಮಂ
ನಿರುತಂ ಪೋಲ್ತುದು ನಲ್ಲಳಾಸ್ಯಮಿನಿಯಂ ಪೋವಪ್ಪೆನೆಂದಿರ್ಪುದುಮಂ ೫೭

(ಸೂಕ್ತಿಸುಧಾರ್ಣವಂ, ೧೫-೨೫)

ಪೋದುವು ಕೂಡೆ ಕಯ್ಯ ಬಳೆ ಕಣ್ಬನಿ ವಂಗಡವಾಗೆ ಬೆಚ್ಚರಂ
ಪೋದುದು ಚಿತ್ತವಂಗನೆಯ ಸ್ಥೈರಣೆ ಸಂಗಡವಾಗೆ ಕಾದಲಂ
ಪೋದಪನೆಂದು ಪೋಗುತಿರೆ ತಕ್ಕುದದಾತ್ಮಸಖಂ ಸ್ವಕೀಯ ಕಾ
ಯೊರ್ಳಿದಯದಿಂದೆ ಪೋಗಲಿರೆ ಮುಂದೆ ಸುಹೃತ್ತತಿ ಪೋಗದಿರ್ಕುಮೇ ೫೮

(ಸೂಕ್ತಿಸುಧಾರ್ಣವಂ, ೧೫-೨೬)

ಚಲದಲಕಾಳಿಯೊಡ್ಡಿದ ಮುಗಿಲ್ ಕುಡಿವುರ್ವಮರೇಂದ್ರಚಾಪಮು
ಜ್ವಳದಶನಾಂಶು ಮಿಂಚು ಮಱಿ ಬಾಷ್ಪಜಲಂ ಮೊಱಗಱ್ಕಯಾಗೆ ಕೋ
ಮಳೆ ಮಱಿಗಾಲದಂತೆಱಗಿ ಕಜ್ಜಲ ಕರ್ದಮುಮಂಘ್ರಿಮೂಲದೊಳ್
ಪೊಳವಿನಮೊರ್ವಳಾಱಿಸಿದಳೋಪನೆ ಕೋಪನಿದಾಘತಾಪಮಂ ೫೯

(ಸೂಕ್ತಿಸುಧಾರ್ಣವಂ, ೧೫-೨೭)

ಇನಿಯನಗಲ್ದು ಪೋಗುತಿರೆ ನಿಂದೆವೆಯಿಕ್ಕಿದೆ ನೋಡುತಿರ್ದ ಕಾ
ಮಿನಿಯಸು ಪೋದುದಾತನೊಡನಾತನುಮಾಗಳೆ ಪೋಗಿ ಬಂದು ಮೆ
ಲ್ಲನೆ ತೆಗೆದಪ್ಪಿಕೊಂಡು ಬಿಸುಸುಯ್ದಡೆ ಸುಯ್ಯೆಲರಾರ್ತದಿಲ್ಲ ತ
ತ್ತನುಗೆ ಬಱಿಕ್ಕದೆಂತು ಬಿದಿ ನಲ್ಲರನೊಯ್ದನದೇಕೆ ನಿರ್ದಯಂ ೬೦

(ಸೂಕ್ತಿಸುಧಾರ್ಣವಂ, ೧೫-೨೮)

ತೊಡಿಗೆಗಳೆಲ್ಲಮಂ ತೊಡುವಳೊಲ್ಲದೆ ಮೇಣ್ ಕಳೆದಿಕ್ಕಿ ಪಾಸಿನೊಳ್
ಪಡುವಳದೇನನಕ್ಕೆ ಮಱಿದಂತಿರೆಗೆಯ್ದಱಿದಂತೆವೋಲ್ ಬೆರಲ್
ಮಿಡಿವಳೊಡರ್ಚಿ ಸುಯ್ದುಗಿವಳಾಗುಳಿಸಳ್ ದನಿಯೆತ್ತಿ ಪಾಡುವಳ್
ನಡೆದು ತೊಡಂಕುವಳ್ ನುಡಿದು ತಪ್ಪುವಳುಣ್ಮೆ ವಿಯೋಗವೇಗೆಯಿಂ ೬೧

(ಸೂಕ್ತಿಸುಧಾರ್ಣವಂ, ೧೫-೨೯)

ಅದನೇಪೇೞ್ವುದೊ ಮನ್ಮಥಾಗ್ನಿಪರಿತಾಪೋದ್ರೇಕಮಂ ಕನ್ನೆ ಕ
ಟ್ಟಿದ ಮುಕ್ತಾವಳಿ ನೀಲಕಂಠಿಕೆವೊಲಿಂಬಾಗಿರ್ದುದಾಪ್ಯಾಯನ
ಪ್ರದಮಪ್ಪಣ್ಪಿನ ಚಂದನಂ ಮೃಗಮದಶ್ರೀವೋಲ್ ತಗುಳ್ದಿರ್ದುದು
ಟ್ಟ ದುಕೂಲಂ ಕರಿವಾೞಿಯಂತೆಸೆದುಕೊಂಡಿರ್ದತ್ತು ಮೆಯ್ವೆಂಕೆಯಿಂ ೬೨

(ಸೂಕ್ತಿಸುಧಾರ್ಣವಂ, ೧೫-೩೨)

ಪಡೆದನುತಾಪದಿಂ ತನು ಬೆಳರ್ತುದು ನಾಣಭರಂ ತೆರಳ್ಚಿ ಪೊ
ಣ್ಮಿದ ಘನಘರ್ಮವಾರಿ ತೊಱೆಯಾದುದು ಚಿತ್ತದ ಕೂಟದಿಂದೆ ಬ
ತ್ತಿದುದು ಬೆಡಂಗುವೆತ್ತ ಬೆಳರ್ವಾಯ್ದೆರೆ ಕನ್ನೆಯ ನಲ್ಮೆ ಮಾಗಿಯಾ
ದುದು ಮೞೆಗಾಲಮಾದುದುೞಿ ಬೇಸಿಗೆಯಾದುದನಂಗಸೃಷ್ಟಿಯಿಂ ೬೩

(ಸೂಕ್ತಿಸುಧಾರ್ಣವಂ, ೧೫-೩೪)

ಉರದೊಳ್ ಪೊತ್ತಿದೆವೊತ್ತಿ ಪೊತ್ತಿ ತಳಿರ್ವಾಸಂತಂತೆ ಮೆಯ್ ಸೋಂಕಿನಿಂ
ಕರಿವೋಯತ್ತಲವರ್ಾಸು ಕಾಯ್ದು ಕುಡಿವೋಲ್ ಕಾದತ್ತದೇನೆಂಬೆನ
ಚ್ಚರಿ ನೀರ್ವಾಸು ಮೃಣಾಳನಾಳ ಕದಳೀಕಾಂಡಾದಿಗಳ್ ತದ್ವನಾಂ
ತರದೊಳ್ ತೀರ್ದುವು ತೀರದೆನ್ನದೆಸೆಯಿಂ ಸಂತಾಪಮಾ ಕಾಂತೆಯಾ ೬೪

(ಸೂಕ್ತಿಸುಧಾರ್ಣವಂ, ೧೫-೩೭)

ಪೆಱಸಾರ್ವಳ್ ಬಿಸುಸುಯ್ವಳಾಗುಳಿಸುವಳ್ ಸಂಸಾರಮಂ ಬೈದು ಬೇ
ಸಱುವಳ್ ಮೂರ್ಛೆಗೆಸಲ್ವಳುಮ್ಮಳಿಪಳೋರಂತಿರ್ಪುಗುಂದಿರ್ದ ಬಾ
ಯ್ದೆಱೆಯಂ ನಾಲಿಗೆಯಿಂದೆ ನಾಂದುವಳವಳ್ಗೀ ತಾಪಮೀಯಂದಮೆಂ
ದೞಿಯೆಂ ಸಂತವಿಸಲ್ ಜನಾರ್ದನವಿಯೋಗಾಕ್ರಾಂತೆಯಂ ಕಾಂತೆಯಂ ೬೫

(ಸೂಕ್ತಿಸುಧಾರ್ಣವಂ, ೧೫-೪೨)

ನಾಡೆ ಒಟಿಲ್ದಟಿಲ್ದು ನಿಲಲಾಱದೆ ಸೆಜ್ಜೆಗೆವಂದು ಪೆಯ್ಯಸೀ
ಡಾಡಿ ನಿಜೋತ್ತರೀಯ ವಸನಾಂಚಲದಿಂ ಮುಸುಕಿಟ್ಟು ಚಿಂತೆಯೊಳ್
ಮೂಡಿ ಮುೞುಂಗಿ ತನ್ನ ಮನದನ್ನರೊಳಂ ತನ್ನ ಮಾ
ತಾಡದೆ ಜಾನಿಸುತ್ತಮಿರೆ ಪಿಂಗಿದುದಂದಿನಪೊಂದಹರ್ನಿಶಂ ೬೬

(ಕಾದಂಬರಿ, ಉ.ಭಾ.೩೬೬; ಸೂಕ್ತಿಸುಧಾರ್ಣವಂ, ೧೫-೪೭)

ಮೃಗಶಾಬಾಕ್ಷಿಗೆ ಮಾಧವಂ ಮಧುಕರಂ ಮಂದಾನಿಲಂ ಮಾವು ಮ
ಲ್ಲಿಗೆ ಮಾದ್ಯತ್ಪಿಕನಿಸ್ವನಂ ಮನಸಿಜಂ ಮುಗ್ಧೇಂದುವೆಂಬೆಲ್ಲಮುಃ
ಬ್ಬೆಗಮಂ ಮಾಡಿದುವೊಂದೆ ಮೇಣೆರಡೆ ಪೇಣ್ ಮೇಣ್ ಮೂಱು ನೋಡೊಂದು ಹು
ಲ್ಲೆಗೆ ನೂರ್ವರ್ ನೆರೆದಂಬುತೊಟ್ಟ ತೆಱನಾಯ್ತಾನಿನ್ನದೇನೆಂದಪೆಂ ೬೭

(ಸೂಕ್ತಿಸುಧಾರ್ಣವಂ, ೧೫-೫೩)

ಸರಸಿಜನಾಭನಿಂದುೞಿದ ವೇದನೆಯಿಂದನುಶೋಕಪಲ್ಲವಾ
ಧರೆ ನವಚೂತಪಲ್ಲವಕರಾಂಬುಜೆ ಕುಂತಲತಾಂತದಂತೆ ವಿ
ಸ್ಫುರಿತ ತಮಾಲನೀಲಕಬರೀಭರೆ ಪಾಟಲಗಂಧಿ ಕೇತಕೀ
ಕರರುಹೆ ಚೇಷ್ಟೆಗೆಟ್ಟು ಮರನಟ್ಟೆಳೆನಿಪ್ಪುದದಾವವಿಸ್ಮಯಂ ೬೮

(ಸೂಕ್ತಿಸುಧಾರ್ಣವಂ, ೧೫-೬೪)

ಸುದತೀ ಮತ್ಪತಿ ಕಣ್ಣೊಳಂ ಮನದೊಳಂ ತಾನಿರ್ಪಸಿರ್ದುಂ ಮುೞುಂ
ಗಿದನಲ್ಲಶ್ರುಜಲಂಗಳೊಳ್ ಪುದಿದ ಹೃತ್ಕಾಮಾಗ್ನಿಯಿಂ ಬೆಂದನಿ
ಲ್ಲಮು ಚಿತ್ರಂ ಬಗೆವಾಗಳೆಂದಿನವನೋ ಮಾಯಾವಿಯೋಯೆಂದುಪು
ಟ್ಟಿವನೆಂಪೋದಿದನೆಂದು ಕಲ್ತನೋ ಜಲಾಗ್ನಿಸ್ತಂಭಮಂತ್ರಗಳಂ ೬೯

(ಸೂಕ್ತಿಸುಧಾರ್ಣವಂ, ೧೫-೬೭)

ಅನಿಮಿಷನಪ್ಪೆಂ ಕಂಡೊಡೆ
ನೆನೆದಂದಸ್ವಪ್ನನಪ್ಪೆಂನೊಡನಿರೆ ಕಮಳಾ
ನನೆ ಸುಮನನಪ್ಪೆನದಱಿಂ
ದೆನಗಾದುದು ನಿನ್ನ ದೂಸಱಿಂ ದೇವತ್ವಂ ೭೦

(ಸೂಕ್ತಿಸುಧಾರ್ಣವಂ, ೧೫-೬೮)

ಹೃದಯದೊಳಿರ್ದ ವಲ್ಲಭನನಾಕ್ಷತಭೀತಿಯಿನೀಕ್ಷಿಸಂತೆ ಮು
ಚ್ಚಿದಳಲರ್ಗಂಗಳೊತ್ತಡವಿನೋಡುವವೋಲ್ಕುಚಮಧ್ಯದಲ್ಲಿಗಾ
ದುದು ಕರಪಲ್ಲವಂ ಸರಸಮಾಗಿಸುವಂತೆ ಮೊಗಂ ಮಲಂಗೆಯುಂ
ತಮೊಳಿರ್ಪ ಶೂನ್ಯಮಾಗಱಿಸುವಂತಸು ಪೊಯ್ತು ಸಿತಾಬ್ಜನೇತ್ರೆಯಾ ೭೧

ಅನಲಸಹಾಯನಪ್ಪ ಯಮದಿಜ್ಮುಖದಿಂ ಪರಿತರ್ಪ ತೆಂಬೆಲರ್
ಮನಸಿಜವಹ್ನಿಯುಂ ಬಿಡದೆ ಪೆರ್ಚಿಪ್ಪುದುಂಕೆ ಡುನೋವನೀವುದುಂ
ವನರುಹವಕ್ತ್ರೆ ವಿಸ್ಮಯಮೆ ತಾಪಹರಂ ಜನಸೌಖ್ಯಕಾರಿ ನಂ
ದನಮೆನಗಂಗತಾಪಮುಮನೋವದೆ ನೋವುಮನೀವುದೊಂದದ್ಭುತಂ ೭೨

(ಜಗನ್ನಾಥವಿಜಯಂ, ೧೧-೯೨; ಸೂಕ್ತಿಸುಧಾರ್ಣವಂ, ೧೫-೬೩)

ಇನಿಯನ ಕಾಣದಾ ತರುಣಿ ಸ್ವೈರಿಸಲಾಱದೆ ಕಾಮತಾಪವಂ
ಘನತರಶೈತ್ಯಮೊಂದು ಕೊಳನೊಳ್ ಪುಗಲಾ ಕೊಳನುರ್ಕಿ ಬೇಯೆ ಕೀ
ರನು ಜಲವೀಂಟೆ ವಿದ್ರುಮವನೊಂದ ಕದುರ್ಂಕತೆ ಭೂಜವೇಱಲಾ
ವನತರು ಬೆಂದು ನಿಂದುರಿಯುತಿರ್ದುದು ನೋೞ್ಪೊಡಮೇಂ ವಿಚಿತ್ರಮೋ ೭೩

ಅಂಗಜತಾಪದಿಂ ಕೊರಗಿದಬ್ಜಮುಖಂ ಪರೆದಿರ್ದ ನುಣ್ಗುರುಳ್
ತುಂಗಕುಚಂಗಳೊಳ್ ತಗುಳಿಕೊಂಡ ಲಸನ್ಮಲಯೋದ್ಭವಂ ಬೆಳ
ರ್ತಂಗಮುರಾಂತದೊಳ್ ತೊಳಪ ಕರ್ಪುರದಣ್ಕೆಯರೇಣು ರಂಜಿಸಿ
ಪ್ಪಂಗನೆ ಕಾಮದೇವನೆಡೆಯಾಡುವ ಪುತ್ರಿಕೆಯಂತಿರೊಪ್ಪಿದಳ್ ೭೪

ಮಲ್ಲಿಗೆಯಲ್ಲಿ ತುಂಬಿ ಮೊಱೆವುತ್ತಿದೆ ತಂಪಿನೊಳೊಂದಿ ತೆಂಕಣಿಂ
ಮೆಲ್ಲನೆ ಗಾಳಿ ತೀಡುತಿದೆ ಕೋಗಿಲೆಗಳ್ ಪೊಸಮಾಮರಂಗಳೊಳ್
ಬಲ್ಲುಲಿಯಿಂದೆ ಬಗ್ಗಿಸುತಲಿಂತಿವೆ ಬಂದುದು ಸುಗ್ಗಿ ತಳ್ವಿದಂ
ನಲ್ಲನೆನುತ್ತಲೊರ್ವ ಕಿಱುವೆಣ್ ಸುರಿದಳ್ ಮಿಗೆ ಕಣ್ಣನೀರ್ಗಳಂ ೭೫

ಎಲೆ ತಂಗಾಳಿಯೆ ನೀನೇ
ಕಲೆದಪೆ ಮಱಿದುಂಬಿಯೇಕೆ ಪಲ್ಮೊಱೆದಪೆ ಕೋ
ಗಿಲೆಯೇಕೆ ಕಿನಿಸಿದಪೆ ಕಾ
ದಲನಿಲ್ಲದ ಪೆಱಗೆ ನೋಯಿಪರೆ ನೀವೆನಗಂ ೭೬

ತರದಿಂದುಣ್ಮುವ ಕಣ್ಣನೀರ್ವನಿಗಳಂ ಕೈಕೊಂಡು ಮೇಣ್ ಮುತ್ತಿನೊ
ಚ್ಚರಮಂ ಪೆರ್ಮೊಲೆ ಚುನ್ನವಾಡೆ ಸೆಳೆಮಾವಂ ನೆಮ್ಮಿ ಪೂಗೊಂಚಲೊಳ್
ಪೊರೆದಳ್ಕಾಡುವ ತುಂಬಿವಾಡ ನಲವಿಂ ಕೇಳ್ದಂದದೊಳ್ ನಿಂದು ಪಾ
ದರಿಯಳ್ [ಕಾದಲ] ಪೋದುದಕ್ಕೆ ಬಗೆಗೆಟ್ಟಿರ್ದಾಕೆ ಕಂಗೊಪ್ಪಿದಳ್ ೭೭

ಎಳಮಾವೇ ತಳಿರುಯ್ಯಲೇ ಕೊಳಿತಗುಳ್ಧಿಂದೋಳಮೇ ಕೋಗಿಲೇ
ಗಿಳಿಯೇ ತುಂಬಿಯ ಬೆಂಬಲೇ ಪುಳಿನಮೇ ಬೆಳ್ದಿಂಗಳೇ ಚಂದ್ರನೇ
ಕೊಳನೇ ನಂದನಮೇ ಲತಾಭವನಮೇ ಸುಗ್ಗಿಂ ಕಱಂ ಬರ್ದಿದೆಂ
ಗಳ ನೀಮೆಲ್ಲರುಮೆನ್ನ ಬರ್ದುಗೆಯನಾ ನಲ್ಲಂಗೆ ಪೇೞಿಂ ಗಡಿಂ ೭೮

(ಕಾವ್ಯಾವಲೋಕನಂ, ೧೫೯)

ಮದನನ ಕೆಯ್ದುವೆಲ್ಲಿದನನಂಗನ ಕೆಯ್ಪಿಡಿಯೆಲ್ಲಿದಂ ವಿಲಾ
ಸದ ಕಣಿಯೆಲ್ಲಿದಂ ಚದುರಿನೊಲ್ಮೆಗನೆಲ್ಲಿದನೆಲ್ಲಿದಂ ವಿನೋ
ದದ ಮೊದಲೆಲ್ಲಿದಂ ಸೊಬಗಿನಾಗರನೆಲ್ಲಿದನಿಚ್ಚೆಯಾಣ್ಮನೆ
ಲ್ಲಿದನೆರ್ದೆಯರಾಣ್ಮನೆನ್ನರಸನೆಲ್ಲಿದನೋ ಲಲಿತಾಂಗವಲ್ಲಭಂ ೭೯
(ಆದಿಪುರಾಣಂ, ೩–೧೫; ಕಾವ್ಯಾವಲೋಕನಂ, ೧೨೩)

ವಿರಹದೊಳೀಕೆಗಕ್ಕ ಬಿಸಜಂ ವಿಷಜಂ ಹಿಮರೋಚಿ ಸೂಚಿ ಪಾ
ದರಿ ದರಿ ಮಾವು ಪಾವು ಕುಮುದಂ ಕುಮುದಂ ತನಿಗರ್ಬು ಮರ್ಬು ಕ
ತ್ತುರಿಯುರಿ ಗಾಳಿ ದಾಳಿ ಕುಸುಮಂ ವಿಷಮಂ ಹೊಸಬಾಳೆ ಬಾಳೆ ವನೋ
ತ್ಕರಿಪುರಿ ಹಂಸೆ ಹಿಂಸೆ ಮೊಳೆವಾಳಡಿಯಾಳಿಡಿ ತಿಂಗಳಿಂಗಳಂ ೮೦
(ಗಿರಿಜಾಕಲ್ಯಾಣಂ ೪–೧೪೧)

ತಾಳ್ದೀ ವಿರಹದೊಳೀಕೆಗೆ
ಬೆಳ್ದಿಂಗಳು ಬಿಳಿಯ ಕಿಚ್ಚು ಸಸಿ ಬಸಿ ಕಾವಂ
ತೊಳ್ದುವ ದಾವಂ ಚೈತ್ರಂ
ಸೀಳ್ದಿಕ್ಕುವ ಕುಂಭಿ ಕದಳಿಕ ದಳೀಘಾತಂ ೮೧
(ಗಿರಿಜಾಕಲ್ಯಾಣಂ, ೪–೧೧೭)

ಅತಿವಿರಹದೊಳೀ ಲಲನೆಗೆ
ಮತಿ ದುರ್ಮತಿ ವೀಣೆ ಸಾಣೆ ಸೋಮಂ ಭೀಮಂ
ಲತೆಯಸಿಲತೆ ಸಂಪಗೆ ಪಗೆ
ನುತ ಕೀರಂ ಘೋರಮನ್ಯಪುಷ್ಟಂ ಕಷ್ಟಂ ೮೨
(ಗಿರಿಜಾಕಲ್ಯಾಣಂ, ೪–೧೪೨)

ಒತ್ತುವ ಪದ್ಮಪತ್ರ ಕದಳೀಸಂಕುಳಮೆಯ್ದೆ ಬೆಂದು ಸೀ
ವುತ್ತಿವೆ ದೂರದಿಂದೆ ಸಖಿಯರ್ ತವೆ ಚೆಲ್ಲುವ ಶೀತವಾರಿಯು
ಕ್ಕುತ್ತಿವೆ ಬೀಸುತಿರ್ಪ ಕುಸುಮಾವಳಿವೀಜನವೃಂದವೋವೋ ಹೊ
ತ್ತುತ್ತಿವೆ ತನ್ವಿಯೋ ವಿರಹವಹ್ನಿಗೆ ಪುಟ್ಟಿದುದೊಂದು ಮೂರ್ತಿಯೋ ೮೩

ಕುಸುಮಂ ತುಂಬಿಗಳೆಂಬದೊಂದು ಭಯದಿಂದಂ ತಿದ್ದಲಮ್ಮಳ್ ನಿಜ
ಸ್ವರಮಂ ಕೋಕಿಲನಾದಮೆಂದುಮನಿತುಂ ಮಾತಾಡಲಮ್ಮಳ್ ಮುಖಂ
ಪರಿಪೂರ್ಣೇಂದುವಿನಂದಮೆಂದು ಮುಕುರಕ್ಕಾಲೋಕನಕ್ಕಂಜುವಳ್
ವಿರಹಭ್ರಾಂತಿಯಿ ತನ್ನ ಮೆಯ್ ತನಗೆ ನಂಜಾಗಿರ್ದುದಾಕಾಂತೆಯ ೮೪

ಸಕಳಂಕಂ ಶಶಿ ಕಾಮನೀಶನುರಿಗಣ್ಣಿಂ ಬೆಂದನಂ ವಾಯು ಸ
ರ್ಪಕದಂಬಾಶನಶೇಷಮಂಗಜನ ಮಿತ್ರಂ ರಾಗಿ ಮತ್ತಾಳಿಗಳ್
ವಿಕಳಂಗಳ್ ಪಿಕನನ್ಯಪುಷ್ಟನಿನಱಿಂತೊಳ್ ಸೌಜನ್ಯಮಂ ಮಾಳ್ಪುದ
ಕ್ಕೆ ಕರಂ ಕಷ್ಟಮೆನುತ್ತೆ ಕಾಂತೆ ನುಡಿದಳ್ ಸಾಲಿಟ್ಟ ಸಂತಾಪದಿಂ ೮೫
(ಗಿರಿಜಾಕಲ್ಯಾಣಂ, ೪-೧೪೭)

ಕನಸಿನೊಳೊಮ್ಮೆ ಭಾವರತಿಯೊಳ್ ಮಱಿತದೊಮ್ಮೆ ನಿರಾಸೆಯೆಂಬ ಕಂ
ಬನಿಗಳೊಳೊಮ್ಮೆ ಮುನ್ನಿನ ವಚೋಮಧುರೋಕ್ತಿಯಲೊಮ್ಮೆ ತತ್ಸಖೀ
ಜನಗಳೊಳೊಮ್ಮೆ ಪೇಳ್ವ ಗುಣಮಂ ನೆನೆದೆಯ್ದೆ ಲತಾಂಗಿ ತನ್ನಿಜೇ
ಶನಕತದಿಂದಲೆಯ್ದೆ ಜಱಿದಳ್ ನವಶಾಳಿಯ ರಾಶಿಯಂದದಿಂ ೮೬

ಮುಡಿಯಂ ಕಟ್ಟಳು ಮುದ್ದುಗೆಯ್ವ ಮೊಗಮಂ ನಿರ್ದೋಱಳಿಂಬಿಂ ಕಳ
ಲ್ದುಡೆಯಂ ಸಾರ್ಚಳು ಕಣ್ಗೆ ಕಪ್ಪಿಡಳು ನುಣ್ಮೈಯರ್ಚಳೊಯೆಂದು ತಾಂ
ನುಡಿಯಳ್ ಪೊಂದೊಡವಂ ತೊಡಳ್ ಪಸಿವುದೋಱಳ್ ಕಾಮನಂಬಿಂಗೆ ಸಂ
ದಡಿಯಾದಳ್ ಲಲಿತಾಂಗಿಯೆಂದು ಸಖಿಯರ್ ಕಣ್ಣೀರ್ಗಳಂ ತುಂಬಿದರ್ ೮೭

ಬೀಸಿದರಾಲವಟ್ಟದೆಲರಿಂ ನವಕುಂಕುಮಗಂಧಸಾರಮಂ
ಪೂಸಿದರಬ್ಜಪುತ್ರಕುಲಮಂ ಘನಸಾರದಲೂಡಿ ಬೆನ್ನಿಗಂ
ಪಾಸಿದರಿಂದುಕಾಂತಜಲಮಂ ನೆಱಿ ಸೂಸಿದರೆಯ್ದೆ ಕಂಗಳೊಳ್
ಭಾಸುರ ನನ್ಯಪುಷ್ಟರಸಬಿಂದುಗಳಂ ತಳಿದರ್ ಲತಾಂಗಿಯರ್ ೮೮

ಅಲರಿದ ವಕ್ತ್ರಕಂಜ ನೆಱಿ ಸೀದುದು ಕುಂತಳ ಭೃಂಗರಾಜಿಗಳ್
ಬಳಲಿದವೆಯ್ದೆ ವೃತ್ತಕುಚಚಕ್ರಯುಗಂಗೆಳೆಳಲ್ದು ತೋಳ್ಗಳಂ
ಬೆಳಲತೆ ಬಾಡಿತೆವ್ವನಮರಾಳ ಕಲಂಕಿತುತ್ಸವಂ ತೃಣಾವ
ಳಿ ಲಯಮಾಯ್ತು ಕಾಂತೆಯ ವಿಯೋಗದ ಕಾಲಮೆ ಮಾಗಿಯೆಂಬಿನಂ ೮೯

ಗರ್ವದ ಪರ್ವತಂ ಜಱಿಯೆ ನಿಟ್ಟುಸಿರೆಂಬ ಮೃಗಂಗಳೋಡಲುಂ
ಪೂರ್ವಿನ ಪುಲ್ಲುಗಳ್ ಸಿಮಿಯೆ ವೃತ್ತಕುಚಂಗಳ ಗುಂಡು ಜಾಱಲಾ
ಕೊರ್ವಿದ ಜವ್ವನಾವನಿಜಮಂ ಕಳೆಯಲ್ ನವರಕ್ತಚಂದನಂ
ಪರ್ವಿವ ಕೆಂಡಮಾಗೆ ಸಖೀವೃಂದದಿ ಚಂಪ್ರದವಾಗ್ನಿ ತೀಡುಗುಂ ೯೦

ಅಂಬುಜವಕ್ತ್ರೆ ನಿನ್ನ ಮೊಗಮಂ ಕವಿವೀ ಕುರುಳೋಳಿ ದೂಸರ
ತ್ವಂಬಡೆದೀ ಕುಚಂ ಕೊಱಗಿದೀ ಕಮಳಾನನವಿರ್ಪುಗುಂದಿದೀ
ಬಿಂಬಫಲಾಧರಂ ಸ್ಖಲಿತಮಂ ತಳೆದೀ ನುಡಿ ಬಾಡಿದೀ ಲತಾಂ
ಗಂ ಬಿಸುಪೇಱದೀ ಶ್ವಸಿತಮಿಂತಿವು ಪೇಳವೆ ನಿನ್ನ ಚಿಂತೆಯಂ ೯೧

ಬಗೆಯೊಳ್ ಬೆಚ್ಚನ್ರೊಲಾಗೆ ಮಾತು ಕಿವಿಗೆಯ್ದಿಲ್ಲಿಂಬೊಣರ್ಶೋರ್ಣನು
ತ್ತುಗಳಂ ಕಾಱುವ ಮಾಟಕ್ಕಿಯಂತವಳ ನೇತ್ರದ್ವಂದ್ವದಿಂ ಬಾಷ್ಪಬಿಂ
ದುಗಳಂ ಸೂಸೆ ಲತಾಂಗಿ ಭಂಗಿವಡೆದಿರ್ದಳ್ ಬೇಟಮೆಂಬೊಂದು ಬ
ಳ್ಳಿಗೆ ಪೊಯ್ನೀರೆಱೆವಂದದಿ ನುಡಿದಳಿಲ್ಲೇನೆಂದುಮಾ ಕಾಂತೆಯೊಳ್ ೯೨

ನೆನೆಯಿಸಿ ಕಾಡುಗುಂ ಸತತಮಾತನುದಗ್ರಲಲಾಟಪಟ್ಟಮಾ
ತನ ವರವಕ್ಷಮಾತನ ತನೂದರಮಾತನ ಚೆಲ್ಲೆಗಂಗಳಾ
ತನ ಬಗೆಗೊಳ್ವ ಪೆರ್ದೊಡೆಗಳಾತನ ನಿಂದಕಟೀತಟಂಗಳಾ
ತನ ನಿಡುದೋಳ್ಗಳಾತನ ಅಳಿಕಾಳಿಗಳಾತನ ನೀಳ್ದ ಪುರ್ಬುಗಳ್ ೯೩

ಕೆಳದಿ ತರವೇಟ್ಟಪ್ಪೆದೆನಗಂ
ನಳಿನಾಕ್ಷನನಲ್ಲದಂದು ಪೋದಪುದಸುವೀ
ಗಳೆ ಮದನನಿಸುವ ಪೊಸಕೆಂ
ದಳಿರ್ಗಳ ಮಂಜರಿಯ ಕೆಱೆಯ ನೆನೆಯಂಬುಗಳಿಂ ೯೪

ಅಳುರ್ವ ತುಷಾರವರ್ಷದೊದವಿಂದರವಿಂದಿನಿ ಕಂದಿ ಕುಂದಿ ಪಾಂ
ಗೞಿದವೊಲಾವಗಂ ಕೞಿವ ಕಾಮಶರಾವಳಿಗಳ್ಕಿ ಬಳ್ಕಿ ಕೋ
ಮಳೆ ನಡೆತಂದು ಪೊಕ್ಕು ಬನಮಂ ಸಖಿಯರ್ ತಳಿವಾಲಿನೀರ್ಗಳಿಂ
ಕುಳಿರ್ವಲರ್ವಾಸಿನೊಳ್ ಪೊರಳುತಿರ್ದಳಗುರ್ವಿನ ಬೇಟದೇೞ್ಗಯಿಂ ೯೫

ಲಲನೆ ಹಿಮೋಲ್ಲಸದ್ಭವನದೊಳ್ ವನದೊಳ್ ವನದೊಳ್ ಪೊರಳ್ದು ನಿ
ಚ್ಚಲುಮಿಸೆ ಕಂತು ನಿಪ್ಪಸರದಿಂ ಸರದಿಂ ಸರದಿಂಪುದೋಱೆ ಕೋ
ಗಿಲೆ ವಿಧು ಬೀಱೆ ಭೀತಿ ಕರಮಂ ಕರಮಂ ಕರಮಂ ಕಪೋಲದೊಳ್
ನಿಲಿಸುವಳೆಯ್ದೆ ನೋವಳಧಿಪಾಂಗದ ಪಾಂಗದ ಪಾಂಗದಗ್ಗಳಿಂ ೯೬
(ಜಗನ್ನಾಥವಿಜಯಂ, ೧೧–೧೯; ಸೂಕ್ತಿಸುಧಾರ್ಣವಂ, ೧೫–೬೬)

ಪಾಸುವ ಪಲ್ಲವಾಸ್ತರಣಮೊಟ್ಟುವ ಬಾಲಮೃಣಾಳಸಂಕುಳಂ
ಸೂಸುವ ಚಂದ್ರಕಾಂತಜಲಮೊತ್ತುವ ಶೀತಳಿಕಾಕದಂಬಕಂ
ಬೀಸುವ ಪುಷ್ಪವೀಜನಮನುರ್ಚುವ ಕರ್ಪುರಮಚ್ಚಪೂಗಳಿಂ
ಪೂಸುವ ಚಂದನಂ ಬಿಸುಪನಾಱಿಸಲಾಱವು ಕೋಮಲಾಂಗಿಯಾ ೯೭

ಮೇಳಿಸಿ ಪೊರ್ದಿದಾಳಿಯರ ಮೆಯ್ ಬಿಸುಪೇಱೆ ಬೆಮರ್ತುದಂಗಮೊಳ್
ಬಾಲಮೃಣಾಳಿಕಾಸಮಿತಿ ಚುಯ್ಯೆನುತಂ ನೊರೆಯಿಟ್ಟುದಶ್ರುಧಾ
ರಾಳಿ ಕದಂಪಿನೊಳ್ ಕುಡಿದು ಬತ್ತಿದುದೊಯ್ಯನೆ ಬೀಸುತಿರ್ಪ ಪೊಂ
ಬಾಳೆಯ ಚಾಮರಂಗಳಱೆಸೀದುವು ತನ್ವಿಯ ದೇಹದಾಹದಿಂ ೯೮

ತೊಲಗಿಸಿ ಭೂಷಣಪ್ರತತಿಯಂ ಮತಿಯಂ ಪತಿಯಂಗಶೋಭೆಯೊಳ್
ನಿಲಿಸಿ ಮನೋಭವಾಗ್ನಿಮಥಮಿಂ ವಿಭವಿಂ ವಧುವಿಂಗೆ ಪೆರ್ಜೆ ತ
ಣ್ಣೆಲರ ಕೊಳಕ್ಕೆ ವಂದ ಕಳಿನಂ ಪುಳಿನಂ ನಳಿನಂ ನಿಜಾರ್ತಿಯಂ
ಪೆಲೆವಡೆಯಲ್ ಬಱಿಕ್ಕವಳೞಲ್ದು ಬೞಲ್ದು ಕೞಲ್ದು ಜಾನಿಪಳ್ ೯೯

ಸೋಂಕಿದ ಗಾಳಿ ದಳ್ಳುರಿಯೊಲಾದುದು ಪೊಕ್ಕ ಸರೋವರಾಂಬು ಕಾ
ಯ್ದುಕ್ಕಿದುದಿರ್ದ ನಂದನವನಂ ಕಱಿಕೆದ್ದುದು ನೋಡಿ ಸುಯ್ವ ಸು
ಯ್ವೆಂಕೆಯಿನೆಯ್ದೆ ಚಂದ್ರಿಕೆ ಬಿಸಿಲ್ಗೆಣೆಯಾದುದು ಕಾಮತಾಪದಿಂ
ಪಂಕರುಹಾಕ್ಷಿ ಕಾಮಶಿಖಿ ಪೆಣ್ಬರಿಜಂ ತಳೆದಂತೆ ತೋಱಿದಳ್ ೧೦೦

ಅವಯವದ ಸಾರಸರ್ವ
ಸ್ವವನಾಹುತಿಗೆಯ್ದಳಂಗಜಾಗ್ನಿಯೊಳುೞಿದಂ
ತವಳೊಳಸುಪೊಂದೆ ಸಲೆಮಾ
ಡುವುದದನಾ ಕಾಮಶಿಖಿಗೆ ಸರ್ವಾಹುತಿಯಂ ೧೦೧

ಯುವತಿಯ ಬಾಡಿದಂಗಲತೆ ಬತ್ತಿದ ಬಾಯ್ ಕೊರಗಿರ್ದ ವಕ್ತ್ರಮೆಂ
ಬಿವನೆವಾತ್ಮ ಕೋಮಳತೆಯಿಂದರುಣಚ್ಛವಿಯಿಂ ಸುಕಾಂತಿಯಿಂ
ನವಲತೆಗಂ ಪ್ರವಾಳಮಣಿಗಂ ಹಿಮರೋಚಿಗಮಾಯ್ತು ಪೋಲಲೊಂ
ದವಸರಮಿಂತದಕ್ಕೆ ಮಿಗೆ ಬೇಟಮೆ ಜಂಬಲವಾದುದೆಂಬಿನಂ ೧೦೨

ಕಳಮದನಾಸ್ತ್ರಪುಂಜದವೊಲಪ್ಪಲರ್ವಚ್ಚಮುಮಂಗಸಂಭವಾ
ನಳನವೊಲಪ್ಪ ಕೆಂದಳಿರ ಪಾಸಿಕೆಯಂ ವಿಷನಾಮಮುಳ್ಳ ಶೀ
ತಳಜಲಮುಂ ವಿಷಾಹಿಕುಳಸೊಂದಿದ ಚಂದನದಣ್ಪುಮಕ್ಕ ಕೇ
ವಲಮೆನಗಾಭಿಚಾರಮುಪಚಾರಮಿದೇಂ ಶಿಶಿರೋಪಚಾರಮೋ ೧೦೩

ತನುತಾಪಂ ಚೈತ್ರನಿಂ ಚಂದ್ರನಿನತಿಶಯಮಾಗಿರ್ದುದಾ ಚೈತ್ರನಿಂ ಚಂ
ದ್ರನನಿನತ್ಯುತ್ಕಟಂ ನಂದನದಿಸೊಗೆದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತಳ್ಪೊಯ್ವ ತೆಂಗಾಳಿಯಿನೊದವಿದುದಾ ಚೈತ್ರನಿಂ ಚಂದ್ರನಿಂ ನಂ
ದನದಿಂ ತೆಂಗಾಳಿಯಿಂದ್ಮೈವಡಿವಡೆದವಳಾ ತಾಪಮಂಪೇೞ್ವೆನೇನಂ ೧೦೪

ಕೆಂದಳಿರ್ವಾಸಿನೊಳ್ ಕಡುಬೆಳರ್ತುದ ಕರಂ ಬಡವಾದ ತನ್ವಿ ತ
ನ್ನೊಂದಿರವೆಂದೆ ಸಂಜೆಮುಗಿಲೊಳ್ ನಸುದೋರ್ಪ ಕಳಾವಶೇಷಮ
ಪ್ಪಿಂದುವಲೇಖೆಯಂತೆಸೆದು ಮೆಲ್ಲೆರ್ದೆಯಂ ನಡುವಂಗಜಾಸ್ತ್ರದಿಂ
ನೊಂದು ಕನಲ್ದೞಲ್ದ ಪರಿಯಂ ನೃಪ ಕಂಡೆರ್ದೆಯಾಱೆ ನೋಡಿದಂ ೧೦೫

ಆ ಸ್ತವನೀಯ ನೀಲತನುಸೌಷ್ಟವವಾ ನವಶೀತವಸ್ತ್ರವಾ
ಕೌಸ್ತುಭರತ್ನವಾ ಮಕರಕುಂಡಲವಾ ವನಮಾಲೆರಾಜಿಯಾ
ಪ್ರಸ್ತುತವಕ್ಷವಾ ಸುಭಗವಾ ಕಮಲೇಕ್ಷಣವಾ ಸ್ಮರಾನಳಾ
ರ್ಚಿಸ್ತ್ರತಿದಗ್ಧಹೃನ್ಮಕುರದೊಳ್ ಬೆಳೆದೊಪ್ಪುವ ಭಂಗಿ ವಿಸ್ಮಯಂ ೧೦೬

ಅಳಿಗಳ ಗಿಳಿಗಳ ನವಿಲ್ಗೋ
ಗಿಲೆಗಳನಲೆದಲೆದ ಮಂದಗಾಳಿಯ ರವದಿಂ
ಕೆಳದಿ ಗಜಮುಖನನುರಗನ
ಬಳಸುವ ದಿನಕರನ ಶಿವನ ಸತಿ ಬೈದಳ್ ೧೦೭

ತನು ತನಗಿಲ್ಲದಿಂಡಲೆವ ಗಾಳಿಯನೋವದೆ ಪಾವುಕೊಂಡ ಚಂ
ದ್ರನನುರಿದೇಟ್ದಿ ಮನ್ಮಥನನಾಜಿಡಿದುಂಬಿಯನಕ್ಕಟೇಕೆ ಪೆ
ತ್ರನೊ ಬಿದಿಯೆಂದು ತೀಡುವೆಲರುಜ್ವಲಿಪಿಂದುಗೆ ಕಾಯ್ವ ಮನ್ಮಥಂ
ಗನುನಯದಿಂದೆ ಪಾಡುವಳಿಗಂತವಳೇಂ ಬೆದಱುತ್ತಮಿರ್ಪಳೋ ೧೦೮

ಆಗದೆ ಪೋದೊಡನ್ಯಶಿಶುವಂ ಪರಿರಕ್ಷಿಸಲೇಕೆ ಕಾಮನಂ
ಬೇಗದಿ ಸುಟ್ಟುಮತ್ತಳಿಪಿಂ ಚಿತ್ರಜನೆನ್ನಿಸಲೇಕೆ ಚಂದ್ರನಂ
ಭೋಗಿಶರೀರಿಯೆಂದು ಪಿಡಿದುಂ ಬಿಡಲೇಕೆ ವಸಂತಕಾಲದೊಳ್
ಕಾಗೆಯನೀಶನಂ ಪಣಿಯನಂಗನೆ ಬೈದಳನಂಗತಾಪದಿಂ ೧೦೯

ತರುಣಿಗೆ ತಾಪ ವೆಗ್ಗಳಿಸೆ ಚಿಂತಿಸಿ ತನ್ನ ಮನೋರಥಂ ಗಡಂ
ದೊರೆಗೆಡಲಾ ಗಣಾಧಿಪನ ಕೋಗಿಲೆಗಂ ವರವಿತ್ತಕಾರಣಂ
ವರ ರಘುರಾಮನಂ ಸ್ಮರನ ಬಾಣಮದಾದ ವನೇಜಕಾಪ್ತನಂ
ವಿರಹದಿ ಕೋಮಲಾಂಗಿ ಬಗೆದುಂ ಪೞಿವಳ್ ನವಪುಷ್ಪಮಾರ್ಗಣಂ ೧೧೦

ನವಸಾಹಿತ್ಯಕಲಾಬ್ಧಿಚಂದ್ರನೆನುತಿರ್ಕುಂ ನಿನ್ನನೀ ಧಾತ್ರಿ ಕೇ
ಕರದಿಂದೆನ್ನಯ ಪುತ್ರಿ ನಿನ್ನ ನಿಜರೂಪಂ ನೋಡಿದಂದಿಂದಲಾ
ಹರಿಯಂ ಧ್ವಾಕ್ಷಮನಬ್ಜಮಂ ಗಣಪನಂ ಗೌರೀಶನಂ ಗೌರಿಯಂ
ಮರುತಾಶಾರ್ಕಳನೇಕೆ ಬೈದಪಳಿವಳ್ ನೀಕೇಳುಸಂಚಾಯುಧಾ ೧೧೧

ಮರಪೆಯ್ಯಂ ಮಧುವನ್ಯಪುಷ್ಟಪಿಕಸಂಚಾರಂ ಸಮೀರಂ ಗುರು
ತರುಣೀಚೋರ ನಿಶಾಧಿಪಂ ಮಲವಿಭುಕ್ತಂ ರಾಜಕೀರಂ ಮಧು
ಸ್ಥಿರಪಾನೀಯಮಧುವ್ರತಂ ವಿಕಲ ಕಂದರ್ಪಂ ನಿಜಾಲಾಪಮಂ
ದರವಿಂದಾನನೆ ಸುಯ್ದು ಬೈದಳತಿಕೋಪೋದ್ರೇಕದಿಂದಂ ಸಖೀ ೧೧೨

ಒಡವೋದರ್ ಬಂದರೆಂಬೀ ನುಡಿಯುಮೆ ಪೆಱರಿಂ ಕೇಳ್ದು ಕೇಳ್ದಂತೆ ಸಾಸಿ
ರ್ಮಡಿ ರಾಗಂ ತನ್ನೊಳಾಗಲ್ ಪುದಿದಿರೆ ನಿಜಚಿತ್ತೇಶ್ವರಂ ಬಾರನೆಂಬೀ
ಪಡಿವಾತಂ ಕೇಳ್ದು ಝಲ್ಲೆಂದೆರ್ದೆವಡಿಪೆಱದಂತಾಗೆ ಬೆಂಬಿಡ್ದವಳ್ ನೂ
ರ್ಮಡಿ ಮುನ್ನಂ ಕುಂದಿದಳ್ ತತ್‌ಕ್ಷಣದೊಳೆ ಮದನಾಗ್ನಿಪ್ರಸಂತಾಪದಿಂದಂ ೧೧೩

ಎಳೆಮಿಂಚಿಲ್ಲಕ್ಕುಮಾಖಂಡಲಲಲಿತ ಧನುರ್ದಂಡಮಿಲ್ಲಕ್ಕುಮಭ್ರಾ
ವಳಿಯಿಲ್ಲಕ್ಕುಂ ಕದಂಬಾನಿಲನೆಸಗುವುದಿಲ್ಲಕ್ಕುಮುದ್ಯನ್ಮಯೂರೀ
ಕುಳಲೀಲಾತಾಂಡವಾಡಂಬರವಿಲಸನಮಿಲ್ಲಕ್ಕುಮಂತಾ ಮಹೀಮಂ
ಡಲದತ್ತಲ್ಲಿಲ್ಲನಂತಲ್ಲದೊಡೆ ತಡೆದದೇಕಿರ್ಪನಿಂದಲ್ತೆ ಬರ್ಪಂ ೧೧೪

ಇನಿಯನಗಲ್ದು ಪೋಗಿ ಪರದೇಶದೊಳಿರ್ದಪನಾನುಮಿಲ್ಲಿ ಮಾ
ವಿನ ತಳಿರ್ವಾಸಿನೊಳ್ ಪೊರಳುತಿರ್ದಪೆನಾಗಳುಮಂತೆ ನೀನುಮೆ
ಮ್ಮನೆ ನಡೆನೋಡುತಂ ನಭದೊಳಿರ್ದಪೆಯುಪ್ಪದಱಿಂದೆ ನಿನ್ನನಾ
ನನುವಿಪೆನೆನ್ನ ಮೆಯ್ ಬಡವೋ ನಲ್ಲನ ಮೆಯ್ ಬಡವೋ ನಿಶಾಕರಾ ೧೧೫

(ಆದಿಪುರಾಣಂ, ೧೨-೪೨)

ಪತಿಚಿಂತಾಸಕ್ತೆ ನಿದ್ರಾವಿರಹಿತೆಯಿರುಳೆಯ್ತರ್ಪುದುಂ ಸುಪ್ತಪಾರಾ
ವತಮಂ ಬಂದೆತ್ತುವಳ್ ಹಂಸೆಗಳೆವೆಯೆಱಿಮೊಂದಾಗಲೀಯಳ್ ನವಿಲ್‌ಬಾ
ಣತಿಯಂ ಕಣ್ಮುಚ್ಚಲೀಯಳ್ ಗೞಿಪುವ ಗಿಳಿಯಂ ತೂಕಡಂಗಾಣಲೀಯಳ್
ಕತೆಯಂ ಪೇೞೆಂದವಳ್ ಸಾರಕಿಯುಮನಿನಿಸುಂಗೆಯ್ದು ಕಣ್ಮುಚ್ಚಲೀಯಳ್ ೧೧೬

ನಡನಡಪಿಂತು ತನ್ನನೆನೆ ಮೆಯ್ ಬಡವಾದುದು ಲೋಚನಾಂಶುಗಳ್
ಬಿಡೆ ತೊಡರ್ದಂತೆ ಗಂಡಯುಗಳಂ ಬಿಳಿದಾದುದು ತೋಳ್ಗಳೊಳ್ ಸರಂ
ಬಿಡಿದವೊಲೆಯ್ದೆ ಸುಯ್ ಸರಳವಾದುದು ಭಾವರಸಪ್ರವಾಹಮೊಳ್
ಗಡಣಿಸಿದಂತೆ ಬಾಷ್ಪಜಲಸಂತತಿ ಕಾಳ್ಪುರಮಾದುದಾಕೆಯಾ ೧೧೭

ಸುದತಿ ಲತಾಂಗನೇಕೆ ಬಡವಾದಪುದೆಂದೆನೆ ಮಿಕ್ಕಮಿಕ್ಕ ಭಾ
ವದೊಳಣುಭೇದಮಿಲ್ಲೆನಿಸಿ ಮತ್ಪತಿಯಿರ್ದೊಡೆ ದೊಡ್ಡಿತಾಗಿ ತೋ
ಱುದುದೆನಗೀಗಲರ್ಧವೊಡವೋದುದು ವಲ್ಲಭನಲ್ಲಿಗರ್ಧಮಿ
ರ್ದುದು ತನುವೊಂದ ನಿಟ್ಟಿಸಿದೊಡೇಂ ಬಡವಾಗದೆದೊಡ್ಡಿತಕ್ಕುಮೇಂ ೧೧೮

ಗಿಳಿಗಿನ್ನುಂ ಕುಟುಕಿಕ್ಕೆನೆಂಬಳೆಲೆ ನೀನಾರೋಗಿಸೆಂದಂದು ಕೋ
ಕಿಳನಿನ್ನುಂ ತಳಿರ್ಗಚ್ಚಿದೆಂಬಳೆಲೆಯುಂ ಪೆಲ್ಲೆಂದೋಡೇೞ್ಮಜ್ಜನಂ
ಗೊಳಲೆಂದಂದೆಲರಿಂದೆ ಪೆಯ್‌ ನಡುಗಿತೆಂಬಳ್ ಚಂದನೋದ್ವರ್ತಮೀ
ಗಳವೇಕಿಲ್ಲೆನೆ ಪಾವು ಕಾವುದನೆ ಕೇಳ್ದಂಜಿರ್ಪೆನೆಂಬಳ್ ಸಖೀ ೧೧೯

(ಲೀಲಾವತಿ, ೭-೮೪)

ಅಲರ್ಗಣ್ಣಿಂ ಪೂವಿನಂಬಂ ಸಮೆದನೊ ಮದನಂ ಕೊಂಡು ಮೇಣ್ ಪ್ರಾಣಮಂ ಕೋ
ಕಿಲನೆಲ್ಲಂ ಕೂಡಿಕೊಂಡುಂ ಗಳರವರವನುಂ ವಕ್ತ್ರಶೀತಾಂಶುವಂ ಪೆಣ್
ಗೊಲೆಗೆಂದುಂ ಚಂದ್ರಮಂ ಕೊಂದನೊ ಖಳನುಱಿದಂತೇಕೆ ಪೆಣ್ ನೋಡಳೇಕಿಂ
ತೆಲೆಗೇ ಮಾತಾಡಳೇಕೆಮ್ಮೊಳು ಸಖಿ ಮುಖದಿಂ ಹಾಸನುಂ ಸೂಸಳೆಮ್ಮೊಳ್ ೧೨೦

ನೂತ್ನವಿಹಂಗಸಂಕುಳಸಮುತ್ಥಿತನಾದಮನೆಯ್ದೆ ಕೇಳ್ದು ಕಾ
ಮಾತುರೆ ನಲ್ಲನಾವೆಡೆಯೊಳಿರ್ಪೆಡೆಗೆಯ್ದಿರದೆಯ್ದೆ ಬಂದು ಸಂ
ಕೇತನಮಾಧವೀ ಸದನದೊಳ್ ನಿಜಕಾಂತನ ರೂಪುಗಾಣದು
ತ್ಪಾತವಿಷಾದೆ ಬೆಚ್ಚನುಸುರೊತ್ತಿದಳೊಯ್ಯನೆ ಕಣ್ಣನೀರ್ಗಳಂ ೧೨೧

ಎಲರಿಂದೆಬ್ಬಿತ್ತು ಲೀಲಾವತಿ ನಿಜಪತಿಯಂ ಮಂಚದೊಳ್ ಕಾಣದಾಗಳ್
ಚಲಿಯಾದಳ್ ಚಂಡಿಯಾದಳ್ ಮಱಿದಳೊಱಗಿದಳ್ ಕಂದಿದಳ್ ಕುಂದಿದಳ್ ಕೋ
ಟಲೆಗೊಂಡಳ್ ಸಾವುಗಂಡಳ್ ಕಳವಳಿಸಿದಳಾಸತ್ತಳೆಚ್ಚೆತ್ತಳ್ ಬೆಮರ್ತಳ್
ನೆಲೆಯಿಂದಂ ಬೀೞ್ದಳೇೞ್ದಳ್ ವಿರಹದುರಿಯೊಳಾ ಕಾಂತೆ ವಿಭ್ರಾಂತೆಯಾದಳ್ ೧೨೨

(ಲೀಲಾವತಿ, ೧೦-೬೬)

ಅಳುರ್ವರಳಂಬುಗಿಚ್ಚು ನಿಜಕೋಮಲದೇಹಮನೆಯ್ದೆ ಪರ್ವೆ ತ
ಣ್ಗೊಳದ ಮೃಣಾಳಮಂ ತೆಗೆದು ಬೇಗದಿನಿತ್ತವೊಲಾಗೆ ನೊಂದುಬಂ
ದೆಳೆದಳಿರ್ವಾಲಿನೀರ್ ಕುದಿಯೆ ಚಂದನದಣ್ಕೆಯೆ ಬೆಂಕೆಯಾಗುತಾ
ಕುಳಿರ್ವಲರ್ವಾಸಿನೊಳ್ ಪೊರಳುತಿರ್ದಳಗುರ್ವಿನ ಬೇಟದೇಟಿಗ್ಗೆಯಿಂ ೧೨೩

ದೂರಿಸಿ ಸುಯ್ದು ಕೈತಳಮುಮಂ ಕದಪಿಂಗಿರಪೊಯ್ದು ಧಾತ್ರನಂ
ಪ್ಪೆರಡೆ ಬಯ್ದು ಕಣ್ಣನಿಯಮಂಶುಕದಿಂ ನೆಱೆ ತೊಯ್ದು ತಾಯದಂ
ಸ್ಪೈರಿಸಳೆಂದು ಕಾಯ್ದು ನನೆಗೊಂಡಿರೆ ಪೂಗಣೆಗೈದುಮೊರ್ವಳಿಂ
ತಾರಿದನಿಂಬುಕೆಯ್ದು ಕೊಡವಂದವೆನುತ್ತೆನಸುಂ ಪಲುಂಬಿದಳ್ ೧೨೪

ಸುರಿದಬಲಿ ಕಣ್ಣನೀರ್ಗಳ
ಸರಿಯಂ ಸ್ತನಮಂಡಲಂಗಳೊಳ್ ವಿರಹಮಹಾ
ಜ್ವರಜನಿತಪುಳಕರತ್ಯಾಂ
ಕುರಂಗಳಂ ಬಳೆಯಿಪಳ್ ನಭೋಲಕ್ಷ್ಮಿಯವೋಲ್ ೧೨೫

ಪುರುಳಂ ಮರುಳಂ ಮಾಳ್ಪಂ
ಶರನಿಧಿಯಂ ಬೆಂಚೆಮಾಡುವಂ ಕೇಸರಿಯಂ
ನರಿಮಾಣ್ಪನಣಕಮಲ್ಲಿದು
ವರಸಲ್ಲನೆ ಕಾಮಿಜನಕೆ ಕುಸುಮಪತಾಕಂ ೧೨೬

(ಲೀಲಾವತಿ, ೪-೨೭)

ಅತನು ಗಡಾ ಭಟಂಗೆ ನನೆವಿಲ್ಲಗಡ ಪೂವೆ ಸರಲ್ಗಡಂ ಹಿಮ
ದ್ಯುತಿ ಗಡ ಬಂದ ಮಾವು ಗಡ ತೆಂಬೆಲರುಂ ಗಡ ತುಂಬಿಗಳ್ಗಡಂ
ಲತೆ ಗಡ ಸೈನಿಕಂ ಗಡಮುಮಂಗೆಯಕ್ಕೆಟವ ಸೋಲ್ತು ತಾಂ ಗಡು
ದ್ಧತರುಮನಿಕ್ಕುವಂ ಗಡ ನೃಪಂ ಗಡ ಪೇೞದು ತಕ್ಕುದೇಂ ೧೨೭

ಹರನುರುಪಿದೊಡುರಿಪಮನೆ
ಲ್ಲರ ಮೈಗಂ ಪಚ್ಚುಗೊಡುವವೋಲ್ ಪುಗುತಿರ್ಪಾ
ಸ್ಮರನಂ ಪುಗಲಿತ್ತಡೆ ಮನ
ವುರಿವುದುಮುಂಗಂಗಳುರಿವುದೇಂ ವಿಸ್ಮಯಮೇಂ ೧೨೮

ಅಸಿಯಳೆ ಸಣ್ಣನಪ್ಪ ನಡುವಪ್ಪುವಿನಂ ಮಿಗೆ ಸಣ್ಣನಾಗೆ ಬೆ
ಳ್ಪೆಸೆಯೆ ಮುಖೇಂದುಮಂಡಲಕೆ ಮೆಯ್ಮಿಱುಗುತ್ತಿರೆ ಚಿತ್ರದಗ್ನಿ ಧ
ಳ್ಳಿಸೆ ಬಲಿದಂತೆ ಕರ್ಕಶಕುಚಂ ಬಡವಾಗದೆ ತಾನೆ ತೋಱನೆ
ತ್ತಸದಳಮಾಯ್ತು ಚೆಲ್ವು ಕಮಲಾಸ್ಯೆಗೆ ಕಾಮಕಲಾವತಾರದೊಳ್ ೧೨೯

(ಲೀಲಾವತಿ, ೯-೧೨೪)

ಪೊಸತಳಿರಿಂದೆ ಬೀಸೆ ಕಳೆದಂತಿರೆ ಕಾಂತೆಯ ಕಾಯಕಾಂತಿಯಂ
ಬಿಸುಡೆ ಪಸುರ್ಪು ಸೂಸಿ ಮಳಯೋದ್ಭವಮುಂ ಸಲೆ ಪೂವಿನೊಳ್ ಪೊರ
ಳ್ದಸದಳಮಾಗೆ ಮಾಡಿದವೊಲುಜ್ವಳಮಪ್ಪೆಳೆಬೆಳ್ಪು ಪೊರ್ದೆ ಮೆಯ್
ಮಸೆದಸಮಾಸ್ತ್ರನೊಪ್ಪುವಸಿಯುಂತಸಿಯಾದುದನಂಗತಾಪದಿಂ ೧೩೦

(ಲೀಲಾವತಿ, ೯-೧೨೫)

ಕದಪಿನೊಳಿಟ್ಟ ಕೆಯ್ಯ ಪೊಸಪಚ್ಚೆಯನಂಗನ ಪೊಯ್ದ ಬಾಸುಟಿಂ
ಗದಿನಿರೆ ಪೂವಿನೊಳ್ ಪೊರಳೆ ಪತ್ತಿದ ಪೂಗಳೆ ಕೊಂಡ ಕಾಮುಬಾ
ಣದ ದೊರೆಯಾಗೆ ಮೆಯ್ಯ ಮಲಯೋದ್ಭವದಣ್ಪುಗಳೇಱ ಬಾಯೊಳ್
ಕ್ಕಿದ ಕವಳಂಬೊಲಾಗೆ ಲಲಿತಾಂಗಿ ಬಟಿಲ್ವಳನಂಗತಾಪದಿಂ ೧೩೧

(ಲೀಲಾವತಿ, ೯–೧೨೬)

ಹಾರಮೆ ಭೂಷಣಂ ಮಳಯಜಾತಮೆ ಮೆಯ್ಗೆಸೆವಣ್ಪು ಸಾರಕ
ರ್ಪೂರಮೆ ತಂಬುಲಂ ತಳಿರ ಜೊಂಪಮೆ ಬಾಟ್ವಿನೆ ಕಲ್ಪನಾಮೃತಾ
ಹಾರಮೆ ಜೀವನಂ ಸಲಿಲಕೇಳಿಯೆ ಕೇಳಿ ನವಪ್ರವಾಳ ಸಂ
ಸ್ತಾರಮೆ ಸೆಜ್ಜೆಯಾಯ್ತು ತರಳಾಕ್ಷಿಗೆ ತದ್ವಿರಹಾತಿರೇಕದೊಳ್ ೧೩೨

(ಲೀಲಾವತಿ, ೯–೧೨೭)

ಬಿಸುಸುಯ್ ಮೆಯ್ವರ್ಚೆ ಕಂದಿರ್ದಧರಮಣಿ ಲಸತ್ಪಲ್ಲವಂ ಕಾಯ್ದ ಕಣ್ಣೀ
ರೆಸಱಿಂದೊಳ್ ತುಳ್ಕಾಡೆಯುಂ ಬಾಡಿದ ನಯನಯುಗೇಂದೀವರಂ ಚಿತ್ತಜಾಗ್ನಿ
ಪ್ರಸರಂ ತಳ್ತಟಿಸ್ಸಿಯುಂ ಸೀಯದ ಗುರುಕುಚಕೋಕದ್ವಯಂ ಶೋಭಿಕುಂ ಸೂ
ಚಿಸುವಂತಾ ಕಾಮಿನೀದುರ್ಧರವಿರಹತಪಃಪ್ರೌಢಸಾಮರ್ಥ್ಯದುರ್ಬಂ ೧೩೩

(ಲೀಲಾವತಿ, ೯–೧೨೯)

ಪೊಲಿಗಳೊಳಿಕ್ಕಲಬ್ಜದ ವಿಶಾಲದಳಂಗಳನಾಳ್ದು ನೀಳ್ದ ಕ
ಣ್ಮಲರ್ಗಳೊಳೊತ್ತಲುತ್ಪಲದ ನಿಟ್ಟಿಸಟಿಂ ಕುಚಕುಂಭಮಧ್ಯದೊಳ್
ಸಲಲಿದ ಶಂಕೆಯಿಂದಸಿಯ ಬಾಲಮೃಣಾಳಮನಾವದೀರ್ಘಿಕಾ
ಜಲದೊಳಮೆಯ್ದೆ ಪೊಕ್ಕಱಸಿ ಕಾಣದೆ ಕಾಯ್ದುದು ತತ್ಸಖೀ ಕುಲಂ ೧೩೪

(ಲೀಲಾವತಿ, ೯–೧೩೦)

ನೀರೂಡುವಂತೆ ಮದನನ
ಕೂರಸಿಯುಂ ಚುಯ್ಯೆನುತ್ತೆ ಪೊಗೆ ಪಾಯ್ವಿನೆಗಂ
ನೀರೇಜವನದೊಳಿರ್ದುವ
ರೋಪಂತಿರೆ ವಿರಹದಹನದಗ್ಧೆಯನವಳಂ ೧೩೫

(ಲೀಲಾವತಿ, ೯–೧೩೧)

ಪವನಂ ಸೆವನಂ ಕೃತಕಮಂ
ಜವನಂ ಜವನಂತೆ ವನಿತೆಗಾಯ್ತು ಕೊಲಲ್ ಬ
ರ್ಪವನಂ ಪವನಂ ಪೋಲ್ತುದು
ದವನಂ ದವನಂತೆ ವಿಷಮುಮಾಯ್ತನವರತಂ ೧೩೬

(ಲೀಲಾವತಿ, ೯-೧೩೨)

ಕುಸುಮಾಸ್ತ್ರೋದಯದಿಂ ಬೆಳರ್ತನಿಯಮಂಗಚ್ಛಾಯೆ ತಳ್ತಂತೆ ಮೆಯ್
ಬಿಸುಪಿಂ ಬೆಂದು ಕರಂಗಿದಂತಿರೆರ್ವೆಯಂ ನಟ್ಟುರ್ಚೆ ರಕ್ತಾಂಬುವಂ
ಬಸಿವಂತುಬ್ಬಸಮಾದ ಕಣ್ಬೊಣರ ಬೆಳ್ಪಂ ಕರ್ಪುಮೊಳ್ಗೆಂಪುಮೇಂ
ಪೊಸತಾಗಿರ್ದುವೊ ನೋಲ್ಪೆ ಕಾಯ್ಪುಡುಗದಿರ್ದಂಭೋಜಪತ್ರಾಕ್ಷಿಯಾ ೧೩೭

(ಲೀಲಾವತಿ, ೧೦-೪೫)

ಪೊಸಮುತ್ತಂ ತೊಟ್ಟವೋಲ್ ಪೊಣ್ಮುವ ಬೆಮರ್ವನಿಯಿಂ ತಳ್ತ ರೋಮಾಂಚದುರ್ವಿಂ
ದಸಮಸ್ನೇಹಾಕುಳಾಲೋಕದಿನಲಸಲೆಸಲ್ ಸಂದ ನಿಶ್ವಾಸದಿಂ ಕಂ
ಪಿಸುತಂ ಕಣ್ಗೊಪ್ಪಿದಳ್ ಕುಟ್ಮಳಕುಳಕಳಿಕಾಪುಷ್ಪಚಾರಂ ಕರಂ ಶೋ
ಭಿಸುವನ್ನಂ ತಂಬೆಲರ್ ತೂಗುವ ಪೊಸಲತೆವೋಲ್ ಕಾಂತೆ ಕಣ್ಸೋಲದಿಂದಂ ೧೩೮

(ಲೀಲಾವತಿ, ೧೦-೪೭)

ಬಗೆವೊಡೆ ಗಂಡರಂ ಹರೆಯುವಾಳ್ವುದು ಪೇಟಿಖ್ಯಾಡೆ ಪೆಣ್ಣಜನ್ವನಂ
ಮುಗಿಲದನಂತೆ ನಚ್ಚಿ ಪತಿಗಿಲ್ಲದ ತೋಟಿಯನಿಟ್ಟು ತೋಟಿಯಿಂ
ತೆಗೆವ ಚೆಲಕ್ಕೆ ಮೆಯ್ದೆಗೆವ ಮೀಱುವ ಕಣ್ದೆಗೆವಾರ್ದು ಕಂತು ಬಿ
ಲ್ದೆಗೆಯೆ ಬಱಿಕ್ಕೆ ಕೈದೆಗೆದ ಗಾವಿಲಗೇವುದೋ ಜೇಟವಚ್ಚಿಗಂ ೧೩೯

ಮಲ್ಲಿಗೆಯಲ್ಲಿ ಪೂತಲತೆಯಲ್ಲಿ ಮುಗಿಲ್ಗಡಲ್ಲಿ ಮಾಲತೀ
ವಲ್ಲರಿಯಲ್ಲಿ ಸೋಗೆನವಿಲಲ್ಲಿ ಸುಗಂಧಸಮೀರನಲ್ಲಿ ಮಾ
ವಲ್ಲಿ ಮದಾಳಿಯಲ್ಲಿ ಗಿಳಿಯಲ್ಲಿ ಪಿಕಾವಳಿಯಲ್ಲಿ ವಲ್ಲಿಕಾ
ರಲ್ಲಿ ಬಸಂತವಲ್ಲಿಯೆನೆ ಕೊಲ್ಲದೆ ಕಾಮಿನಿಯನಾ ವನಂ ವನಂ ೧೪೦

(ಲೀಲಾವತಿ, ೧೧-೨

ವಿರಹದೊಳಾದ ವೇದನೆಯನಾರಿಸಲಾ ಮರನೊಳ್ಳಿತೆಂದು ಮಾ
ಮರದ ನೆೞಲ್ಗೆ ಪೋದೆ ಗಡ ಕಾಮನ ಡಾವರವಲ್ಲಿ ಕೋಕಿಳೋ
ತ್ಕರರವಮಲ್ಲಿ ಚಪ್ಪರಿಪ ರಾಜಶುಕವ್ರಜಮಲ್ಲಿ ಕಾಯ್ದು ಪ
ಲ್ಮೊರೆವ ಮದಾಳಿಯಲ್ಲಿ ಸತಿ ಸಾರದಿರಾ ಮರನಂ ಬಸಂತದೊಳ್ ೧೪೧

ನನೆ ಮಸಿವಣ್ಣವಾದುವು ಮುಗುಳ್ ಮಿಗೆ ಸೀದುವು ಬಂಡು ಸೋರ್ವ ಪೂ
ವಿನ ಪೊಸಗೊಂಚಲುಂ ಕೊರಗಿಪೋದುವು ಕೋರಕಪಲ್ಲವಂಗಳುಂ
ಪೊನೆಪೊಗೆಯುತ್ತಮಿರ್ದಪುವು ಬೀಸುವೆಲರ್ ಬಿಸುಸುಯ್ಯೆ ನೆತ್ತಿಸೋಂ
ಕಿನೊಳಳುರ್ದಪ್ಪುದೀ ಬನದೊಳಿರ್ದಪರಕ್ಕುಮನಂಗತಾಪದರ್ ೧೪೨

(ಲೀಲಾವತಿ, ೧೧-೬)

ಎಳೆದಳಿರೆಂಬ ಕೊಂಬಿನೊಳೆ ಪಾಯ್ದೆಳನೇಸರ ಕಾಂತಿಗಳ್ಗೆ ಪೂ
ಗೊಳದೊಳಗೊಬ್ಬಮೆಂದಡರೆ ಮಾರ್ಪೊಳೆವಾತ್ಮಮುಖಾಂಬುಜಕ್ಕೆ ಕೋ
ಮಳ ಬಿಸಕಾಂಡಮೆಂದೆಸೆವ ತಮ್ಮಯ ತೋಳ ನೆಟಿಲ್ಗೆ ಕೈಯನೊ
ಯ್ದೆಳಸಿ ಬಟಲ್ದರಾರ್ತವಿತತಾನಳದಗ್ಧೆಯರಲ್ಲಿ ಮುಗ್ಧೆಯರ್ ೧೪೩

ಒದವಿ ಘನಾಗಮಂ ಪಿಡಿದ ಕೌಮುದಿಯಂತೆ ಬಿಸಲ್ಗೆ ಮೆಯ್ಯನೊ
ಡ್ಡಿದ ಲತೆಯಂತೆ ಜೇಸಗೆಗೆ ಸಿಲ್ಕಿದ ನಿಮ್ನಗೆಯಂತೆ ಮಾಗೆ ಮು
ಟ್ಟಿದ ದಿನಲಕ್ಷ್ಮಿಯಂತೆ ಮಿಗೆ ಮಂಜಿಱಿದಬ್ಜಿನಿಯಂತೆ ಕನ್ನೆವೇ
ಟದ ಪೊಡೆಗಿಚ್ಚಿನೊಳ್ ಪೊರಳುತಿರ್ದು ಕರಂ ಕೊರಗಿರ್ದ ಕಾಂತೆಯಂ ೧೪೪

(ಲೀಲಾವತಿ, ೧೨-೩೫)

ಸುದತಿಯ ಸುಯ್ಯಲಿಂ ಬನಮೆ ಬೆಂದುದೊ ಜೇಯದೊಡೇಕೆ ಕೆಚ್ಚನಾ
ದುದೊ ತನಿವಣ್ಗಳಿಂ ಸವಿದ ಕೀರನ ಚಂಚುವದೇಕೆ ಮೂಗುವ
ಟ್ಟುದೊ ಮಧು ಪೋಪುದಂ ತಳಿರುಗರ್ಚದೆ ಕೋಗಿಲೆಯೇಕೆ ಪಾಱಿಪೋ
ದುದೊ ಶಶಿರಾಂಬುಜಾಕರಕೆ ತುಂಬಿ ತುಡುಂಕಿ ನವಪ್ರಸೂನಮುಂ ೧೪೫

ಮುಗಪುಗಮಿಸುತ್ತೆ ಪೊತ್ತಿ ಪೊಗೆ[೧]ವಂಗದ ಚಂದನದಣ್ಪು[೧] ಧೂಪಮುಂ
ತೆಗಳಿಸೆ ತಾಪದಿಂದುರಿವ ಕಪ್ಪುರವೊಪ್ಪುವ ದೀಪದಂದಮುಂ
ಪೊಗಟಿಸೆ ರಾಸಿಗೆಯ್ದ ನನೆ ಕೇ[೨]ಸಡಿಗಿಂದೆ[೨]ಣೆಯಾದ ಕೆಂದಳಿರ್
ಸೊಗಯಿಸೆ ಮೋಹದೇವತೆಗೆ ತನ್ನನೆ ತಾಂ ಬಲಿಗೊಟ್ಟಳೆಂಬಿನಂ ೧೪೬

(ಲೀಲಾವತಿ, ೧೧-೪೨)

ಸರಸಮೆನಿಪ್ಪ ಮಾನಸದೊಳಲ್ಲದೆ ಪುಟ್ಟದು ದರ್ಶನಾಮೃತ
ಸ್ಮರಣಸರಿತ್ಪ್ರವಾಹದೊಳೆ ಪೊತ್ತುವುದಂತೆ ಹಿಮಾಂಶುಬಿಂಬದಿಂ
ದುರಿವುದು ತಣ್ಪುಗೆಯ್ಯೆ ತನಿವೆರ್ಚುವುದಾಳಿಯುರಂತರಂಗಮುಂ
ಕೊರಗಿ ಕನಲ್ದುದೀ ವಿರಹವಹ್ನಿಯಿದೇಂ ವಿಪರೀತವೃತ್ತಿಯೋ ೧೪೮

(ಲೀಲಾವತಿ, ೧೧-೪೯)

---

[೧] ಚಂದನಬಣ್ಪದುಕೂಲ(ಸ) [೨] ರಸಿನ್ನೆ(ಸ)

ಹರನೇತ್ರಜ್ವಾಲೆಯಿಂ ಜೇವತನುವನುಮೆ ಕಾಣುತ್ತೆ ತನ್ಮೌಳಿಯೊಳ್ ಸುಂ
ದರಲೇಖಾಮಾತ್ರಮಿರ್ಪಂತಮೃತಕಿರಣನಂ ಕೊಂಡು ಪೂರ್ವಪ್ರಭಾಮುಂ
ಜರಿ ಮೆಯ್ಯೊಳ್ ಪತ್ತುವನ್ನಂ ಪಿಡಿದು ತಳಿದು ಮತ್ತೆತ್ತಿದಂತಿರ್ದ ಶೋಭಾ
ಕರರೂಪಾಕಾರನಂ ತತ್ತರುಣಿ ಕನಸಿನೊಳ್ ಕಂಡು ಸೋಲ್ತಳ್ ಮೃಗಾಕ್ಷೀ ೧೪೯

ಘನಶಿಶಿರೋಪಚಾರವಿಷದಿಂ ಹೃದಯಸ್ಥಿತನಾದ ದೇವ ನಿ
ನ್ನನೆ ಕುಮುದಾಬ್ಜಚಂದನದಳಂಗಳಿನರ್ಚಿಸಿ ನಿನ್ನ ರೂಪ ಭಾ
ವನೆಯೊಳೆ ಕೂಡಿ ನಿನ್ನತುಳನಾಮಜಪಕ್ರಿಯೆಯಲ್ಲಿ ನೈಷ್ಠೆ ಬ
ಟ್ಟನತಿಶಯಾಂಗಿ ಸಾಧಿಸಿದಪಳ್ ನಿಜದೇಹವಿದಾಹಮುಕ್ತಿಯಂ ೧೫೦

ಕಾಮಿನಿ ಪಂಚಬಾಣಕವಿ ನಿಮ್ಮೊಳೆ ತಾಂ ಮುನಿದಿರ್ಪನೆಂದೆನಲ್
ಕೋಮಲೆ ದಂದಶೂಕವಧುವಾದಳಮರ್ತ್ಯವಧೂಟಿಯಾದಳು
ದ್ದಾಮ ಪುಳಿಂದಿಯಾದಳುೞ್ತ ಕಿನ್ನರಿಯಾದಳಡರ್ತು ಯೋಗಿಣಿ
ನಾಮೆಯದಾದಳೊಲ್ದು ಕಮಲಾಲಯೆಯಾದಳದೇಂ ವಿಚಿತ್ರಮೊ ೧೫೧

ಕಣ್ಣಿಂದಂದಿೞಿತಂದ ನೀರ್ಗೆ ಪೊಲೆಗಳ್ ಕಂದಿರ್ದವಾ ಕಾಮನಾ
ತಿಣ್ಣಂಬೆತ್ತಲರ್ಗೋಲ್ಗಳೆನ್ನೆರ್ದೆಯನುರ್ಚಲ್ಕೀಗಳಂತೊಕ್ಕ ಕೆಂ
ಬಣ್ಣಂ ಬೂವಿಡಿ ತೀವಿದಿರ್ಕೆಯೊಳೆ ಬೆಂದಾ ಚಿತ್ತದೊಳ್ ಬೆಂಕೆಯಿಂ
ನುಣ್ಣಂ ಕೂಡುವ ನಲ್ಲನಿನ್ನುಮುಃೞಿಯಲ್ಕೆಂತಪ್ಪನೋ ಕಾಮಿನೀ ೧೫೨

ಅತಿಬಿಸುಪೇರ್ದು ತಾನೞಿದುದಿಲ್ಲೆನವೇಡತಿಯೋಗಕಾಂತೆಯಾ
ಕೃತಿಯೊಳೆ ನಲ್ಲನೊಲ್ದಿರೆ ಮಹೋಷ್ಣಮದೆಂತುಟು ಕೊಲ್ಲಬಲ್ಲದೆ
ನ್ನುತತನುವುಂಡು ಪಾರದಮೆಯಾ ಪರಮಾಯುಧದಿಂದ ರಕ್ಷಿಸಂ
ತತಿಶಯದಿಂ ವಿಯೋಗಿಜನಮಾ ನೆನಪಿಂದವೆ ಬಾೞ್ವುದಾವಗಂ ೧೫೩

ವಿಕೃತಿಯ ರೂಪು ವಿಭ್ರಮಣಚಿತ್ತದ ವಿಪ್ರತಿಪತ್ತಿ ಭಾವದಾ
ವಿಕಸನಮಾಗದಾಸ್ಯದ ವಿಕಾರದ ನೋಟದ ವೀತಚೇಷ್ಟೆಯಾ
ವಿಕಳತೆಗೊಳ್ವ ಜಿಹ್ವೆಯತಿವಿಹ್ವಳಬುದ್ಧಿಯ ವಿಶ್ವಭೇದದಾ
ವಿಕಲಿಸಿದಾತ್ಮನಾ ವಿರಹಿಯೆಂದಡೆ ನೋಡಿತು ತತ್ಸಖೀಜನಂ ೧೫೪

ಮೋಹದೊಳಾಕೆ ಸಾಕಿದ ಶುಕಂ ಸಲೆ ಪಂಜರದಲ್ಲಿ ಶೋಕಿಸು
ತ್ತಾಹ ಜಗತ್ಪ್ರವೀಣೆ ಜಡಭಾವಮಿದೇಕೆಲೆಯಕ್ಕ ಸಾರ್ದುಪೆಂ
ದೂಹಿಸಿ ಕೂಡೆಕೂಡೆ ಕರೆಯಲ್ ಬೆದರ್ದಂತವಳೆದ್ದು ಕಣ್ಬಿಡು
ತ್ತಾ ಹದದಲ್ಲಿ ಮೂರ್ಛಿಸಿರೆ ಬಾೞ್ತಲೆಯೆಂದಣವೊಯ್ದರಾಳಿಯರ್ (?) ೧೫೫

ಲೇಸಿಗೆ ಲೇಸು ಸಕ್ಕಸರಿಯಾಗಿರೆ ನಲ್ಲರೊಳೆಲ್ಲ ಸೌಖ್ಯಮಂ
ಸಾಸಿರ . . . . . ದುದು ತಾಂ ವಿಪರೀತಮುದಾಗೆ ಕಾಮನಾ
ಪೂಸರಲ್ಪೆದಕಂ ಶರೀರಮಂ ಡೊಣೆಮಾಡುತ ಚಿತ್ರಪುಷ್ಪಮಂ
ಪೂಸಿಗೆ ತಂದು ಜೀವನ ಕುಟೀರಕೆಂದೆನಲ್ ನೆಱೆ ಕಿಚ್ಚನಿಕ್ಕಿದಂ ೧೫೬

ಸಸಿ ಹಿತಸೆಂದು ಪೇೞ್ಪೊಡೆ ಕಿಚ್ಚಿನ ಪೊಟ್ಟಣಮಾಗಿ ಬಂದಪಂ
ಮಿಸುಪ ವಸಂತನಂ ಕರೆದು ಪೇೞ್ಪೊಡಂ ಮೊಗಕೆಚ್ಚನಾದಪಂ
ಎಸೆವೆಲರಿಂದೆ ಪೇೞ್ಪೊಡೆ ನೋಡದೆ ನಿಲ್ಲದೆ ಪೋದಪಂ ಕನ
ಲ್ದಸಮಶರಂಗೆ ಸೈರಿಸುವುದೆಂದೆನಗಾಗಿಯು ಪೇೞ್ವರಿಲ್ಲಹೋ ೧೫೭

ಅಲರ್ಗಣೆಯೇನು ಕೂರವೊ ಕೞುತ್ತೆಸಲೊಳ್ದೊಡೆ ಕಂಪವಾಗೆಯಾ
ಬಲುವಗೆವೆತ್ತ ಪಾರದದವೋಲ್ಕೆದರ್ದೊಪ್ಪಿರೆ ನೊಂದ ತನ್ನಟಿಲ್
ನೆಲದನಿತಾಗೆ ಧೈರ್ಯವದು ಸರ್ವದಿಶಾಳಿಯೊಳೋಡೆ ಲಜ್ಜೆ ತಾಂ
ತೊಲಗಿರೆ ಮೌನಮಂ ತಳೆದಳಾ ವಿರಹಾಗ್ನಿಗೆ ಕರ್ವುವಿಲ್ಲನಾ ೧೫೮

ಕೋಗಿಲೆ ಕೋಕನೊಂದಿಸುವೆನಾ ಗಿಳಿಯಂಚೆಯ ತೊಂಡುವಾತುಸ್ಸೈ
ತಾಗಿರೆ ಹಾಡಿಪೆಂ ಸರಸಗಾನಮನೀ ಸಖಿಯರ್ಕಳೆಲ್ಲರಂ
ಮಾಗಗ........ ಡಲ್ಲರಳಿಪೆಂ ಕಮಲಾಕರಕಿಕ್ಕಿ ಚೈತ್ರನಂ
ರಾಗಿಸುವಂತೆ ಸುಟ್ಟುರಿಪುವೆಂ ಮನದನ್ನನ ದಿಟ್ಟದಣ್ಪಿನಿಂ ೧೫೯

ತೊಲಗುತೆ ಜೀವಮಂ ಬಿಡುವ ಕಾಂತೆಯರಂ ನುಡಿಯಲ್ಕೆ ಬೇಡಹೋ
ತೊಲಗಿದ ಕಾಂತನಂದುಣಿಸಿದಿಂಪು ಸೊಗಂ ತನು ಜೀವಮಾಗಿರಲ್
ಜಲಕನೆ ಕಂಗಳಂ ತೆಱೆಯೆ ನಲ್ಲನೆ ತನ್ಮಯಮಾಗಿ ತೋಱುವೀ
]ಯಲಘು] ಸುಖಕ್ಕೆ ದೇವ ಜಗತೀತಳಸೌಖ್ಯಮದೇಂ ಸಮಾನವೇ ೧೬೦

ಮದನನ ಪೂಜೆಗೆಯ್ದಿವಳನಲ್ಲನನಾಗಿಸುವಂತೆ ಮಾಡುವೆಂ
ಹೃದಯ ಕುಟೀರದೊಳ್ ಸ್ಮರಶರಾಗ್ನಿಯನಿತ್ತಿವನಾತ್ಮನೆಲ್ಲಮಂ
ಬೆದಱಿಸುವೆಂ ಸಮಾನಮಹನೋವನೆ ಕಾಣಿಸುತೀಕೆಗೊಪ್ಪುವಾ
ಪದದೊಳೆ ತಂದು ಬೀೞಿಸುವೆನಾನವೆಳೇೞ್ಗೆಯ ಬಲ್ಲೆನಾವಗಂ ೧೬೧

ಇನಿಯನ ರೂಪು ಮಾನಿನಿಯ ಸಾಗರಕಂ ನೆಱೆ ಕುಂಭಸಂಭವಂ
ತನುಕೃಶರೋಗಕೊಲ್ದವನ ತೆಕ್ಕೆಯೆ ದಿವ್ಯಮಹೌಷಧಂ ಸದಾ
ಮನದಟಿಲೆಂಬ ಪರ್ವತಕೆ ನಲ್ಲನದಿಟ್ಟೆ ಸಹಸ್ರಲೋಚನಂ
ತ[ನುವಿನಲೆಕ್ಕ] ಚಾರದನ ಬಂದನೆನಲ್ಕೆ ವೃಥಾಯಮಾಗದೇ ೧೬೨

ಉರಿಯೆಲ್ಲಂ ಘನಶೈತ್ಯವಂಗದ ಕೃಶಂತಾನುಬ್ಬು ನೋವೆಲ್ಲಮುಂ
ಪರಮಾನಂದಮನೇಕದೈನ್ಯ ನಿನದಂ[ಗಳ್ತಾಂ] ರಸಧ್ವಾನಮೊ
ಪ್ಪಿರಲಂದೊಲ್ಲದೆ ಗಾಡಿ ಸಿಂಗರಮುದುದ್ಯತ್ಪೂರ್ಣಸಿಂಗಾರಕಾ
ಗರಮೊಲ್ದಾಣ್ಮನ ಬಿರ್ಚಿ ಕೂಡುವ ಸುಖಕ್ಕಾ ಸೌಖ್ಯಮೇಂ ಸಾಟಿಯೇ ೧೬೩

ಮುಚ್ಚುವುದೇಕೆ ಮುಚ್ಚಿದೊಡೆ ಬೆಚ್ಚಿವೊಲಿರ್ಪುದು ಹೀನಪುಣ್ಯದಿಂ
ಬೆಚ್ಚಶರೀರಯುಗ್ಮಮುವು ಬಿಚ್ಚಲ್ಕನುವಾಯ್ತಿದೆಂಬಿನಂ
ತಚ್ಚರಿಯಾದ ಜೀವಮುದೆ ಬಿರ್ಚುವುದೊಳ್ಳಿತು ಬಿರ್ಚದಿರ್ದೊಡಾ
ಕಿಚ್ಚಿಗೆ ಮೆಯ್ಯನಿತ್ತು ಮನಮುಂ ಪೊಗೆಸುತ್ತಿಪಳೇಂ ಸುಜಾಣೆಯೋ ೧೬೪

ಬಿಸಿಲ ಚಕೋರಂಗೆ ಚಂದ್ರಂ
ಪಸಿದ ಮರಾಳಂಗೆ....ಡಲು ಬಪ್ಪಂದದೊ
ಳಸಮಾನ ಸುಖಾಲೀಲಂ
ರಸಮಯಗುಣಜಲಧಿವಲ್ಲಭಂ ನಡೆತಂದಂ ೧೬೫

ಆಗಳೆಚ್ಚರಲಬಾಣಂ
ತಾಗದೆ ಹಿಮ್ಮೆಟ್ಟಿ ಸೆಡೆದು ಕಡೆದವು ತಾಂ ಭೂ
ಭಾಗದೊಳಿನಿಯನ ನಾಮುಂ
ಕೂಗಲದೇನೆಂಬೆ ಕಟ್ಟಿದೌಷಧಮಲ್ತೇ ೧೬೬

ವಿರಹಮುದೆತ್ತಲೋಡಿದುದೊ ವಿಹ್ವಳಭಾವಮುದೆತ್ತ ಸಾರ್ದುದೋ
ಶರಿರದ ಬೆಂಕೆಯೆತ್ತ ಸುಟಿಂದೆಲ್ಲಿಗೆ ದಾಂಟಿತೊ ನಲ್ಲನೆಂಬವಂ
ಸ್ಮರನಧಟಂಗೆ ತೋರ್ಪ ನಯನತ್ರಯನೋಯೆನೆ ಕಾಂತೆಗಾಗಳೇ
ಪರಮ ಸುಖಾಸ್ಪದಂ ನೆಗಟಿ ಕಾಂತನನಾ ಬಿಡದಪ್ಪಲಪ್ಪಿದಳ್ ೧೬೭

ಶಿವಶಿವ ಕೂರ್ತುದೊಂದು ಸೊಗಸೆಂತುಟೋ ಸೋಂಕುತಲಾದಸೌಖ್ಯಮೇ
ತವಗೆ ಶರೀರಮಾಶರಿರಮೆಸುರತದ್ರವಮಾದ್ರವಂಗಳೇ
ಕವಿತಹ ಕಾಮವಾರ್ಧಿ ಸಲೆ ವಾರ್ಧಿಯೊಳಾಟಿದ ಮಾನಸಂಗಳಿಂ
ತವಕಿಪನಲ್ಲರೊಂದಿ ಮೆಱೆದರ್ ಮಧುಮಾಸವನಾಂತರಂಗಳೊಳ್ ೧೬೮

## ಪುರುಷವಿರಹ

ಅಳಿಕುಳಿಮಂ ಕುರುಳ್ಗಳಿರವೆಂದು ತುಡುಂಕಿ ನವೋತ್ಪಲಂಗಳಂ
ಚಳನಯನಂಗಳೆಂದಿರದೆ ಚುಂಬಿಸಿ ವಕ್ತ್ರಸರೋಜದಂತಿರಲ್
ಜಳಜಮನೊಕ್ಕಲಿಕ್ಕಿ ಪಡೆದಂತಿರೆ ಪಲ್ಲವದೊಳ್ ಪೊರಳ್ದು ಸ
ತ್ಫಳಶಕುಚಂಗಳೆಂದು ಕಳಶಂಗಳನಪ್ಪಿದನಾ ನೃಪಾಲಕಂ ೧೬೯

ಎಳಲತೆಯಲ್ಲಿ ನಿಂದು ನಿಲಲಾಱದೆ ಕೇಳಿಗೃಹಾಂತರಾಳದೊಳ್
ಕಳವಳದಿಂದ ಪೊಕ್ಕು ಪೊಗಲಾಱದೆ ನಂದನದಲ್ಲಿ ಸಂತತಂ
ತೊಳಲಿ ಕೊಳಂಗಳೊಳ್ ಬಱಲಿ ಕಾಮಶರಾವಳಿಗಳ್ಕಿ ಸೋಗೆ ಕೋ
ಗಿಲೆ ಗಿಳಿಗಳ್ಗೆ ಬಳ್ಕಿ ಕುದಿದುಂ ನೆಱೆ ತಳ್ಕಿದನಾ ನರೇಶ್ವರಂ ೧೭೦

ಎರೆವೆಂ ನುತ್ಸಖಿ ತಂಮ ಕೂಡು ಗುಣವೃಂದಾರಾಮೆಯುಂ ರಾಮೆಯುಂ
ವರಪುಷ್ಪಾಯುಧಚಾಪಸಂಯುತಮೆನಿಪ್ಪಾನಾರಿಯಂ ನಾರಿಯಂ
ಸ್ಮರನಾಳೋಚನೆಗಾಪ್ತೆಯಾಗಿ ನೆಲಸಿರ್ಪೀಕಾಂತೆಯುಂ ಕಾಂತೆಯುಂ
ತರುಣೀಸಂಘಶಿರೋಮಣಿಪ್ರಬಳಕೀರ್ತ್ಯಾಶಾಂತೆಯುಂ ಶಾಂತೆಯುಂ ೧೭೧

ಇರು ನೀಂ ಪೋದಪೆ ನಾಂ ಮೃಗಾಕ್ಷಿಯೆನೆ ಕೇಳೆನ್ನೀಪಳಾ ಕಂದಿದಾ
ಯಿರವಂ ಚಿಂತಿಸುವಂದವಾ ನಲವುಗೆಟ್ಟಾಕಾರವಾ ಬಾಷ್ಪದೊಳ್
ಪೊರೆದಾಲೋಕನವಾಬಲತ್ವತೆಱನಂ ಸುಯ್ ತೋಱುವಂಗಸ್ಮರ
ಜ್ವರಮಂ ತಾಳ್ದುವ ಭಂಗಿ ತಾನಿರದಿದೇಂ ಬೆಚ್ಚತ್ತೊ ಮಚ್ಚಿತ್ತದೊಳ್ ೧೭೨

ನೆನೆನೆನೆದೆನ್ನ ಚಿತ್ತಪಱಿದಪ್ಪುವಳಂ ಪದಪಿಂದೆ ಬಂದು ಬಂ
ದನುಮಿಸೆ ತನ್ನ ಕಯ್ಯೆಲೆಯೊಳೊಂದೆಲೆಯಂ ಪಿಡಿದೆನ್ನ ಬಾಯೊಳಿ
ಟ್ಟನಿಸುಱಿದರ್ಧಮಂ ಕಡಿದುಕೊಂಬವಳಂ ನಳಿತೋಳ ನಲ್ಲಳಂ
ಮನಸಿಜಾನನೆಯುಂ ನೆನೆದು ಸಾಯದೊಡಂ ಬಡವಾಗಲೀಯರೇ ೧೭೩

ಬಿಡು ತೊಲಗೆಂದು ಹಿಂಗಿ ಹೆಱಸಾರ್ದೊಡೆ ನಿಲ್ಲದೆ ಬಂದು ಕೋಪದಿಂ
ಪಿಡಿದೆಳೆದೊಯ್ದು ಪೆರ್ಮೊಲೆಗಳಿಂದಿಱಿದೊತ್ತುವ ಪುಷ್ಪಮಾಲೆಯಿಂ
ಪೊಡೆದಧರಾಮೃತಂಗೊಡುವ ಮರ್ಮವನೊತ್ತುವ ನಾಣದಾಣದಿಂ
ತುಡುಕುವ ನಲ್ಲಳಂ ನೆನೆದು ಸಾಯದೊಡಂ ಬಡವಾಗಲೀಯರೇ ೧೭೪

ವನಮಂ ಕೋಗಿಲೆ ಜಕ್ಕವಕ್ಕಿ ಪಗಲಂ ಪೂಗೊಂಚಲಂ ತುಂಬಿ ಚಂ
ದ್ರನನಂಭೋನಿಧಿ ಬಂಧದಾನೆ ಮಲೆಯಂ ಕಾರ್ಗಾಲಮಂ ಸೋಗೆ ಮುಂ
ಬನಿಯಂ ಚಾತಕಪಕ್ಕಿ ಹಂಸೆ ಕೊಳನಂ ಪದ್ಮಂಗಳಾದಿತ್ಯನಂ
ನೆನೆವಂತಾಂ ನೆನೆವೆಂ ಸರೋಜಮುಖಿಯಂ ಶ್ಯಾಮಾಂಗಿಯಂ ನಲ್ಲಳಂ ೧೭೫

ಪಸದನವಾಂಪವೇಳೆಯೊಳೆ ರಾಗದಿನಾಂ ಬರೆ ಕಾಮುಮುರ್ಚಿ ತಾ
ನಸವಸದಿಂ ಕೊರಳ್ಗೆ ಕಳಕಾಂಚಿಯೊಪ್ಪುವ ತಾರಹಾರಮಂ
ಮಿಸುಪ ನಿತಂಬಕಂದುಗೆಯನೊಳ್ನಳಿತೋಳ್ಗೆ ರದಿಟ್ಟು ನಲ್ಮೆಯಿಂ
ಶಶಿಮುಖಿಯೆನ್ನನಪ್ಪಿ ಮನಮಂ ನಗಿಸಿರ್ಪಳನೆಂದು ಕಾಣ್ಬೆನೋ ೧೭೬

ಪಡೆದಿರ್ದಿರ್ಬ್ಬರ ಜೀವಮೊಂದೊಡಲೆ ಬೇಱುಂಬಂತುಟಂ ಮಾಡಿದಾ
ಮದನಂಗಾವುದು ದೋಷಮುಂತೆ ನುಡಿಯಲ್ಕೇನಕ್ಕುಮೇಂ ಪಾಪಮುಂ
ಬಿದಿಯೆಂಬಾಱಡಿಗಳ್ಳನಿಂಡೆ ಮುಳಿ[ಸಿಂ ಸಾ]ವರ್ಗೆಯಿನ್ನೊಮ್ಮೆ ದೈ
ವದಿನೆತ್ತಾನುಮದಿಂದುಬಿಂಬಮುಖಿಯಂ ಕಾಣ್ಬೊಂದು ಸೈತಕ್ಕುಮೋ ೧೭೭

ನಸುಬಿಸುಪೇಱಿ ಮೆಯ್ಮಗುಱಿ ಕೆತ್ತುವ ತಾಣಮೆ ಕೆತ್ತುವಂದಮಾ
ದುಸುರ್ಗಳೆ ನಾಸಿಕಾಮುಕುಳದಿಂದಿನಸುಂ ಪೊಱಪೊಣ್ಮೆ ತಳ್ತು ಸಂ
ಧಿಸಿದೆಮೆ ಬಿರ್ಚಿ ಕಣ್ಮಲರ್ಗಳುಳ್ಳಲರುತ್ತಿರೆ ಜಾನಕೀಯೆನು
ತ್ತು[1]ಸಿರ್ದುಸಿರ್ದೆಟ್ಟಿನಾ[1] ರಘುಕುಲಾಂಬರಚಂಡಮರೀಚಿ ಮೂರ್ಛೆಯಿಂ ೧೭೮

(ಪಂಪರಾಮಾಯಣಂ, ೯-೧೧೭)

ಕಲಹಂಸಾಲಸಯಾನೆಯುಂ ಮೃಗಮದಾಮೋದಾಸ್ಯನಿಶ್ವಾಸೆಯುಂ
ತಳಿರೇ ತಾವರೆಯೇ ಮದಾಳಿಕುಲಮೇ ಕನ್ನೆಯ್ದಿಲೇ ಮತ್ತಕೋ
ಕಿಳಮೇ ಕಂಡಿರೆ ಪಲ್ಲವಾಧರೆಯನಂಭೋಜಾಸ್ಯೆಯಂ ಭೃಂಗಕುಂ
ತಳೆಯಂ ಕೈರವನೇತ್ರೆಯಂ ಪಿಕರವಪ್ರಖ್ಯಾತೆಯಂ ಸೀತೆಯಂ ೧೭೯

(ಪಂಪರಾಮಾಯಣಂ, ೯-೧೧೮)

ಕೊಳಗಳೊಳೊರ್ಮೆ ಕೂಡುವೆಳಮಾವಿನ ಝೊಂಪದೊಳೊರ್ಮೆ ಜಾದಿಯೊ
ಳ್ಮೆಳೆಗಳೊಳೊರ್ಮೆ ತಣ್ಬುಱಿಲೊಳೊರ್ಮೆ ತಮಾಲದ ಸಾಲೊಳೊರ್ಮೆ ಶೀ
ತಳಕದಳೀಗೃಹಾವಳಿಯೊಳೊರ್ಮೆ ಕುಳಿರ್ಕೊಳುತಿಪ್ಪ ಕೇತಕೀ
ದಳಗಳೊಳೊರ್ಮೆ ಪೊತ್ತುಗಳೆದಂ ಕವಿತಾಕಳಿಕಾಮ್ರಕೋಕಿಳಂ ೧೮೦

(ಲೀಲಾವತಿ, ೪-೧೪)

---

[1] ಸಿರೆಸುತಿರ್ಪನಾ (ಪ)

